# ಕನ್ನಡ ಸಾಂಸ್ಕೃತಿಕ ಪರಿಸರ : ಬಂಗಾಳಿ ಅನುವಾದ ಕೃತಿಗಳು

ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ
ಸಲ್ಲಿಸಿರುವ ಮಹಾಪ್ರಬಂಧ


ಸಂಶೋಧಕರು

**ಪುಟ್ಟರಾಜ ವಿ.**

ಮಾರ್ಗದರ್ಶಕರು

**ಡಾ. ಕೆ.ಸಿ. ಶಿವಾರೆಡ್ಡಿ**

ನಿರ್ದೇಶಕರು
ಕುವೆಂಪು ಕನ್ನಡ ಅಧ್ಯಯನ ಕೇಂದ್ರ
ಕುಪ್ಪಳಿ, ಹಿರೇಕೊಡಿಗೆ ಅಂಚೆ
ತೀರ್ಥಹಳ್ಳಿ ತಾಲ್ಲೂಕು, ಶಿವಮೊಗ್ಗ ಜಿಲ್ಲೆ






ಭಾಷಾನಿಕಾಯ
**ಭಾಷಾಂತರ ಅಧ್ಯಯನ ವಿಭಾಗ**
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩೨೭೬
೨೦೧೮

# ಕನ್ನಡ ಸಾಂಸ್ಕೃತಿಕ ಪರಿಸರ : ಬಂಗಾಳಿ ಅನುವಾದ ಕೃತಿಗಳು

ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ
ಸಲ್ಲಿಸಿರುವ ಮಹಾಪ್ರಬಂಧ



ಸಂಶೋಧಕರು
**ಪುಟ್ಟರಾಜ ವಿ.**
ನೋ.ಸಂ. ೧೦೧೦

ಮಾರ್ಗದರ್ಶಕರು
**ಡಾ. ಕೆ.ಸಿ. ಶಿವಾರೆಡ್ಡಿ**
ನಿರ್ದೇಶಕರು
ಕುವೆಂಪು ಕನ್ನಡ ಅಧ್ಯಯನ ಕೇಂದ್ರ
ಕುಪ್ಪಳಿ, ಹಿರೇಕೊಡಿಗೆ ಅಂಚೆ
ತೀರ್ಥಹಳ್ಳಿ ತಾಲ್ಲೂಕು, ಶಿವಮೊಗ್ಗ ಜಿಲ್ಲೆ



ಭಾಷಾ ನಿಕಾಯ
ಭಾಷಾಂತರ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ – ೫೮೩ ೨೭೬

೨೦೧೮

# ಸಂಶೋಧಕರ ಪ್ರಮಾಣ ಪತ್ರ

'ಕನ್ನಡ ಸಾಂಸ್ಕೃತಿಕ ಪರಿಸರ : ಬಂಗಾಳಿ ಅನುವಾದ ಕೃತಿಗಳು' ಎಂಬ ಶೀರ್ಷಿಕೆಯ ಮಹಾಪ್ರಬಂಧವನ್ನು ಡಾ. ಕೆ.ಸಿ. ಶಿವಾರೆಡ್ಡಿ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿದ್ದೇನೆ. ಪ್ರಸ್ತುತ ಮಹಾಪ್ರಬಂಧದ ಯಾವುದೇ ಭಾಗವನ್ನು ಈ ಮೊದಲು ಬೇರೆ ಯಾವುದೇ ಉದ್ದೇಶ ಅಥವಾ ಪದವಿಗಳಿಗಾಗಲಿ ಸಲ್ಲಿಸಿರುವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

(ಪುಟ್ಟರಾಜ ಎ.)
ಸಂಶೋಧಕರು
ಭಾಷಾಂತರ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ

ಸ್ಥಳ : ವಿದ್ಯಾರಣ್ಯ
ದಿನಾಂಕ : 08.02.2018

## ಮಾರ್ಗದರ್ಶಕರ ದೃಢೀಕರಣ ಪತ್ರ

ಶ್ರೀ ಪುಟ್ಟರಾಜ ವಿ. ಅವರು **'ಕನ್ನಡ ಸಾಂಸ್ಕೃತಿಕ ಪರಿಸರ : ಬಂಗಾಳಿ ಅನುವಾದ ಕೃತಿಗಳು'** ಎಂಬ ಶೀರ್ಷಿಕೆಯ ಮಹಾಪ್ರಬಂಧವನ್ನು ಕನ್ನಡ ವಿಶ್ವವಿದ್ಯಾಲಯಕ್ಕೆ ಪಿಎಚ್.ಡಿ. ಪದವಿಗಾಗಿ ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ ಭಾಷಾಂತರ ಅಧ್ಯಯನ ವಿಭಾಗಕ್ಕೆ ಸಲ್ಲಿಸಿದ್ದಾರೆ. ಪ್ರಸ್ತುತ ಮಹಾಪ್ರಬಂಧದ ಯಾವುದೇ ಭಾಗವನ್ನು ಈ ಮೊದಲು ಯಾವುದೇ ಉದ್ದೇಶ ಅಥವಾ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಈ ಮೂಲಕ ದೃಢೀಕರಿಸುತ್ತೇನೆ.

**(ಡಾ. ಕೆ.ಸಿ. ಶಿವಾರೆಡ್ಡಿ)**
ನಿರ್ದೇಶಕರು
ಕುವೆಂಪು ಕನ್ನಡ ಅಧ್ಯಯನ ಕೇಂದ್ರ
ಕುಪ್ಪಳಿ, ಹಿರೇಕೊಡಿಗೆ ಅಂಚೆ
ತೀರ್ಥಹಳ್ಳಿ ತಾಲ್ಲೂಕು, ಶಿವಮೊಗ್ಗ ಜಿಲ್ಲೆ

ಸ್ಥಳ : ಕುಪ್ಪಳಿ
ದಿನಾಂಕ : 08.02.2018

# ಕೃತಜ್ಞತೆಗಳು

**'ಕನ್ನಡ ಸಾಂಸ್ಕೃತಿಕ ಪರಿಸರ : ಬಂಗಾಳಿ ಅನುವಾದ ಕೃತಿಗಳು'** ಎಂಬ ವಿಷಯದ ಸಂಶೋಧನಾ ಮಹಾಪ್ರಬಂಧವನ್ನು ಪಿಎಚ್.ಡಿ ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಅರ್ಪಿಸಲು ನನಗೆ ತುಂಬಾ ಸಂತೋಷವೆನಿಸುತ್ತಿದೆ. ನನ್ನ ಈ ಸಂಶೋಧನೆಯ ಹಾದಿಯಲ್ಲಿ ಹಾಗೂ ಇಲ್ಲಿವರೆಗು ಸಾಗಿ ಬಂದಿರುವ ಜೀವನದ ಹಾದಿಯಲ್ಲಿ ನೆರವಾದವರನ್ನು ಸ್ಮರಿಸುವುದು ನನ್ನ ಆದ್ಯ ಕರ್ತವ್ಯವೆಂದು ಭಾವಿಸುತ್ತೇನೆ.

ನನ್ನ ಬದುಕಿಗೆ ಒಂದು ಹೊಸ ತಿರುವು ನೀಡಿದ ಕಿ.ರಂ.ಮೇಷ್ಟ್ರಿಗೆ ಹಾಗೂ ಅವರ ಕುಟುಂಬ ವರ್ಗಕ್ಕೆ ಮೊದಲಿಗೆ ನನ್ನ ವಂದನೆಗಳನ್ನು ತಿಳಿಸುತ್ತೇನೆ. ಡಾ. ಕೆ.ಸಿ. ಶಿವಾರೆಡ್ಡಿ ಅವರಿಗೆ ಬಂಗಾಳಿ ಸಾಹಿತ್ಯದ ಮೇಲೆ ತುಂಬಾ ಪ್ರೀತಿ. ಈ ಪ್ರೀತಿಯಿಂದಲೇ ಬಂಗಾಳಿ ಭಾಷೆಯಿಂದ ಕನ್ನಡಕ್ಕೆ ಅನುವಾದಗೊಂಡ ಸಾಹಿತ್ಯ ಕೃತಿಗಳ ಮೇಲೆ ಪಿಎಚ್.ಡಿ ಸಂಶೋಧನೆಗೆ ನನ್ನನ್ನು ಪ್ರೇರೇಪಿಸಿ, ಸಂಶೋಧನೆಯ ಸಂದರ್ಭದಲ್ಲಿ ಪ್ರೀತಿಯಿಂದ ಮಾರ್ಗದರ್ಶನ ಮಾಡಿದ ಡಾ. ಕೆ.ಸಿ. ಶಿವಾರೆಡ್ಡಿಯವರಿಗೆ ಪ್ರೀತಿಯ ಕೃತಜ್ಞತೆಗಳನ್ನು ಸಲ್ಲಿಸುತ್ತೇನೆ.

ಹಂಪಿ ಕನ್ನಡ ವಿಶ್ವವಿದ್ಯಾಲಯದ ಪ್ರಸ್ತುತ ಮಾನ್ಯ ಕುಲಪತಿಗಳಾದ ಡಾ. ಮಲ್ಲಿಕಾ ಎಸ್. ಘಂಟಿ ಅವರಿಗೂ, ಕುಲಸಚಿವರಾದ ಡಾ. ಡಿ.ಪಾಂಡುರಂಗಬಾಬು ಹಾಗೂ ಅಧ್ಯಯನಾಂಗದ ಹಿಂದಿನ ನಿರ್ದೇಶಕರಾದ ಡಾ. ಅಶೋಕಕುಮಾರ ರಂಜೇರೆ, ಡಾ. ರವೀಂದ್ರನಾಥ ಮತ್ತು ಇಂದಿನ ನಿರ್ದೇಶಕರಾದ ಡಾ. ಶಿವಾನಂದ ವಿರಕ್ತಮಠ ಅವರಿಗೆ ನನ್ನ ಕೃತಜ್ಞತೆಗಳು.

ವಿದ್ಯಾರ್ಥಿಗಳ ಬದುಕನ್ನು ರೂಪಿಸಿ, ವಿದ್ಯಾರ್ಥಿಗಳ ಭವಿಷ್ಯದ ಮೇಲೆ ಅಪಾರ ಕಾಳಜಿಯನ್ನು ಹೊಂದಿರುವ ಭಾಷಾಂತರ ಅಧ್ಯಯನ ವಿಭಾಗದ ಮುಖ್ಯಸ್ಥರು ಮತ್ತು ಪ್ರಾಧ್ಯಾಪಕರಾದ ಡಾ. ಎಂ. ಉಷಾ ಅವರಿಗೆ, ಆಂತರಿಕ ವಿಷಯ ತಜ್ಞರಾದ ಪ್ರಾಧ್ಯಾಪಕ ಡಾ.ಎ.ಸುಬ್ಬಣ್ಣ ರೈ, ಭಾಷಾ ನಿಕಾಯದ ಡೀನ್ ಹಾಗೂ ಪ್ರಾಧ್ಯಾಪಕರಾದ ಡಾ. ಮೋಹನ ಕುಂಟಾರ್ ಎ., ಡಾ. ವಿಠಲರಾವ್ ಗಾಯಕ್ವಾಡ್ ಹಾಗೂ ಕತೆಗಾರರೂ, ಅನುವಾದಕರೂ ಆದ ಡಾ. ಕರೀಗೌಡ ಬೀಚನಹಳ್ಳಿ ಅವರುಗಳ ಸಲಹೆ ಮತ್ತು ಮಾರ್ಗದರ್ಶನಕ್ಕಾಗಿ ನನ್ನ ವಂದನೆಗಳನ್ನು ಸಲ್ಲಿಸುತ್ತೇನೆ.

ಇತಿಹಾಸ ವಿಭಾಗದ ಪ್ರಾಧ್ಯಾಪಕರಾದ ಡಾ. ಸಿ.ಆರ್. ಗೋವಿಂದರಾಜು ಅವರು ನನ್ನ ಮೇಲೆ ತೋರುವ ಕಾಳಜಿಯನ್ನು ಸ್ಮರಿಸುತ್ತೇನೆ. ಗ್ರಂಥಾಲಯದ ಮುಖ್ಯಸ್ಥರಾದ ಡಾ. ಎಚ್.ನಾಗವೇಣಿ, ಗಣಕಯಂತ್ರ ವಿಭಾಗದ ತಂತ್ರಜ್ಞರಾದ ಶ್ರೀ ಎಸ್.ಕೆ ವಿಜಯೇಂದ್ರ ಅವರಿಗೆ ನನ್ನ ಕೃತಜ್ಞತೆಗಳು. ಆತ್ಮೀಯರೂ, ಪ್ರಸಾರಾಂಗದ ಸಹಾಯಕ ನಿರ್ದೇಶಕರೂ, ಅನುವಾದಕರೂ ಆದ ಶ್ರೀ. ಬಿ.ಸುಜ್ಞಾನಮೂರ್ತಿ ಅವರು ಪ್ರಬಂಧದ ಕರಡನ್ನು ತಿದ್ದಿ ಉಪಯುಕ್ತ ಸಲಹೆಗಳನ್ನು ನೀಡಿ ಪ್ರಬಂಧದ ಮೌಲಿಕತೆಯನ್ನು ಹೆಚ್ಚಿಸಿದ್ದಾರೆ. ಇವರಿಗೆ ನನ್ನ ಪ್ರೀತಿಯ ಕೃತಜ್ಞತೆಗಳು.

ನನ್ನ ಈ ಸಂಶೋಧನಾ ಮಹಾ ಪ್ರಬಂಧದ ರೂಪುರೇಷೆಯಲ್ಲಿ ಸದಾ ನೆರವಾಗುತ್ತಿದ್ದ ಡಾ. ರಾಜಪ್ಪ ದಳವಾಯಿ, ಡಾ. ನಟರಾಜ್ ಹುಳಿಯಾರ್, ಎಚ್.ದಂಡಪ್ಪ, ಡಾ. ಟಿ. ವೆಂಕಟೇಶಮೂರ್ತಿ, ಎಲ್.ಎನ್. ಮುಕುಂದರಾಜ್ ಇವರಿಗೆ ನನ್ನ ಪ್ರೀತಿಯ ವಂದನೆಗಳು.

ಇಂತಹ ಒಂದು ಸಂಶೋಧನೆಯ ಸುದೀರ್ಘ ಪ್ರಯಾಣದಲ್ಲಿ ಕುಟುಂಬದ ಸಹಕಾರ ತುಂಬಾ ಮುಖ್ಯವಾಗಿರುತ್ತದೆ. ಚಿಕ್ಕಂದಿನಿಂದಲೂ ಅನೇಕ ಸಮಸ್ಯೆಗಳ ನಡುವೆಯೂ ನನ್ನ ಓದಿನ ಬಯಕೆಗೆ ಜೀವ ತುಂಬಿದ ನನ್ನ ತಾಯಿ ವೆಂಕಟನರಸಮ್ಮ, ತಂದೆ ವೆಂಕಟಾಚಲಪ್ಪ, ಹಿರಿಯಣ್ಣ ಶ್ರೀ ಆನಂದ ವಿ., ಅತ್ತಿಗೆ ಶ್ರೀಮತಿ ಗೀತಾ, ದ್ವಿತೀಯ ಸಹೋದರ ಶ್ರೀ ವೆಂಕಟೇಶ ವಿ., ಅತ್ತಿಗೆ ಶ್ರೀಮತಿ ಶಿಲ್ಪ, ಅಣ್ಣಂದಿರ ಮಕ್ಕಳಾದ ಕುಮಾರಿ ರಕ್ಷಿತ, ಕುಮಾರಿ ಚೈತ್ರ, ನಾಗೇಂದ್ರ ಇವರೆಲ್ಲರ ಪ್ರೀತಿಗೆ ನನ್ನ ಕೃತಜ್ಞತೆಗಳು. ಬಾಳ ಸಂಗಾತಿಯಾಗಲಿರುವ ನೇತ್ರಾ ಹಾಗೂ ಅವರ ಕುಟುಂಬದವರ ಸಹಕಾರವನ್ನು ಸ್ಮರಿಸುತ್ತೇನೆ.

ನಾನು ಸಚಿವಾಲಯ ಸೇವೆಗೆ ಸೇರಿದಂದಿನಿಂದ ನನ್ನ ಸಂಶೋಧನೆಗೆ ಪ್ರೋತ್ಸಾಹ ಹಾಗೂ ಸಹಕಾರ ನೀಡುತ್ತಾ ಬಂದಿರುವ ಅಧಿಕಾರಿಗಳು ಹಾಗೂ ಸಿಬ್ಬಂದಿ ವರ್ಗವನ್ನು ಸ್ಮರಿಸುವುದು ನನ್ನ ಕರ್ತವ್ಯವಾಗಿದೆ.

ಸರಳ ಪ್ರಾಮಾಣಿಕ ಅಧಿಕಾರಿಗಳೂ, ಸಾಹಿತ್ಯ ಪ್ರೇಮಿಗಳೂ, ಸೌಮ್ಯ ಸ್ವಭಾವದವರೂ ಆದ ತೋಟಗಾರಿಕೆ ಇಲಾಖೆಯ ಅಧೀನ ಕಾರ್ಯದರ್ಶಿಗಳಾದ ಮಾನ್ಯ ಶ್ರೀ ಆರ್. ಮಹದೇವ ಅವರು ನನ್ನ ಮೇಲೆ ತೋರುವ ಮಮತೆ ಕಾಳಜಿಯನ್ನು ಸದಾ ಸ್ಮರಿಸುತ್ತೇನೆ. ನನ್ನ ವೃತ್ತಿ ಬದುಕಿನಲ್ಲಿ ಒಮ್ಮೊಮ್ಮೆ ಎದುರಾಗುವ ತೊಂದರೆಗಳನ್ನು ಸುಲಭವಾಗಿ ಪರಿಹರಿಸಿ ನನ್ನ ಬದುಕಿಗೆ ಹೊಸ ಚೈತನ್ಯ ತುಂಬಿ ವಿದ್ವತ್‌ಪೂರ್ಣ ಕೆಲಸಗಳಿಗೆ ನೆರವಾದ ನಲ್ಮೆಯ ಇವರಿಗೆ ನನ್ನ ಪ್ರೀತಿಯ ಕೃತಜ್ಞತೆಗಳನ್ನು ಸಲ್ಲಿಸುತ್ತೇನೆ. ಸಚಿವಾಲಯದಲ್ಲಿ ಶಾಖಾಧಿಕಾರಿಗಳಾದ ಶ್ರೀ ರಾಜೇಂದ್ರ ಇವರ ಬಗೆಗೆ ಒಂದೆರಡು ಮಾತುಗಳನ್ನು ಹೇಳಬೇಕು. ಸಚಿವಾಲಯದಲ್ಲಿ ಶ್ರೀ ರಾಜೇಂದ್ರ ಅವರಿಂದ ಒಂದಿಲ್ಲೊಂದು ರೀತಿಯಲ್ಲಿ ಸಹಾಯ ಪಡೆಯದವರೇ ವಿರಳ ಎಂದು ಹೇಳಬಹುದು. ಕಷ್ಟದಲ್ಲಿರುವವರನ್ನು ಕಂಡಾಗ ಶಕ್ತಿ ಮೀರಿ ಸಹಾಯ ಮಾಡುವ ಇವರ ಅಂತಕರಣ ಹಾಗೂ ಉದಾರಗುಣ ಬೆರಗುಗೊಳಿಸುತ್ತದೆ. ಇಂತಹ ವಿದ್ವತ್ ಪ್ರಿಯರು, ನನ್ನ ಹಿತೈಷಿಗಳು, ಸ್ನೇಹಪರರು, ಆತ್ಮೀಯರು ಆದ ಶ್ರೀ ರಾಜೇಂದ್ರ ಅವರಿಗೆ ನನ್ನ ವಂದನೆಗಳು. ನಾನು ಅಧ್ಯಾಪಕನಾಗಬೇಕೆಂದು ಸದಾ ಹಾರೈಸುವ ತೋಟಗಾರಿಕೆ ಇಲಾಖೆಯ ಉಪ ಕಾರ್ಯದರ್ಶಿಗಳಾದ ಮಾನ್ಯ ಪ್ರಸನ್ನಕುಮಾರ್ ಜಿ.ಎಸ್. ಅವರಿಗೆ ನನ್ನ ಆತ್ಮೀಯ ಕೃತಜ್ಞತೆಗಳು.

ಸಿ.ಆ.ಸು.ಇಲಾಖೆಯ ಅಪರ ಮುಖ್ಯ ಕಾರ್ಯದರ್ಶಿಗಳಾದ ಮಾನ್ಯ ಶ್ರೀ. ಎಂ. ವೆಂಕಟರಸಪ್ಪ ಅವರ ಸಹಾಯ, ಸಹಕಾರವನ್ನು ನೆನೆಯುತ್ತೇನೆ. ಸಿ.ಆ.ಸು.ಇಲಾಖೆಯ ಉಪಕಾರ್ಯದರ್ಶಿಗಳು, ಸಾಹಿತ್ಯ ಪ್ರಿಯರೂ ಆದ ಮಾನ್ಯ ಶ್ರೀ. ಹೆಚ್.ಆರ್. ಪುಟ್ಟೇಗೌಡ ಅವರಿಗೆ ವಂದನೆಗಳನ್ನು ಸಲ್ಲಿಸುತ್ತೇನೆ. ಸಿ.ಆ.ಸು. ಇಲಾಖೆ ಸಿಬ್ಬಂದಿ ಶಾಖೆಯ ಅಧೀನ ಕಾರ್ಯದರ್ಶಿಗಳೂ, ಆತ್ಮೀಯರೂ. ನನ್ನ ಕಷ್ಟದ ಸಂದರ್ಭದಲ್ಲಿ ರಜೆಯನ್ನು ಮಂಜೂರು ಮಾಡಿ, ನನ್ನ ಮೇಲೆ ತುಂಬು ಮಮತೆಯಿಂದ ಸಂಶೋಧನೆಗೆ ಸಹಕರಿಸಿ ಮನದುಂಬಿ ಹಾರೈಸಿರುವ ಮಾನ್ಯ ಶ್ರೀ ಎಸ್.ವಿ.ಶಂಕರ್ ಅವರಿಗೆ ಪ್ರೀತಿಯ ಕೃತಜ್ಞತೆಗಳನ್ನು ಸಲ್ಲಿಸುತ್ತೇನೆ. ಸಿ.ಆ.ಸು.ಇಲಾಖೆಯ ಸಿಬ್ಬಂದಿ–೧, ಸಿಬ್ಬಂದಿ–೨ ಹಾಗೂ ಆಡಳಿತ–ಡಿ ಶಾಖೆಯ ಸಿಬ್ಬಂದಿ ವರ್ಗದವರಿಗೆ ನನ್ನ ಕೃತಜ್ಞತೆಗಳು.

ಸಿಆಸುಇ(ಲೆಕ್ಕಪತ್ರ–ಐಆರ್‌ಎಲ್‌ಎ) ಶಾಖೆಯ ಅಧೀನ ಕಾರ್ಯದರ್ಶಿಗಳೂ, ಆತ್ಮೀಯರೂ, ಸದಾ ನಗುಮೊಗದ, ತಿಳಿ ಹಾಸ್ಯಪ್ರಜ್ಞೆವುಳ್ಳವರೂ ಸಹೃದಯರಾದ ಮಾನ್ಯ ಶ್ರೀ ಬಿ. ಈಶ್ವರಪ್ಪ ಅವರಿಗೆ ಪ್ರೀತಿಯ

ಕೃತಜ್ಞತೆಗಳನ್ನು ಸಲ್ಲಿಸುತ್ತೇನೆ. ಸಿಆಸುಇ(ಲೆಕ್ಕಪತ್ರ–ಐಆರ್‌ಎಲ್‌ಎ) ಶಾಖೆಯ ಎಲ್ಲಾ ಸಿಬ್ಬಂದಿ ವರ್ಗದವರಿಗೆ ನನ್ನ ವಂದನೆಗಳನ್ನು ಸಲ್ಲಿಸುತ್ತೇನೆ.

ನನ್ನ ಸಂಶೋಧನೆಯ ಸಂಧರ್ಭದಲ್ಲಿ ನೆರವಾದ ಸ್ನೇಹಿತರ ಬಳಗ ತುಂಬಾ ದೊಡ್ಡದು. ಸಂಶೋದನೆಯ ಆರಂಭದಿಂದ ಮುಗಿಯುವವರೆಗೂ ನನ್ನ ಒತ್ತಡವನ್ನು ಕಡಿಮೆಯಾಗುವಂತೆ ನೋಡಿಕೊಂಡು ಕಷ್ಟದಲ್ಲಿ ಭಾಗಿಯಾದ ಕರ್ಣನಂತಹ ಗೆಳೆಯ ಶ್ರೀ. ರಂಗಣ್ಣ ಈ., ಅವರ ಪ್ರೀತಿಗೆ ನಾನು ಋಣಿ. ಬಾಲ್ಯದಿಂದಲೂ ಗೆಳೆಯರಾದ ಶ್ರೀ ಲಕ್ಷ್ಮಣ್ ಎಂ., ಶ್ರೀ ಸುಮಂತ ಎಲ್., ಶ್ರೀ ಸಂತೋಷ ಎಂ. ಅವರ ಪ್ರೀತಿ ಸಹಕಾರಕ್ಕೆ ನನ್ನ ವಂದನೆಗಳು. ಬದುಕಿನ ಏರಿಳಿತಗಳಲ್ಲಿ ಸದಾ ಭಾಗಿಯಾಗುವ ಶ್ರೀ ಸುರೇಶ್, ಶ್ರೀ ಮುರಳಿ, ಶ್ರೀ ರಾಜಣ್ಣ ಕೆ. (ಇತಿಹಾಸ ಉಪನ್ಯಾಸಕ), ಶ್ರೀ ಹರ್ಷ, (ರಾಜ್ಯಶಾಸ್ತ್ರ ಅಧ್ಯಾಪಕ) ಶ್ರೀ ಗಣೇಶ್, (ಕನ್ನಡ ಉಪನ್ಯಾಸಕ) ಪಿ.ಇ.ಎಸ್. ಕಾಲೇಜಿನ ಶ್ರೀ ಜಗದೀಶ್, ಶ್ರೀ ವಿಜಯಬಾಬು, ಶ್ರೀ ಕುಮಾರ್, (ಅರ್ಥಶಾಸ್ತ್ರ ಉಪನ್ಯಾಸಕ) ಡಾ. ಕೆ.ಎಲ್. ನಾಗೇಶ (ರಾಜ್ಯಶಾಸ್ತ್ರ ಉಪನ್ಯಾಸಕ), ಕಷ್ಟದಲ್ಲಿ ಹೆಗಲು ಕೊಟ್ಟು ನಿಲ್ಲುವ ಶ್ರೀ ಮೋಹನ್‌ರೆಡ್ಡಿ ಸಿ.ಎನ್., ಶ್ರೀ ನರಸಿಂಹಮೂರ್ತಿ ಜಿ.ಎನ್., ಲಕ್ಷ್ಮೀಕಾಂತ್ ಎಸ್.ಬಿ., ಶ್ರೀ ರಾಮಪ್ಪ ಜಿ., ಶ್ರೀ ಷಣ್ಮುಖಾನಂದ, ಕಡೂರಿನ ಮಿತ್ರ ಶ್ರೀ ಗಿರೀಶ್ ಇವರುಗಳ ಸ್ನೇಹ ಪ್ರೀತಿಗೆ ನಾನು ಋಣಿ.

ಸಚಿವಾಲಯದ ಆತ್ಮೀಯ ಗೆಳೆಯರಾದ ಶ್ರೀ ಪ್ರಶಾಂತ್ ವಿ ಧವಳೆ, ಶ್ರೀ ವೆಂಕಟೇಶ್ ಎಸ್., ಶ್ರೀ ಉಮಾಶಂಕರ್ ಜಿ.ಎಂ, ಶ್ರೀ ಸತೀಶ್ ಎನ್., ಇವರುಗಳ ಪ್ರೀತಿ ಸ್ನೇಹಕ್ಕೆ ನನ್ನ ವಂದನೆಗಳು. ಈ ಸಂಶೋಧನಾ ಪ್ರಬಂಧವನ್ನು ಅಚ್ಚುಕಟ್ಟಾಗಿ ಅಕ್ಷರ ಜೋಡಣೆ ಮಾಡಿಕೊಟ್ಟ ಶ್ರೀ ಜಿ.ವಿ. ಧನಂಜಯ ಅವರಿಗೆ ನನ್ನ ಪ್ರೀತಿಯ ಕೃತಜ್ಞತೆಗಳನ್ನು ಸಲ್ಲಿಸುತ್ತೇನೆ.

**– ಪುಟ್ಟರಾಜ ವಿ.**

# ಪರಿವಿಡಿ

## ಅಧ್ಯಾಯ - ಒಂದು

# ಅಧ್ಯಯನದ ಉದ್ದೇಶ, ಸ್ವರೂಪ ಮತ್ತು ವ್ಯಾಪ್ತಿ

ಅಧ್ಯಾಯ - ಒಂದು

# ಅಧ್ಯಯನ ಉದ್ದೇಶ, ಸ್ವರೂಪ ಮತ್ತು ವ್ಯಾಪ್ತಿ

ಐತಿಹಾಸಿಕವಾಗಿ ಮತ್ತು ಸಾಂಸ್ಕೃತಿಕವಾಗಿ (ಕರ್ನಾಟಕ) ಕನ್ನಡ ಸಾಹಿತ್ಯ ಹಾಗೂ (ಬಂಗಾಳ) ಬಂಗಾಳಿ ಸಾಹಿತ್ಯಕ್ಕೂ ಇರುವ ನೆಂಟು ಗಾಢವಾದುದು. ಅದರಲ್ಲೂ ೧೯ ಮತ್ತು ೨೦ನೆಯ ಶತಮಾನಗಳಲ್ಲಿ ಬಂಗಾಳಿ ಸಾಹಿತ್ಯದ ಅನುವಾದದ ಮೂಲಕ ಹಾಗೂ ಆಧ್ಯಾತ್ಮಿಕ ತತ್ವಗಳ ಮೂಲಕ ಕನ್ನಡ ಸಾಹಿತ್ಯ ಪಡೆದ ಪ್ರೇರಣೆ, ಪ್ರಭಾವ ಅಗಾಧವಾದುದು. ರಾಮಕೃಷ್ಣ ಪರಮಹಂಸ, ಅರವಿಂದರು, ವಿವೇಕಾನಂದ, ರಾಜಾರಾಂ ಮೋಹನರಾಯ್, ರವೀಂದ್ರನಾಥ ಠಾಕೂರು, ಬಂಕಿಮಚಂದ್ರ ಚಟರ್ಜಿ, ಶರಶ್ಚಂದ್ರ, ಮಹಾಶ್ವೇತಾದೇವಿ ಮುಂತಾದ ಆಧ್ಯಾತ್ಮಿಕವಾದಿಗಳು ಮತ್ತು ಲೇಖಕರಿಂದ ಕನ್ನಡ ಸಾಹಿತ್ಯ ಪಡೆದ ವಿಚಾರಧಾರೆ ಅರ್ಥಪೂರ್ಣವಾದುದು.

ಪರಮಹಂಸರಿಂದ ಕುವೆಂಪು, ಅರವಿಂದರಿಂದ ಬೇಂದ್ರೆ, ಕನ್ನಡ ನವೋದಯದ ಸಂದರ್ಭದಲ್ಲಿ ತಮ್ಮ ಸೃಜನಶೀಲ ಅಭಿವ್ಯಕ್ತಿಗೆ ಪಡೆದ ಪ್ರೇರಣೆ, ಪ್ರಚೋದನೆ ಐತಿಹಾಸಿಕವಾಗಿ ದಾಖಲಾಗಿದೆ. ಹಾಗೆಯೇ ಬಂಗಾಳದ ಲೇಖಕರಿಂದ ನೇರವಾಗಿ, ಅನುವಾದಿತ ಕೃತಿಗಳ ಮೂಲಕ ಆಧುನಿಕ ಕನ್ನಡ ಲೇಖಕರು ಪಡೆದ ಪ್ರೇರಣೆಯೂ ಸಾಂದರ್ಭಿಕವಾಗಿ ವ್ಯಕ್ತವಾಗಿದೆ. ಬಂಗಾಳದ ಈ ಮಹನೀಯರೆಲ್ಲಾ ಕನ್ನಡದ ಸಂವೇದನೆಯನ್ನು, ಕನ್ನಡದ ಪರಿಸರವನ್ನು ವೈಚಾರಿಕವಾಗಿ, ಶೈಕ್ಷಣಿಕವಾಗಿ ತಿದ್ದಿದವರು ಮತ್ತು ವಿಸ್ತರಿಸಿದವರು. ಹೊಸಗನ್ನಡದ ಅರುಣೋದಯದ ಸಂದರ್ಭದಲ್ಲಿ ಬಂಗಾಳದಿಂದ ಹರಿದು ಬಂದ ಹೊಸ ಸಾಹಿತ್ಯಕ ಪ್ರಕಾರಗಳು ಕನ್ನಡ ಪರಿಸರ, ಸಾಹಿತ್ಯ ಹಾಗೂ ಸಮಾಜಗಳಲ್ಲಿ ಆಧುನಿಕ ಪ್ರಜ್ಞೆ ಬೆಳೆಯಲು ಸಹಕಾರಿಯಾದವು. ಆರಂಭದಲ್ಲಿ ಬಿ. ವೆಂಕಟಾಚಾರ್ಯರ ಅನುವಾದದ ಮೂಲಕ ಬಂದ ಬಂಗಾಳಿ ಕಾದಂಬರಿಗಳು ಕನ್ನಡದಲ್ಲಿ ಕಾದಂಬರಿಯ ಅಭಿರುಚಿಯನ್ನು ಬೆಳೆಸಿದವು. ಬಿ. ವೆಂಕಟಾಚಾರ್ಯರು ಮತ್ತು ಎ.ಆರ್. ಕೃಷ್ಣಶಾಸ್ತ್ರಿಗಳು ಬಂಗಾಳಿ ಭಾಷೆ ಕುರಿತು ಕನ್ನಡಕ್ಕೆ ಒಂದು ತಳಪಾಯವನ್ನು ಹಾಕಿಕೊಟ್ಟರು. ಕೃಷ್ಣಶಾಸ್ತ್ರಿಗಳು ಬಂಕಿಮಚಂದ್ರರ ಕೃತಿಗಳನ್ನು ಬಂಗಾಳಿಯಲ್ಲಿಯೇ ಅಧ್ಯಯನ ಮಾಡಿ ಸ್ವತಂತ್ರವಾದ ಗ್ರಂಥವನ್ನೇ ರಚಿಸಿದ್ದು ಚಾರಿತ್ರಿಕವಾಗಿ ಮುಖ್ಯವಾದ ಸಂಗತಿ.

ಆರಂಭದಲ್ಲಿ ಬಂಗಾಳವು ಬ್ರಿಟೀಷರ ವಸಾಹತುಶಾಹಿ ಆಡಳಿತಕ್ಕೆ ಒಳಪಟ್ಟಿತ್ತು. ಆಗ ಬ್ರಿಟೀಷರ ಆಡಳಿತವನ್ನು ವಿರೋಧಿಸುವಲ್ಲಿ, ದೇಶದಲ್ಲಿ ಅಭಿಪ್ರಾಯವನ್ನು ಮೂಡಿಸುವಲ್ಲಿ ಬಂಗಾಳವು

ಮುಂಚೂಣಿಯಲ್ಲಿತ್ತು. ಸ್ವತಂತ್ರವಾದ ಪ್ರಜ್ಞೆಯೊಂದು ಆಗ ಮೂಡತೊಡಗಿತ್ತು. ಇಂಗ್ಲಿಷ್ ಭಾಷೆಯ ಶಿಕ್ಷಣ ಅವರಿಗೆ ಮೊದಲು ದೊರೆತಿತ್ತು.

ಬದಲಾವಣೆ ಮತ್ತು ಪುನರುಜ್ಜೀವನವನ್ನು ವಿಲೀನಗೊಳಿಸಿಕೊಂಡು ಹೊಸದಾಗಿ ಉದಯಿಸಿದ ಬಂಗಾಳದೊಡನೆ ಕನ್ನಡದ ಸಂಪರ್ಕ ಏರ್ಪಟ್ಟು, ಸ್ವಾತಂತ್ರ್ಯ ಚಳವಳಿ, ರಾಷ್ಟ್ರೀಯವಾದ ಕನ್ನಡಕ್ಕೆ ಹೊಸ ಸಾಹಿತ್ಯಕ ವಸ್ತುಗಳಲ್ಲಿ ಹೊಸ ಪ್ರಜ್ಞೆಯನ್ನು ತಂದುಕೊಂಡಿತು. ೧೯ನೇ ಶತಮಾನದಲ್ಲಿ ಭಾಷಾಂತರದ ಚಟುವಟಿಕೆಗಳು ತೀವ್ರವಾಗಿ ನಡೆದು ಬಂಗಾಳದೊಡನೆ ಕನ್ನಡ ಜಗತ್ತು ಸಾಂಸ್ಕೃತಿಕ ಸಂಬಂಧವನ್ನು ಹೆಚ್ಚಿಸಿಕೊಂಡಿತು. ಬಂಗಾಳಿ ಕಾದಂಬರಿಗಳ ಭಾರತೀಯ ಪ್ರಜ್ಞೆ, ಸ್ತ್ರೀಪಾತ್ರ ವಿವೇಚನೆ ಹಾಗೂ ಧರ್ಮ ಸೂಕ್ಷ್ಮಗಳನ್ನು, ವಿಧಿ ನಿಷೇಧಗಳನ್ನು ಸಂಪ್ರದಾಯಗಳನ್ನು ನಿರ್ವಹಿಸುವ ರೀತಿಯು ಆಕರ್ಷಣೀಯವಾಗಿ ಕನ್ನಡಕ್ಕೆ ಕಂಡಿತು. ಅದರಿಂದ ಬಂಗಾಳಿ ಕಾದಂಬರಿಗಳನ್ನು ಕನ್ನಡದ ಸಾಂಸ್ಕೃತಿಕ ಪರಿಸರಕ್ಕೆ ತರಲು ಯತ್ನ ನಡೆಯಿತು. ಪ್ರೀತಿ, ಪ್ರೇಮ, ವಿಘಟನೆ, ಕುಟುಂಬ, ಕೋರ್ಟ್, ಇಂಗ್ಲೀಷ್ ಶಿಕ್ಷಣ ಮತ್ತು ದಾಂಪತ್ಯಗಳನ್ನು ಚಿತ್ರಿಸುವ ಸಾಮಾಜಿಕ ಕಾದಂಬರಿಗಳನ್ನು ಕನ್ನಡಕ್ಕೆ ಮೊದಲ ಘಟ್ಟದಲ್ಲಿ ಅನುವಾದಿಸಲಾಯಿತು. ಇದರಿಂದ ಕನ್ನಡದಲ್ಲಿ ಆಧುನಿಕತೆಯ ಗಾಳಿ ಬೀಸಲು ಇದು ಪ್ರೇರಣೆಯಾಯಿತು. ಬಂಗಾಳಿಯಿಂದ ಬಿ. ವೆಂಕಟಾಚಾರ್ಯರೊಬ್ಬರೇ ಸುಮಾರು ೭೫ ಕೃತಿಗಳನ್ನು ಕನ್ನಡಕ್ಕೆ ತಂದಿದ್ದಾರೆ. ಇವುಗಳಲ್ಲಿ ಸುಮಾರು ೬೦ಕ್ಕೂ ಹೆಚ್ಚು ಕಾದಂಬರಿಗಳಿವೆ.

## ೧.೧. ಪ್ರವೇಶ

ಜಗತ್ತಿನಾದ್ಯಂತ ಭಾಷಾಂತರ ಅಧ್ಯಯನ ಇಂದು ಪ್ರಬಲವಾದ ಜ್ಞಾನಶಾಖೆಯಾಗಿ ಬೆಳೆಯುತ್ತಿದೆ. ಇದರ ಕಾರಣದಿಂದಾಗಿ ಅನೇಕ ವಿಶ್ವವಿದ್ಯಾಲಯಗಳಲ್ಲಿ ಅಧ್ಯಯನ ವಿಭಾಗಗಳನ್ನು ತೆರೆಯಲಾಗಿದೆ. ಹಾಗೆಯೇ ವಿಶ್ವವಿದ್ಯಾಲಯಗಳು ಭಾಷಾಂತರ ಸ್ವರೂಪವನ್ನು ಕುರಿತು ಸಂಶೋಧನೆಗೆ ಅವಕಾಶ ಕಲ್ಪಿಸುತ್ತಿವೆ. ಅನುವಾದ ಅಕಾಡೆಮಿಗಳು, ಹಲವಾರು ಸಂಘ ಸಂಸ್ಥೆಗಳು ಭಾಷಾಂತರ ಚಟುವಟಿಕೆಗಳಲ್ಲಿ ತಮ್ಮನ್ನು ತೊಡಗಿಸಿಕೊಂಡಿವೆ. ಇದರೊಂದಿಗೆ ಭಾಷಾಂತರ ಪರಿಕಲ್ಪನೆಯ ಸ್ವರೂಪ, ಪ್ರಭಾವ, ಪರಿಣಾಮಗಳನ್ನು ಕುರಿತು ಅಧ್ಯಯನ ಮಾಡಲು ಆಕರಗಳನ್ನು ಸಂಗ್ರಹಿಸುತ್ತಿವೆ. ಅಂತೆಯೆ ಭಾಷಾಂತರ ಕುರಿತ ದ್ವಿಭಾಷಿಕ ನಿಘಂಟುಗಳು, ಕೈಪಿಡಿಗಳು, ವಿಚಾರಗ್ರಂಥಗಳು, ವಿಶ್ವಕೋಶಗಳು ರಚನೆಯಾಗುತ್ತಿವೆ. ಶಾಲಾ ಕಾಲೇಜುಗಳಲ್ಲಿ ಭಾಷಾಂತರ ಪಠ್ಯಗಳ ಸೇರ್ಪಡೆ ಅಧ್ಯಯನಕ್ಕೆ ಒತ್ತುಕೊಡಲಾಗುತ್ತಿದೆ. ಆ ಮುಖೇನ ಉದ್ಯೋಗ, ಜೀವನ ನಿರ್ವಹಣೆಗೆ ಭಾಷಾಂತರ ಒಂದು ಲಾಭದಾಯಕವಾದ ಜ್ಞಾನಶಾಖೆ ಎಂಬ ಮನೋಭಾವವನ್ನು ರೂಪಿಸಲಾಗುತ್ತಿದೆ.

ಭಾಷಾಂತರ ಪ್ರಕ್ರಿಯೆ ಆಧುನಿಕ ಪರಿಕಲ್ಪನೆಯಾದರೂ ಇದರ ಚಿಂತನೆ ಪ್ರಾಚೀನವಾದುದೆ ಆಗಿದೆ. ಪಂಪನಿಂದ ಆರಂಭಗೊಂಡು ಪ್ರಸ್ತುತ ಸಂದರ್ಭದವರೆಗೂ ಭಾಷಾಂತರ ಬೇರೆ ಬೇರೆ

ಪ್ರಕ್ರಿಯೆಗಳಲ್ಲಿ ಅಭಿವ್ಯಕ್ತಗೊಳ್ಳುತ್ತಿದೆ. ಕನ್ನಡ ಸಾಹಿತ್ಯದ ಬೆಳವಣಿಗೆಯ ಜೊತೆ ಜೊತೆಯಲ್ಲಿಯೇ ಭಾಷಾಂತರ ಪ್ರಕ್ರಿಯೆಯೂ ಬೆಳೆದು ಬಂದಿರುವುದನ್ನು ಕನ್ನಡದ ಮೊದಲ ಕೃತಿಯಾದ 'ಕವಿರಾಜಮಾರ್ಗ'ದಲ್ಲಿ ಕಾಣಬಹುದು. ಹಿಂದೆಂದಿಗಿಂತಲೂ ಪ್ರಸ್ತುತ ಜಾಗತೀಕರಣ ಸಂದರ್ಭದಲ್ಲಿ ಭಾಷಾಂತರದ ಅಗತ್ಯ ಹೆಚ್ಚಾಗಿದೆ. ಹಾಗಾಗಿ ಭಾಷಾಂತರಕ್ಕೆ ಸಂಬಂಧಿಸಿದ ಅಧ್ಯಯನಗಳು ಮುಂಚೂಣಿಗೆ ಬರುತ್ತಿವೆ. ಎಲ್ಲ ಭಾಷೆಗಳಂತೆಯೆ ಕನ್ನಡದ ಸಂದರ್ಭದಲ್ಲಿಯೂ ಭಾಷಾಂತರ ಕುರಿತ ಅಧ್ಯಯನಗಳು ಸುಮಾರು ಎಂಬತ್ತರ ದಶಕದಿಂದ ಬಿರುಸಾಗಿ ಆರಂಭಗೊಂಡಿವೆ.

ಭಾರತದ ಸಂದರ್ಭದಲ್ಲಿ ಭಾಷಾಂತರವನ್ನು ಕುರಿತು ಚಿಂತಿಸಿದವರಲ್ಲಿ ರವೀಂದ್ರನಾಥ ಠಾಕೂರರು ಪ್ರಮುಖರಲ್ಲಿ ಒಬ್ಬರಾಗಿದ್ದಾರೆ. ಅವರು ಕರ್ನಾಟಕಕ್ಕೆ ಭೇಟಿ ನೀಡಿದ ಸಂದರ್ಭದಲ್ಲಿ ಮಾಸ್ತಿಯವರಿಗೆ ತಮ್ಮ ಸ್ವ-ಹಸ್ತಾಕ್ಷರವುಳ್ಳ ಕವನದ ಹಸ್ತಪ್ರತಿಯನ್ನು ನೀಡಿದರು. ಮಾಸ್ತಿಯವರು ಅದನ್ನು 'ರವೀಂದ್ರನಾಥ ಠಾಕೂರರು' ಕೃತಿಯ ಮೂಲಕ ಪ್ರಕಟಿಸಿದರು. ಈ ಕೃತಿಯಲ್ಲಿ ಅನುವಾದವನ್ನು ಕುರಿತು ಠಾಕೂರರು ಬರೆದ ಪದ್ಯದ ಸಾಲುಗಳು ಇಂತಿವೆ.

Thou hast made me known to friends
Whom I knew not,
Thou hast given me seats in homes
Not my own,
Thou hast brought the distant near
And made a brother of the stranger.

**ನನ್ನನರಿಯದ ಗೆಳೆಯರಿಗೆ ನನ್ನ ಪರಿಚಯಿಸಿದೆ ನೀನು;**
**ನನ್ನದಲ್ಲದ ಮನೆಗಳಲಿ ದೊರಕಿಸಿದೆ ಎಡೆಯನು ನನಗೆ;**
**ಎಲ್ಲೊ ದೂರದಲಿ ಇದ್ದವನ ನೀನೆನಗೆ ತಂದೆಯತಿಹತ್ತಿರಕೆ.**
**ಎಲ್ಲೊ ಅಪರಿಚಿತನಂತೆ ಇದ್ದವನ ಆಗಿಸಿದೆ ಸೋದರನಂತೆ.**

ಭಾಷಾಂತರದ ಪ್ರಣಾಳಿಕೆ(ಮ್ಯಾನಿಫೆಸ್ಟೊ)ಯಂತೆ ಈ ಕವನವಿದೆ. ದೂರ ದೇಶದ ಭಾಷಿಕನೊಬ್ಬನನ್ನು ಹತ್ತಿರವಾಗಿಸುವ ಭಾಷಾಂತರದ ಮಹತ್ವವನ್ನು ಠಾಕೂರರು ಮನಗಂಡಿದ್ದಾರೆ. ಒಂದು ಭಾಷೆಯ ಲೇಖಕನನ್ನು ಮತ್ತೊಂದು ಭಾಷೆಯಲ್ಲಿ ಆತ್ಮೀಯ ಹಾಗೂ ಜನಪ್ರಿಯಗೊಳಿಸುವ ಪ್ರಕ್ರಿಯೆಯನ್ನು ಮೇಲಿನ ಉಲ್ಲೇಖ ಸ್ಪಷ್ಟಗೊಳಿಸುತ್ತದೆ. ಇದರಿಂದ ಭಾಷಾಂತರದ ಮಹತ್ವ ಎಷ್ಟೆಂಬುದು ತಿಳಿಯುತ್ತದೆ.

## ೧.೨. ಅಧ್ಯಯನದ ಉದ್ದೇಶ

ಕ್ರೈಸ್ತ ಮಿಶನರಿಗಳು ಭಾರತದ ಸ್ಥಳೀಯ ಜನರ ಮನೋಭೂಮಿಕೆಯನ್ನು ತಿಳಿದುಕೊಳ್ಳಲು ಧಾರ್ಮಿಕ ಪಠ್ಯಗಳ ಮತ್ತು ಸ್ಥಳೀಯ ಪುರಾಣ, ಸಾಹಿತ್ಯ ಕೃತಿಗಳ ಸಂಪಾದನೆ ಹಾಗೂ ಅಧ್ಯಯನಕ್ಕೆ ಮುಂದಾದರು. ತಮ್ಮ ಅನುಕೂಲಕ್ಕಾಗಿ ಶಿಕ್ಷಣದ ಮೂಲಕ ದ್ವಿಭಾಷಿಕರನ್ನು ತರಬೇತು ಮಾಡಿದರು. ಆ ಮೂಲಕ ಹೊಸ ಉದ್ಯೋಗಗಳ ಅವಕಾಶ ಮಾಡಿಕೊಟ್ಟು ತಮ್ಮ ಉದ್ದೇಶಕ್ಕೆ ಅನುಗುಣವಾಗಿ ಭಾರತೀಯರನ್ನು ದುಡಿಮೆಗೆ ಹಚ್ಚಿದರು.

ಮದ್ರಾಸಿನಲ್ಲಿ ಜೆ.ಮೆಖರಲ್ ಎಂಬ ಅಧಿಕೃತ ಭಾಷಾಂತರಕಾರನ ನೇಮಕದ ಜೊತೆಗೆ ಸ್ಥಳೀಯ ಅನುವಾದಕವಾದ ಬಿ. ವೆಂಕಟಾಚಾರ್ಯ, ಎಂ.ಎಸ್. ಪುಟ್ಟಣ್ಣ, ಎಸ್.ಜಿ. ನರಸಿಂಹಾಚಾರ್ ಅಂಥವರನ್ನು ತಮ್ಮ ಯೋಜನೆಯೊಳಗೆ ನೇಮಿಸಿಕೊಂಡರು.[೧] ವಸಾಹತು ಸಂಸ್ಕೃತಿ ಮೊದಲು ಬಂಗಾಳದಲ್ಲಿ ತನ್ನ ಪ್ರಭಾವ ಪರಿಣಾಮಗಳನ್ನು ಉಂಟುಮಾಡಿತು. ಅದರ ಫಲವಾಗಿ ಹೊಸ ವಿಚಾರಗಳು ಸಾಹಿತ್ಯ ಕೃತಿಗಳು ಪ್ರಕಟವಾದವು. ಅಂಥ ಕೃತಿಗಳನ್ನು ದೇಶಿ ಭಾಷೆಗಳಿಗೆ ಆಯಾ ಭಾಷೆಗಳ ತಜ್ಞರು ಅನುವಾದಿಸಿಕೊಳ್ಳುವ ಪ್ರಕ್ರಿಯೆಯಲ್ಲಿ ತೊಡಗಿದರು.

ವಸಾಹತುಶಾಹಿಯ ಮುಖ್ಯ ಭಾಗವಾಗಿದ್ದ ಭಾಷಾಂತರ ಚಟುವಟಿಕೆಗಳು ನವವಸಾಹತುಶಾಹಿ ಕಾಲದಲ್ಲಿ ಇನ್ನೂ ಗಾಢವಾಗಿ ಪರಿಣಾಮಕಾರಿಯಾಗಿವೆ. ಈಗಾಗಲೇ ಪ್ರಸ್ತಾಪಿಸಿದಂತೆ ಭಾಷಾಂತರ ಕುರಿತ ಅಧ್ಯಯನಗಳು ಮುಖ್ಯವಾಗುತ್ತವೆ. ಕೇವಲ ಭಾಷೆಗಳ ನಡುವಿನ ಕೊಡುಕೊಳ್ಳುವಿಕೆ ಮಾತ್ರ ಭಾಷಾಂತರವಾಗಿರದೆ ಅದರಾಚೆಗೂ ಈ ಪ್ರಕ್ರಿಯೆಯ ಅಧ್ಯಯನಗಳು ವಿಸ್ತರಿಸಿಕೊಳ್ಳುತ್ತಿವೆ. ಇಂಥ ಅಧ್ಯಯನಗಳ ಸಾಂಸ್ಕೃತಿಕ ಸಂಕೀರ್ಣತೆಗಳನ್ನು ಹಾಗೂ ಅದರ ಸ್ವರೂಪ ಉದ್ದೇಶಗಳನ್ನು ಸಾಂಸ್ಕೃತಿಕ ರಾಜಕಾರಣದ ಹಿನ್ನೆಲೆಯಲ್ಲಿ ಶೋಧಿಸಿಕೊಳ್ಳಲಾಗುವುದು.

ವಸಾಹತುಶಾಹಿ ಹಾಗೂ ನವವಸಾಹತುಶಾಹಿ ಸಂದರ್ಭದ ದೇಶ ಭಾಷೆಗಳ ಭಾಷಾಂತರ ಪ್ರಕ್ರಿಯೆಗೆ ಒದಗಿಬಂದ ಪ್ರೇರಣೆ, ಪ್ರಭಾವ, ಒತ್ತಾಸೆಗಳು ಯಾವ ಬಗೆಯವು ಎಂಬುದನ್ನು ಅಧ್ಯಯನಕ್ಕೆ ಒಳಪಡಿಸಲಾಗಿದೆ ಹಾಗೂ ಈ ಅನುವಾದಗಳ ಸಾಂಸ್ಕೃತಿಕ ಮಹತ್ವವನ್ನು ಶೋಧಿಸಿಕೊಳ್ಳಲಾಗಿದೆ.

ಬ್ರಿಟಿಷರು ಸಾಂಸ್ಕೃತಿಕವಾಗಿ ಬೇರೂರಿದ್ದ ಏಕರಾಷ್ಟ್ರ ಕಲ್ಪನೆಗೆ ಪರ್ಯಾಯವೆಂಬಂತೆ ರಾಜಕೀಯವಾಗಿ ಭಾರತಕ್ಕೆ ಹಿಂದೂ 'ಏಕರಾಷ್ಟ್ರ' ಎಂಬ ಸ್ವರೂಪ ನೀಡಿದರು. ಈ ಹಿನ್ನೆಲೆಯಲ್ಲಿ ರಾಷ್ಟ್ರೀಯತೆ ಚಳವಳಿ ಸಂದರ್ಭದಲ್ಲಿ ಮುಂಚೂಣಿಯಲ್ಲಿದ್ದ ಬಂಕಿಮಚಂದ್ರರ 'ವಂದೇ ಮಾತರಂ' ಹಾಗೂ ರವೀಂದ್ರನಾಥ ಠಾಕೂರರ 'ಗೀತಾಂಜಲಿ' ಕೃತಿಗಳ ಸಮ್ಮೋಹಕ ಶಕ್ತಿಯ ಸೆಳೆತಕ್ಕೆ ಕನ್ನಡದ ಅನೇಕ ಲೇಖಕರು ಒಳಗಾದರು. ರಾಷ್ಟ್ರವ್ಯಾಪಿ ಸಂಚಲನವನ್ನುಂಟು ಮಾಡಿದ ಈ ಕೃತಿಗಳ ಸಾಂಸ್ಕೃತಿಕ ಮಹತ್ವವನ್ನು ಕಂಡುಕೊಳ್ಳುವುದು ಈ ಅಧ್ಯಯನದ ಮುಖ್ಯ ಉದ್ದೇಶವಾಗಿದೆ.

## ೧.೩. ಅಧ್ಯಯನದ ವ್ಯಾಪ್ತಿ

ಜಾಗತಿಕ ಮಟ್ಟದಲ್ಲಿ ಇಂದು ಭಾಷಾಂತರದ ಮಹತ್ವ ಕಂಡುಬರುತ್ತಿದೆಯಾದರೂ ವಸಾಹತು ಸಂದರ್ಭದಲ್ಲೇ ಇದರ ಚಿಂತನೆಗಳು ನಡೆದಿದೆ. ಹಾಗಾಗಿ ಸ್ವಾತಂತ್ರ್ಯಪೂರ್ವ ಮತ್ತು ನಂತರದಲ್ಲಿ ಬಂಗಾಳದಿಂದ ಕನ್ನಡ ಭಾಷೆಗೆ ಬಂದ ಸಾಹಿತ್ಯಿಕ, ರಾಜಕೀಯ, ಸಾಮಾಜಿಕ, ಶೈಕ್ಷಣಿಕ,

---

೧. ಅನಾವರಣ, ಪ್ರಧಾನ್ ಗುರುದತ್ತ, 'ಕನ್ನಡ ಸಾಹಿತ್ಯದ ಮೇಲೆ ರವೀಂದ್ರರ ಪ್ರಭಾವ', ೨೦೦೪.

ಧಾರ್ಮಿಕ, ಚಿಂತನೆಗಳ ಕೃತಿಗಳನ್ನು ಪರಿಶೀಲಿಸುವುದು ಮತ್ತು ಅನುವಾದಿತ ಕೃತಿಗಳಿಗೆ ಆಯಾ ಕಾಲದಲ್ಲಿ ಒದಗಿದ ಸಾಂದರ್ಭಿಕ ಮಹತ್ವವನ್ನು ಶೋಧಿಸಿಕೊಳ್ಳುವುದು ಈ ಅಧ್ಯಯನದ ವ್ಯಾಪ್ತಿಯೂ ಮಿತಿಯೂ ಆಗಿದೆ.

## ೧.೪. ಅಧ್ಯಯನದ ಸ್ವರೂಪ

ರಾಷ್ಟ್ರಮಟ್ಟದಲ್ಲಿ ಎರಡು ಸ್ಥಳೀಯ ಸಮಾಜಗಳ ಸಮಾಜೋ-ರಾಜಕೀಯ ಹಾಗೂ ಸಮಾಜೋ-ಸಾಂಸ್ಕೃತಿಕ ನೆಲೆಗಳನ್ನು ಅನುವಾದ ಕೃತಿಗಳ ಮತ್ತು ಕನ್ನಡದ ಸಾಹಿತ್ಯ ಕೃತಿಗಳ ತೌಲನಿಕ ಅಧ್ಯಯನ ವಿಧಾನಕ್ಕೊಳಪಡಿಸಿ ವಿಶ್ಲೇಷಣೆ ಮಾಡುವುದು ಅಧ್ಯಯನದ ಸ್ವರೂಪವಾಗಿದೆ.

'ಕನ್ನಡ ಸಾಂಸ್ಕೃತಿಕ ಪರಿಸರ: ಬಂಗಾಳಿ ಅನುವಾದಗಳು' ಎಂಬ ವಿಷಯವನ್ನು ಕುರಿತ ಈ ಅಧ್ಯಯನದ ಆರಂಭದಲ್ಲಿ ಸ್ಥೂಲವಾಗಿ ಈ ಕೆಳಗಿನ ಸೂಚಿತ ವಿಚಾರಗಳನ್ನು ಕುರಿತು ಅಧ್ಯಯನ ಮಾಡಲಾಗಿದೆ.

ಕನ್ನಡ ಸಾಂಸ್ಕೃತಿಕ ಪರಿಸರದ ಮೇಲೆ ಬಂಗಾಳಿ ಕೃತಿಗಳು ಉಂಟು ಮಾಡಿದ ಪ್ರೇರಣೆ ಪ್ರಭಾವವನ್ನು ಕಂಡುಕೊಳ್ಳುವುದು. ಈವರೆಗೆ ಅಲ್ಲಲ್ಲಿ ನಡೆದಿರುವ ಬಿಡಿ ಅಧ್ಯಯನಗಳನ್ನು ಪ್ರಸ್ತುತ ಅಧ್ಯಯನದಲ್ಲಿ ಗ್ರಹಿಸುವುದು. ಬಂಗಾಳಿ ಭಾಷೆಯಿಂದ ಕನ್ನಡಕ್ಕೆ ಬಂದ ಭಾಷಾಂತರ ಕೃತಿಗಳ ಸ್ವರೂಪ ಮತ್ತು ಬಗೆಗಳು. ಭಾಷಾಂತರ ಕೃತಿಗಳು ಉದ್ದೇಶಿತ ಸಂಸ್ಕೃತಿಯಲ್ಲಿ ವಹಿಸಿದ ನಿಯೋಗ/ಪ್ರಭಾವಗಳ ಪರಿಶೀಲನೆ ಮತ್ತು ವಿಶ್ಲೇಷಣೆಗೆ ಒಳಪಡಿಸುವುದು. ಪರಂಪರೆ ಮತ್ತು ಆಧುನಿಕತೆಯನ್ನು ಬಂಕಿಮಚಂದ್ರರು, ರವೀಂದ್ರನಾಥ ಠಾಕೂರರು ಮುಖಾಮುಖಿಯಾದ ರೀತಿ ಹಾಗೂ ಕನ್ನಡ ನವೋದಯ ಲೇಖಕರು ಅದಕ್ಕೆ ಹೇಗೆ ಪ್ರತಿಕ್ರಿಯಿಸಿದರು ಎಂಬುದನ್ನು ಕಂಡುಗೊಳ್ಳಲಾಗಿದೆ. ಕನ್ನಡ ಸಾಹಿತ್ಯ ಪರಂಪರೆಯ ಜೊತೆಯಲ್ಲಿ ಬಂಗಾಳಿ ಅನುವಾದ ಕೃತಿಗಳು ನಡೆಸಿದ ಅನುಸಂಧಾನಕ್ಕೆ ಹಲವು ಆಯಾಮಗಳಿವೆ. ಬಂಗಾಳಿ ಅನುವಾದ ಕೃತಿಗಳನ್ನು ಕಾಲ ಮತ್ತು ಪರಿಸರದ ಅಗತ್ಯವಾಗಿ ಅದನ್ನು ನೋಡುವುದು ಒಂದು ಆಯಾಮವಾದರೆ ಕನ್ನಡ ಸಾಹಿತ್ಯ ಮತ್ತು ಕನ್ನಡ ಪರಿಸರದ ಮೇಲೆ ಬಂಗಾಳಿ ಅನುವಾದ ಕೃತಿಗಳು ಪಡೆಯುವ ಮಹತ್ವದ ಆಯಾಮ ಇನ್ನೊಂದು ರೀತಿಯಾಗಿದೆ. ಸಂಸ್ಕೃತ ನಂತರದ ಇಂಗ್ಲಿಷ್ ಭಾಷೆಯ ಮೇಲಾಟದಲ್ಲಿ ದೇಶಿ ಭಾಷೆಗಳು ತಮ್ಮ ಅನನ್ಯತೆ ಮತ್ತು ಅಸ್ಮಿತೆಗಾಗಿ ನಡೆಸಿದ ಹೋರಾಟದ ಪ್ರಯತ್ನವೂ ಇದರಲ್ಲಿದೆ ಎಂಬುದನ್ನು ನಾವು ಗಮನಿಸಬಹುದು.

ಈ ವಿಚಾರಗಳ ಹಿನ್ನೆಲೆಯಲ್ಲಿ ಮೇಲೆ ಪ್ರಸ್ತಾಪಿಸಿರುವ ಅಂಶಗಳನ್ನು ಅಧ್ಯಾಯಗಳ ಚೌಕಟ್ಟಿನಲ್ಲಿ ಅಧ್ಯಯನಕ್ಕೆ ತೊಡಗಿಸಿಕೊಳ್ಳಲಾಗಿದೆ.

ಅಧ್ಯಾಯ – ಎರಡು

# ಅನುವಾದದ ಮಹತ್ವ

## ೨.೧. ಹಿನ್ನೆಲೆ

ಮೂಲ ಕವಿಯ ಅಂತರಾಳದ ಗ್ರಹಿಸುವಿಕೆ ತೀವ್ರವಾದಷ್ಟು ಮೂಲಕೃತಿ ಎಷ್ಟೋ, ಅನುವಾದಿತ ಕೃತಿಯೂ ಅಷ್ಟೇ ಶ್ರೇಷ್ಠತೆ ಹೊಂದುತ್ತದೆ. ಉದಾಹರಣೆಗೆ ಕಾಳಿದಾಸನ 'ಅಭಿಜ್ಞಾನ ಶಾಕುಂತಲ' ನಾಟಕವನ್ನು ಬಸವಪ್ಪಶಾಸ್ತ್ರಿಗಳು ಕನ್ನಡಕ್ಕೆ 'ಕರ್ಣಾಟಕ ಶಾಕುಂತಲ ನಾಟಕಂ' ಎಂದು ಭಾಷಾಂತರಿಸಿರುವರು. ಅನೇಕರು ಕಾಳಿದಾಸನ ನಾಟಕಗಳನ್ನು ಭಾಷಾಂತರಿಸಿದರೂ ಬಸವಪ್ಪಶಾಸ್ತ್ರಿಗಳ ಭಾಷಾಂತರವೇ ಶ್ರೇಷ್ಠವಾದುದು ಎಂದು ವಿದ್ವಾಂಸರು ಅಭಿಪ್ರಾಯಪಡುತ್ತಾರೆ. ಆ ಕಾರಣಕ್ಕೆ ಇವರಿಗೆ 'ಅಭಿನವ ಕಾಳಿದಾಸ' ಎಂಬ ಬಿರುದು ಮೈಸೂರು ದೊರೆಗಳಿಂದ ದೊರೆತಿದೆ.

೨೦ನೇ ಶತಮಾನದ ಈಚಿನ ನವೋದಯ ಕನ್ನಡ ಸಾಹಿತ್ಯದ ಇತಿಹಾಸವನ್ನು ಬರೆಯುವವರು ಬಂಗಾಳಿ, ಇಂಗ್ಲಿಷ್ ಮುಂತಾದ ಅನ್ಯಭಾಷಿಕ ಗ್ರಂಥಗಳನ್ನು ಕನ್ನಡಕ್ಕೆ ಅನುವಾದವಾಗಿರುವ ಸಾಹಿತ್ಯವನ್ನು ಅಧ್ಯಯನದ ಪರಿವಿಡಿಗೆ ಸೇರಿಸಿಕೊಳ್ಳಲೇಬೇಕಾಗಿರುತ್ತದೆ. ಹಾಗೆ ನೋಡಿದರೆ ಕನ್ನಡ ಕಾದಂಬರಿ ಪ್ರಕಾರಕ್ಕೆ ಬಂಗಾಳಿಯಿಂದ ಅನುವಾದಗೊಂಡ ಕಾದಂಬರಿಗಳೇ ಅತಿ ಹೆಚ್ಚಿನ ಸಂಖ್ಯೆಯಲ್ಲಿವೆ ಮತ್ತು ಶತಮಾನದ ಹಿಂದಕ್ಕೆ ಈ ಅನುವಾದ ಪ್ರಕ್ರಿಯೆ ಹೋಗಿ ನಿಲ್ಲುತ್ತದೆ.

ನನ್ನ ಅಧ್ಯಯನಕ್ಕೆ ಸೀಮಿತವಾಗಿ ಬಂಗಾಳಿ ಭಾಷೆಯ ಪ್ರಾತಿನಿಧಿಕ ಕಾದಂಬರಿಗಳನ್ನು ಒಳಪಡಿಸಿಕೊಂಡಿದ್ದೇನೆ.

'ಕಾದಂಬರಿ' ಎಂಬ ಶಬ್ದಕ್ಕೆ ಇಂಗ್ಲಿಷಿನಲ್ಲಿ 'Novel' ಎಂಬ ಸಮಾನ ಪದವಿದೆ. ಇಂಗ್ಲಿಷಿನ 'Novel'ಗೆ ಬಂಗಾಳಿಯಲ್ಲಿ ಉಪನ್ಯಾಸ ಎಂಬ ಅರ್ಥವನ್ನು ಹೇಳಲಾಗಿದೆ. 'ಉಪನ್ಯಾಸ' ಗದ್ಯ ಪ್ರಕಾರಕ್ಕೆ ಸೇರುವ ಸಾಹಿತ್ಯ ಪ್ರಕಾರ. ಇಂಗ್ಲಿಷ್ ಸಾಹಿತ್ಯ ಚರಿತ್ರೆಯಲ್ಲಿ ಹತ್ತೊಂಬತ್ತು ಇಪ್ಪತ್ತನೆಯ ಶತಮಾನಗಳನ್ನು ಕಾದಂಬರಿ ಯುಗವೆಂದೇ ಗುರುತಿಸಲಾಗಿದೆ. ಕಾದಂಬರಿ ಯುಗದ ಪ್ರಪ್ರಥಮ ಭಾಗದಲ್ಲಿ 'ಫಿಲ್ಡಿಂಗ್', 'ಸರ್ ವಾಲ್ಟರ್ ಸ್ಕಾಟ್', ಜನಪ್ರಿಯತೆ ಗಳಿಸಿದ್ದರು. ವಾಲ್ಟರ್‌ಸ್ಕಾಟ್ 'Reterenal' ತಾರುಣ್ಯದಲ್ಲಿ ಕವಿತೆಗಳನ್ನು ಬರೆದು ನಂತರ ಕಾದಂಬರಿಗಳನ್ನು

ಬರೆಯಲಾರಂಭಿಸಿದನು. ಆತನು ಬರೆದ ವೇವರ್ಲಿ(೧೮೧೪ ಕ್ರಿ.ಶ.) ಶೀರ್ಷಿಕೆ ಹೊಂದಿದ ಕಾದಂಬರಿ ಐತಿಹಾಸಿಕ ವಸ್ತುವುಳ್ಳದ್ದು. ಸ್ಕಾಟ್ ಈ ಜನಪ್ರಿಯತೆ ಗಳಿಸಿದ ಕಾದಂಬರಿಗೆ ಲೇಖಕನ ಹೆಸರನ್ನೇ ಹೇಳದೆ ಗೋಪ್ಯ ಮಾಡಿದ. ಕಾರಣ ಕಾದಂಬರಿಯನ್ನು ಬರೆಯುವುದು ಸಜ್ಜನಿಕೆಯ ಸ್ವಭಾವಕ್ಕೆ ಉಚಿತವಲ್ಲವೆಂಬುದೇ ಆಗಿತ್ತು. ವಿಕ್ಟೋರಿಯನ್ ಯುಗದ ಆ ಕಾಲದಲ್ಲಿ ಹೆಣ್ಣುಮಕ್ಕಳು ಕಾದಂಬರಿಗಳನ್ನು ಓದಲೇಬಾರದು ಎಂಬ ಮನೋಭಾವ ಓದುಗರಲ್ಲಿತ್ತು. ಸರ್ ವಾಲ್ಟರ್‌ಸ್ಕಾಟ್ ತನ್ನ ಕಾಲದಲ್ಲಿ ನಡೆಯುತ್ತಿದ್ದ ವಿದ್ಯಮಾನಗಳನ್ನು ಕುರಿತು ಬರೆಯುತ್ತಿದ್ದ ತನ್ನ ಪ್ರೀತಿಗೆ ಒಳಗಾಗಿದ್ದ ಸ್ಕಾಟ್‌ಲೆಂಡ್ ದೇಶದ ಇತಿಹಾಸವನ್ನು ಕಾದಂಬರಿಗಳಲ್ಲಿ ಚಿತ್ರಿಸುತ್ತಾನೆ. ಆತನಿಗೆ ಸ್ಕಾಟ್‌ಲೆಂಡಿನಲ್ಲಿ ಪ್ರಚಲಿತವಿದ್ದ ಗ್ರಾಮೀಣ ಉಪಭಾಷೆಯ ಪರಿಚಯವಿತ್ತು. ಕಾದಂಬರಿಯ ಪಾತ್ರಗಳು ಬಹು ಅರ್ಥಪೂರ್ಣವಾದ ಸಂಭಾಷಣೆಗಳನ್ನು ಹೇಳುತ್ತಿದ್ದವು. ಇದು ಕಾದಂಬರಿಗೆ ಒಂದು ಬಗೆಯ 'ದೇಸೀ'ತನವನ್ನು ತುಂಬಿಕೊಡುತ್ತಿತ್ತು. ಸ್ಕಾಟ್‌ಲೆಂಡಿನ ಇತಿಹಾಸವನ್ನು ಪೂರ್ಣ ರಚಿಸಿದಂತೆ ಆತನ ಕಾದಂಬರಿಗಳು ಬಹು ಮೌಲ್ಯಯುತವಾದ ಕೃತಿಗಳಾಗಿದ್ದವು. ಸರ್ ವಾಲ್ಟರ್ ಸ್ಕಾಟನು ಇಂಗ್ಲಿಷ್ ಕಾದಂಬರಿ ಪ್ರಕಾರದ ಯುಗಪ್ರವರ್ತಕನೆಂಬ ಕೀರ್ತಿಗೆ ಪಾತ್ರನಾದನು.

ಬ್ರಿಟಿಷರು ಭಾರತಕ್ಕೆ ಬಂದು ಬಂಗಾಳ ಪ್ರಾಂತ್ಯದ ಕಲ್ಕತ್ತದಲ್ಲಿ 'ಈಸ್ಟ್ ಇಂಡಿಯಾ ಕಂಪನಿ'ಯನ್ನು ತೆರೆದದ್ದು ಇತಿಹಾಸವಾಗಿದೆ. ಅಧ್ಯಯನಶೀಲರಾದ ಇಂಗ್ಲಿಷರು ತಮ್ಮ ನಾಡಿನಿಂದ ಜೊತೆಯಲ್ಲಿ ತಂದ ಆಂಗ್ಲಭಾಷೆಯ ಕಾದಂಬರಿ ಕೃತಿಗಳು ಬಂಗಾಳಿ ಜನಗಳ ಮನ ಸೆಳೆದವು. ಇಲ್ಲಿನ ವಂಗ ಜನರು ಇಂಗ್ಲಿಷಿನ ಕಾದಂಬರಿಗಳನ್ನು ಓದಿ ಅವುಗಳ ಪ್ರಭಾವಕ್ಕೊಳಗಾದರು. ಅಲ್ಪಕಾಲದಲ್ಲಿ ಬಂಗಾಳಿ ಭಾಷೆಯಲ್ಲಿ ಅನೇಕ ಶಾಸ್ತ್ರಗ್ರಂಥಗಳು, ಆರೋಗ್ಯ ಶಾಸ್ತ್ರ, ಭೌತಿಕ ವಿಷಯಾಧಾರಿತ ಪುಸ್ತಕಗಳು ಸೃಷ್ಟಿಯಾದುವು.

ಉಳಿದೆಲ್ಲ ಭಾರತೀಯ ಭಾಷೆಗಳಿಗಿಂತ ಬಂಗಾಳಿ ಭಾಷೆಯಲ್ಲಿ ಸಾಹಿತ್ಯಿಕ ಬಗೆಯ ಗ್ರಂಥಗಳೂ, ಶಾಸ್ತ್ರ ಗ್ರಂಥಗಳೂ ರಚನೆಯಾದವು. ಇದಕ್ಕೆ ಮುಖ್ಯ ಪ್ರೇರಣೆ ಬ್ರಿಟಿಷರ ಆಂಗ್ಲ ಗ್ರಂಥಗಳೇ ಆಗಿದ್ದವು. ಇಂಗ್ಲಿಷ್ ಸಾಹಿತ್ಯವನ್ನು ಅನುಸರಿಸಿ ಬಂಗಾಳಿ ಭಾಷೆಯಲ್ಲಿಯೂ ಗ್ರಂಥಗಳೂ ರಚನೆಗೊಂಡವು. ಇದೇ ಕಾಲದಲ್ಲಿ ಬಂಕಿಮಚಂದ್ರರು 'ದುರ್ಗೇಶನಂದಿನಿ' ಕಾದಂಬರಿಯನ್ನು ರಚಿಸಿದರು. ಬಂಕಿಮಚಂದ್ರರು ಬಂಗಾಳಿ ಸಾಹಿತ್ಯ ಚರಿತ್ರೆಯ ಕಾದಂಬರಿ ಪ್ರಕಾರದ ಆದ್ಯ ಪ್ರವರ್ತಕರಾದರು. ಬಂಕಿಮಚಂದ್ರರು ಕಾದಂಬರಿ ಪ್ರಕಾರವನ್ನು ಬಹಳ ಇಷ್ಟಪಟ್ಟು ರಚಿಸಿದಂತೆ ಕಾಣುತ್ತದೆ. ಬಂಗಾಳದ ಇತರ ಲೇಖಕರು ಸಂಸ್ಕೃತವನ್ನು ಚೆನ್ನಾಗಿ ಕಲಿತು ಪ್ರವೀಣರಾಗಿ, ನಾನಾ ರೀತಿಯ ಶಾಸ್ತ್ರಗಳನ್ನು, ಭಾರತೀಯ ತತ್ವಶಾಸ್ತ್ರಗಳನ್ನು ಸಂಸ್ಕೃತದಲ್ಲಿ ಬರೆದು ದೇಸಿಯ ಬಂಗಾಳಿ ಭಾಷೆಯನ್ನು ಒಂದು ರೀತಿಯಲ್ಲಿ ತಿರಸ್ಕಾರ ಮಾಡಿದರೆಂದೇ ಹೇಳಬಹುದು. ಆಗ ಬಂಕಿಮಚಂದ್ರರು ದಿಟ್ಟತನದಿಂದ ಲೌಕಿಕ ಮಾನವರ ಸ್ವಭಾವಾದಿ ಗುಣಗಳನ್ನು ಚಿತ್ರಿಸುವಂತೆ ಕಾದಂಬರಿಗಳನ್ನು ಬಂಗಾಳಿ ಭಾಷೆಯಲ್ಲಿ ಬರೆದರು.

ಕನ್ನಡಕ್ಕಿಂತ ಮುಂಚಿತವಾಗಿ ಬಂಗಾಳಿ ಭಾಷೆಯಲ್ಲಿ ಕೌಟುಂಬಿಕ ವಿಷಯಾಧಾರಿತ ಕಾದಂಬರಿಗಳು ರಚನೆಯಾದುವು ಎನ್ನಬಹುದು. ಕುಟುಂಬವು ಸಮಾಜದ ಒಂದು ಘಟಕವೆಂದೂ ಕುಟುಂಬ ಅಥವಾ ಸಂಘಜೀವಿಯಾದ ಮನುಷ್ಯ ಜೀವನ ನಡೆಸುವ ಸಂದರ್ಭದಲ್ಲಿ ವಹಿಸಬೇಕಾದ ರೀತಿ-ರಿವಾಜುಗಳನ್ನು ಸಾಹಿತ್ಯದ ಓದಿನ ಮೂಲಕ ಅರಿತುಕೊಳ್ಳಬೇಕೆಂಬ ಉದ್ದೇಶದಿಂದ ಲೇಖಕರು ಸರಳ ಗದ್ಯದಲ್ಲಿ ಕಾದಂಬರಿಗಳನ್ನು ರಚಿಸಿದರು. ಭಾರತೀಯ ಸಾಹಿತ್ಯ ಪರಂಪರೆಯ ಕಾದಂಬರಿ ಪ್ರಕಾರಕ್ಕೆ ಬಂಗಾಳಿ ಸಾಹಿತಿಗಳು ನೀಡಿದ ಕೊಡುಗೆ ಅನನ್ಯವಾದುದು. ಸಾಮಾಜಿಕ ಜೀವನದಲ್ಲಿ ವ್ಯಕ್ತಿಯಿಂದುಂಟಾಗುವ ಅತ್ಯಾಚಾರ, ದುರಾಚಾರ, ಅವ್ಯವಹಾರ, ನಡತೆ ಹೀನತ್ವಗಳಿಂದುಂಟಾಗುವ ತೊಂದರೆ ಹಾಗೂ ಸಮಸ್ಯೆಗಳು ಹೇಗೆ ಕುಟುಂಬ ಹಾಗೂ ಸಮಾಜದ ಬಂಧವನ್ನು ಛಿದ್ರಗೊಳಿಸುತ್ತವೆ ಎಂಬ ಸಂಗತಿಗಳಿಗೆ ಧ್ವನಿರೂಪ ಕೊಟ್ಟು ಉಂಟಾಗಬಹುದಾದ ಕೇಡುಗಳನ್ನು 'ಅರಿವಿ'ನ ಹಂತದಲ್ಲಿಯೇ ನಿವಾರಿಸಿಕೊಳ್ಳಬಹುದಾದ ಸಾಧ್ಯತೆಯನ್ನು ಕಾದಂಬರಿಗಳು ತೋರಿಸಿಕೊಟ್ಟವು. ಕಾದಂಬರಿ ಎನ್ನುವುದು ಕುವೆಂಪು ಅವರು ಹೇಳುವಂತೆ 'ಕರತಲ ರಂಗಭೂಮಿ', ಸಮಾಜದ ಸ್ಥಿತಿಗತಿಗಳಿಗೆ ಹಿಡಿಯುವ ಕನ್ನಡಿಯಿದ್ದಂತೆ, ಬೃಹದಾಕಾರದ ಸಾಮಾಜಿಕ ಸಮಸ್ಯೆಗಳನ್ನು ಸಾಂಕೇತಿಕವಾಗಿ ಕೈಯಲ್ಲಿ ಹಿಡಿದು ನೋಡುವಂತೆ, ಕನ್ನಡಿಯಲ್ಲಿನ ಪ್ರತಿಬಿಂಬದಂತೆ ಮಾನವ ಸ್ವಭಾವ ಗುಣಗಳನ್ನು ಮನುಷ್ಯರಿಗೆ ಮನದಟ್ಟು ಮಾಡಿಕೊಡುವ ಕೆಲಸ ಕಾದಂಬರಿಯ ರಚನೆಗಳಿಂದುಂಟಾಯಿತು. ಈ ಬಗೆಯ ಪ್ರಯತ್ನ ಬಂಗಾಳಿಯಲ್ಲಾದಂತೆ ಕನ್ನಡದಲ್ಲಿ ನಡೆಯಲಿಲ್ಲ ಎನ್ನಬಹುದು. ಅಂತಹ ಸಂದರ್ಭದಲ್ಲಿ ಬಂಗಾಳಿಯಿಂದ ರಚನೆಗೊಂಡ ಕಾದಂಬರಿಗಳನ್ನು ಕನ್ನಡಕ್ಕೆ ಭಾಷಾಂತರಿಸಿಕೊಳ್ಳುವ ಪ್ರಯತ್ನ ಯಶಸ್ವಿಯಾಯಿತು.

೧೯ನೇ ಶತಮಾನವು ಭಾರತದ ಸಂದರ್ಭದಲ್ಲಿ ಹಲವು ಸಂದಿಗ್ಧತೆಗಳ ಸಂಕೀರ್ಣ ಕಾಲಘಟ್ಟವಾಗಿದ್ದಿತು. ವಸಾಹತು ಪ್ರಕ್ರಿಯೆಗೆ ಒಳಗಾದ ಸ್ಥಳೀಯ ಪ್ರದೇಶವು ತನ್ನ ಭಾಷೆ, ಚರಿತ್ರೆ, ಅಭಿಮಾನ ಎಲ್ಲವನ್ನು ಮರೆತು ಅನುಕರಣೆ ಪ್ರವೃತ್ತಿಗೆ ಒಳಗಾಗಿದ್ದಿತು. ಅನುಕರಣೆಗೆ ಮೊದಲು ಒಳಗಾಗಿ ನಂತರ ಪ್ರತಿಭಟಿಸಿದ್ದು ಬಂಗಾಳವೇ ಆಗಿದೆ. ಇಂತಹ ಮಸುಕಿದ ಸಂದರ್ಭದಲ್ಲಿ ವಂಗ ನವೋದಯಕಾರರಾಗಿ ಬಂಕಿಮಚಂದ್ರರು ಉದಯಿಸಿ ಉಳಿದ ಪ್ರಾಂತ್ಯಗಳ ಮೇಲೆ ಪ್ರಭಾವ ಬೀರಿದವರಾಗಿದ್ದಾರೆ. ಅಂದಿನ ವಂಗ ಸಮಾಜದ ಸಾಹಿತ್ಯ ಕ್ಷೇತ್ರದಲ್ಲಿನ ಎಲ್ಲಾ ಚಲನೆಗಳಿಗೆ ಬಂಕಿಮಚಂದ್ರರೇ ಕಾರಣಕರ್ತರಾಗಿದ್ದರು.

> "ಬಂಕಿಮರಿಗಿಂತ ಹಿಂದೆ ಯಾರೂ ಬಂಗಾಳಿ ಭಾಷೆಯನ್ನು ಲಕ್ಷ್ಯ ಮಾಡುತ್ತಿರಲಿಲ್ಲ. ಸಂಸ್ಕೃತ ಪಂಡಿತರಿಗೆ ಅದು ಗ್ರಾಮ್ಯ ಭಾಷೆಯೆನಿಸಿತ್ತು. ಇಂಗ್ಲಿಷ್ ಬಲ್ಲವರಿಗೆ ಅದೊಂದು ಪ್ರಾಕೃತ ಜನರ ಭಾಷೆಯೆನಿಸಿತ್ತು. ಬಂಗಾಳಿ ಭಾಷೆಯು ಸಾರ್ವತ್ರಿಕವಾಗಬಹುದೆಂಬುದು ಆಗಿನವರು ಕನಸಿನಲ್ಲಿಯೂ ಕಾಣಲಾಗದ ಸಂಗತಿಯಾಗಿತ್ತು. ಹೀಗಿದ್ದುದರಿಂದ ಅವರು ಹೆಂಗಸರು - ಮಕ್ಕಳ ಉಪಯೋಗಕ್ಕಾಗಿಯಷ್ಟೇ ಅನುಗ್ರಹ ಬುದ್ಧಿಯಿಂದ, ಬಂಗಾಳಿಯಲ್ಲಿ ಬರೆಯುತ್ತಿದ್ದರು... ಇಂಥ ಕಾಲದಲ್ಲಿ ಅಂದಿನ ಉನ್ನತ ಶಿಕ್ಷಣ ಪಡೆದಿದ್ದ ಬಂಕಿಮಚಂದ್ರರು ತಮ್ಮ ಎಲ್ಲ ಜ್ಞಾನ-ಪ್ರೀತಿ-ಪ್ರತಿಭೆಯನ್ನು ಅಪ್ರಬುದ್ಧ ಬಂಗಾಳಿ ಭಾಷೆಯ ಚರಣದಲ್ಲಿ ಅರ್ಪಿಸಿದವರು."[೧]

---

೧. ಬಂಕಿಮಚಂದ್ರ, ಎ.ಆರ್.ಕೃಷ್ಣಶಾಸ್ತ್ರಿ, ಮೈಸೂರು ವಿಶ್ವವಿದ್ಯಾನಿಲಯ, ಪ್ರಥಮ ಮುದ್ರಣ ಮುನ್ನುಡಿ X, XI, ೧೯೮೫.

ರವೀಂದ್ರನಾಥ ಠಾಕೂರರು ಬಂಕಿಮಚಂದ್ರರನ್ನು ಕುರಿತು ಹೇಳಿರುವ ಮೇಲಿನ ಮಾತುಗಳು ೧೯ನೇ ಶತಮಾನದ ವಂಗಸಮಾಜದ ಪರಿಸ್ಥಿತಿಯನ್ನು ದರ್ಶನ ಮಾಡಿಸುತ್ತವೆ. ೧೯ನೇ ಶತಮಾನವು ಪಾಶ್ಚಾತ್ಯ ಸಾಹಿತ್ಯದಲ್ಲಿ ನಾವೆಲ್ ಯುಗ ಎಂದು ಪರಿಗಣಿಸಲ್ಪಟ್ಟಿದ್ದಿತು. ಇಂಗ್ಲಿಷ್ ಸಾಹಿತ್ಯದ ಪ್ರಭಾವದಿಂದ ದೇಶಿ ಭಾಷೆಗಳಲ್ಲಿ ಕಾದಂಬರಿಗಳು ರೂಪು ತಾಳಲು ಪ್ರಾರಂಭವಾಯಿತು. ಇಂಗ್ಲೆಂಡಿನ ಲೇಖಕರಾದ ಫೀಲ್ಡಿಂಗ್, ಸರ್ ವಾಲ್ಟರ್ ಸ್ಕಾಟ್‌ರಂತಹ ಲೇಖಕರು ರಮ್ಯ ಘಟನೆಗಳನ್ನು ತಮ್ಮ ಕೃತಿಗಳಲ್ಲಿ ರಚಿಸಿದರು. ಸ್ಕಾಟ್‌ರ ಕಾದಂಬರಿಗಳ ಪ್ರಭಾವ ಬಂಕಿಮಚಂದ್ರರ ಐತಿಹಾಸಿಕ ಕಾದಂಬರಿಗಳಲ್ಲಿ ಗುರುತಿಸಬಹುದಾಗಿದೆ. ಬಿ.ವೆಂಕಟಾಚಾರ್ಯರು 'ದುರ್ಗೇಶನಂದಿನಿ'ಯ ಪೀಠಿಕೆಯಲ್ಲಿ ಕಾದಂಬರಿ ಸಾಹಿತ್ಯ ಪ್ರಕಾರವು ಹದಿನೆಂಟನೆಯ ಶತಮಾನದ ಇಂಗ್ಲಿಷ್ ಸಾಹಿತ್ಯದಲ್ಲಿ ಹೆನ್ರಿ ಫೀಲ್ಡಿಂಗ್ ಮತ್ತು ವಾಲ್ಟರ್ ಸ್ಕಾಟ್ ಇವರಿಂದ ಆರಂಭವಾಯಿತೆಂದು ಹೇಳುತ್ತಾರೆ.

## ೨.೨. ಅನುವಾದಗಳ ಪೂರ್ವ ಕನ್ನಡ ಕಾದಂಬರಿಗಳ ಬೆಳವಣಿಗೆ ಹಂತ

> "ಹದಿನೆಂಟನೆಯ ಶತಮಾನದ ಅವಧಿಯಲ್ಲಿ ಸಂಸ್ಕೃತ ಸಾಹಿತ್ಯದಲ್ಲಿ ಕೆಲವು ದೊಡ್ಡ ಕಥಾನಕಗಳು ಕಾಣಿಸಿಕೊಂಡವು. ಸಮಗ್ರವಾದ ಕಥಾವಸ್ತು, ಕವಿ ಸಮಯಾಲಂಕಾರಗಳಿಂದ ಯುಕ್ತವಾದ ವರ್ಣನೆಗಳು ವೀರಶೃಂಗಾರ ರಸಗಳ ಪ್ರಾಧಾನ್ಯ, ದೇವದಾನವರನ್ನು ಒಳಗೊಂಡ ಅಲೌಕಿಕ ಪಾತ್ರಸೃಷ್ಟಿ, ವಾಸ್ತವತೆಗಳಿಗಿಂತ ಅದ್ಭುತವನ್ನು ಒಡಮೂಡಿಸುವ ಸನ್ನಿವೇಶ – ಇವು ಅಂದಿನ ಕಥಾನಕದ ಸ್ಥೂಲ ಲಕ್ಷಣಗಳು. ಗದ್ಯರೂಪವೇ ಅದರ ತಳಹದಿ."[೨]

ಅನುವಾದ ಪೂರ್ವದ ಕಾದಂಬರಿಯ ವಿಕಾಸವನ್ನು ಕುರಿತು ಶ್ರೀನಿವಾಸ ಹಾವನೂರರು ಮೇಲಿನ ಮಾತುಗಳಲ್ಲಿ ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ. ಇವೆಲ್ಲದರ ಪ್ರಯೋಗವೆಂಬಂತೆ ೧೯ನೆಯ ಶತಮಾನದಲ್ಲಿ ಬಗೆಬಗೆಯ ಕಾದಂಬರಿಗಳು ರೂಪು ತಾಳಿದುವು. ಗೋವಿಂದ ಪೈ ಅವರು ಮುಂಬೈ ಕನ್ನಡ ಸಾಹಿತ್ಯ ಸಮ್ಮೇಳನ (೧೯೫೦)ದ ತಮ್ಮ ಅಧ್ಯಕ್ಷ ಭಾಷಣದಲ್ಲಿ ಯಾದವ ಕಬ್ಬಿಗನ 'ಕಲಾವತೀ ಪರಿಣಯ' ಕನ್ನಡದ ಆದ್ಯ ಕಾದಂಬರಿಯೆಂದು ಗುರುತಿಸುತ್ತಾರೆ. ನಂತರ ಮುಮ್ಮಡಿ ಕೃಷ್ಣರಾಜರ (೧೮೨೦) 'ಸೌಗಂಧಿಕಾ ಪರಿಣಯ' ಭಾಷೆಯಲ್ಲಿ ಹೊಸಗನ್ನಡಕ್ಕೆ ಆದ್ಯತೆ ನೀಡಿದ ಕಾದಂಬರಿಯಾಗಿದೆ. ತದನಂತರ ಕೆಂಪುನಾರಾಯಣನ 'ಮುದ್ರಾಮಂಜೂಷ' (೧೮೨೩) ಹೊಸಗನ್ನಡದ ಪ್ರಥಮ ಐತಿಹಾಸಿಕ ಕಾದಂಬರಿಯಾಗಿದೆ. ಇವು ಅನುವಾದಗಳ ಪೂರ್ವದ ಕಾದಂಬರಿ ಬೆಳವಣಿಗೆಯ ಪ್ರಾರಂಭಿಕ ಹಂತವಾದರೆ ನಂತರದಲ್ಲಿ ಅನ್ಯಭಾಷೆಗಳಿಂದ ಕಾದಂಬರಿ ಪ್ರಕಾರ ಸಮೃದ್ಧವಾಗಿ ವಿಕಾಸವಾಗತೊಡಗಿತ್ತು.

೧. **ಸಂಸ್ಕೃತ:** ಸಂಸ್ಕೃತ ಬಾಣನ ಕಾದಂಬರಿಯು ಗಂಗಾಧರ ಮಡಿವಾಳೇಶ್ವರ ತುರಮರಿಯವರಿಂದ ೧೮೭೫ರಲ್ಲಿ ಅನುವಾದಗೊಂಡಿತು.

---

೨. ಹೊಸಗನ್ನಡದ ಅರುಣೋದಯ, ಶ್ರೀನಿವಾಸ ಹಾವನೂರ, ಕನ್ನಡ ಪುಸ್ತಕ ಪ್ರಾಧಿಕಾರ, ತೃತೀಯ ಮುದ್ರಣ, ೨೦೧೧.

೨. **ಮರಾಠಿ:** ಗಳಗನಾಥರು ಬಾಬಾ ಪದಮಂಜಿಯ 'ಯಮುನಾಬಾಯಿಯ ಸಂಚಾರ' (ಬಾಸೆಲ್‌ಮಿಶನ್ : ೧೮೬೯) ಮೊದಲ ಮರಾಠಿ ಕಾದಂಬರಿಯನ್ನು ಮರಾಠಿಯಿಂದ ಅನುವಾದಿಸಿದರು.

೩. **ಬಂಗಾಳಿ:** ಬಂಗಾಳಿಯಿಂದ ಕನ್ನಡಕ್ಕೆ ಬಂದ ಮೊದಲ ಕಾದಂಬರಿ ಬಿ.ವೆಂಕಟಾಚಾರ್ಯರು ಅನುವಾದಿಸಿದ ದುರ್ಗೇಶನಂದಿನಿ (೧೮೮೫) ಐತಿಹಾಸಿಕ ಕಾದಂಬರಿಯಾಗಿದೆ. ಈ ಕೃತಿಯನ್ನು ಅನುವಾದಿಸಿದುದರ ಉದ್ದೇಶ ಕುರಿತು 'A novel in the sense it is understood in English is not familiar to the Kanarese speaking public - ಎಂಬ ಸ್ಥಿತಿಯನ್ನು ಸರಿಪಡಿಸುವುದಾಗಿದ್ದಿತು. ವೆಂಕಟಾಚಾರ್ಯರ ಪ್ರಕಾರ 'ನಾವೆಲು'ಗಳ ಉದ್ದೇಶವೆಂದರೆ "ಸಮಾಜದ ಹಾಗೂ ಅದರ ಅಂಗಭೂತವಾದ ಮನುಷ್ಯನ ಚರಿತ್ರೆ, ನಡತೆಗಳಲ್ಲಿ ಕಂಡುಬರುವ ದುರ್ನಡತೆ ಮುಂತಾದವುಗಳನ್ನು ಉದಾಹರಣೆಗಳೊಡನೆ ಚಿತ್ರಿಸಿ ಅವುಗಳಿಂದುಂಟಾಗುವ ವಿಪತ್ತುಗಳನ್ನು ತೋರ್ಪಡಿಸಿ, ಪ್ರತಿ ಒಬ್ಬನೂ ಸಮಾಜದಲ್ಲಿ ಸದ್ಭಾವದಿಂದ ನಡೆದುಕೊಳ್ಳುವುದನ್ನು ತೋರ್ಪಡಿಸತಕ್ಕದಾಗಿದೆ."[೩] ವೆಂಕಟಾಚಾರ್ಯರ ಈ ಅಭಿಪ್ರಾಯದಲ್ಲಿ ಸಮಾಜದ ಗುಣ-ದೋಷಗಳನ್ನು ವಾಸ್ತವವಾಗಿ ಚಿತ್ರಿಸಿ ಸದ್ವರ್ತನೆಗೆ ಪೋಷಕವಾಗಬೇಕೆನ್ನುವ ದೃಷ್ಟಿಯು ಇಲ್ಲಿ ಕಂಡು ಬಂದಿದ್ದು, ಮುಂದಿನ ಅರ್ಧ ಶತಮಾನದವರೆಗೂ ಇದೇ ದೃಷ್ಟಿಯಿಂದ ಕಾದಂಬರಿಗಳ ರಚನೆಯು ಮುಂದುವರಿಯಿತೆಂಬುದನ್ನು ಗುರುತಿಸಬಹುದಾಗಿದೆ.

---

೩. ದುರ್ಗೇಶನಂದಿನಿ, (ಅನು) ಬಿ.ವೆಂಕಟಾಚಾರ್ಯ, ಬೆಂಗಳೂರು ಪ್ರಿಂಟಿಂಗ್ ಅಂಡ್ ಪಬ್ಲಿಷಿಂಗ್ ಕಂಪನಿ, ೧೯೩೦, ಮುನ್ನುಡಿ i.

# ಅಧ್ಯಾಯ – ೩

# ಬಂಕಿಮಚಂದ್ರ ಚಟರ್ಜಿ ಅವರ ಚಾರಿತ್ರಿಕ ಕಾದಂಬರಿ

೩.೧. ಪೀಠಿಕೆ

೩.೨. ದುರ್ಗೇಶನಂದಿನಿ: ಚಾರಿತ್ರಿಕ ಪ್ರಜ್ಞೆ

೩.೩. ವಿಮಲೆಯ ಪಾತ್ರ ಚಿತ್ರಣ

೩.೪. ಭಾಷಾಶೈಲಿ

೩.೫. ಆನಂದಮಠ: ರಾಷ್ಟ್ರೀಯ ಪ್ರಜ್ಞೆ

೩.೬. ಸ್ತ್ರೀ ಸಬಲೀಕರಣದ ವ್ಯಾಖ್ಯೆ

೩.೭. ವಂದೇಮಾತರಂ ಗೀತೆಯ ಮಹತ್ವ

ಅಧ್ಯಾಯ – ೩

# ಬಂಕಿಮಚಂದ್ರ ಚಟರ್ಜಿ ಅವರ ಚಾರಿತ್ರಿಕ ಕಾದಂಬರಿ

## ೩.೧. ಪೀಠಿಕೆ

ಬಂಗಾಳಿ ಸಾಹಿತ್ಯ ಚರಿತ್ರೆಯಲ್ಲಿ ತಮ್ಮ ಅಸಾಧಾರಣ ಪ್ರತಿಭೆಯಿಂದ ಅಚ್ಚಳಿಯದ ಸ್ಥಾನವನ್ನು ಬಂಕಿಮಚಂದ್ರರು (1838–1894) ಪಡೆದಿದ್ದಾರೆ. ಬದುಕಿರುವಾಗಲೇ ದಂತಕತೆಯಾಗಿದ್ದರೆನ್ನಬಹುದು. ಅಷ್ಟರ ಮಟ್ಟಿಗೆ ಅವರ ಎಲ್ಲಾ ಕೃತಿಗಳು ಅವರಿಗೆ ಕೀರ್ತಿಯನ್ನು ತಂದುಕೊಟ್ಟಿದ್ದವು. ಆನಂದಮಠ ಕಾದಂಬರಿಯಲ್ಲಿ ಬರುವ 'ವಂದೇ ಮಾತರಂ' ಗೀತೆಯು ಭಾರತೀಯರ ಮನದಲ್ಲಿ ಬಂಕಿಮಚಂದ್ರರು ಅಚ್ಚಳಿಯದೆ ಉಳಿಯುವಂತೆ ಮಾಡಿದೆಯೆನ್ನಬಹುದು.

ಬಂಕಿಮಚಂದ್ರರು 1838 ಜೂನ್ 27ರಂದು ಬಂಗಾಳ ಪ್ರಾಂತ್ಯದ ಕಾಂಟಾಲಪಾಡಾ ಗ್ರಾಮದಲ್ಲಿ ಜನಿಸಿದರು. ತಂದೆ ಯಾದವಚಂದ್ರ ಚಟ್ಟೋಪಾಧ್ಯಾಯರು ಡೆಪ್ಯೂಟಿ ಕಲೆಕ್ಟರಾಗಿ ನಿವೃತ್ತಿ ಹೊಂದಿದ್ದರು. ಬಂಕಿಮಚಂದ್ರರಿಗೆ ಮೂರು ಜನ ಸಹೋದರರಿದ್ದರು. ಮೊದಲನೆಯವನು ಶ್ಯಾಮಾಚರಣ, ಎರಡನೆಯವನು ಸಂಜೀವಚಂದ್ರ ಮೂರನೆಯವನು ಪೂರ್ಣಚಂದ್ರ.

ಬಾಲ್ಯಜೀವನವನ್ನು ಹಳ್ಳಿಯಲ್ಲಿಯೇ ಕಳೆದ ಬಂಕಿಮಚಂದ್ರರು ಅಲ್ಲಿನ ಶಾಲೆಯಲ್ಲಿ ಉಳಿದ ಮಕ್ಕಳಿಗಿಂತ ತುಂಬಾ ಬುದ್ಧಿವಂತರಾಗಿದ್ದರು. ತಂದೆ ಸರ್ಕಾರಿ ನೌಕರರಾಗಿದ್ದುದರಿಂದ, ವರ್ಗಾವಣೆ ಆಗುತ್ತಿತ್ತು. ವರ್ಗಾವಣೆ ಆದಾಗ ಬಂಕಿಮಚಂದ್ರ ಮೇದಿನಿಪುರವನ್ನು ಬಿಟ್ಟು ಹೂಗ್ಲಿಯ ಮೊಹಸಿನ್ ಕಾಲೇಜಿಗೆ ಸೇರುತ್ತಾರೆ. 1854ರಲ್ಲಿ ಸೀನಿಯರ್ ಸ್ಕಾಲರ್‌ಶಿಪ್ ಪರೀಕ್ಷೆಯಲ್ಲಿ ಮೊದಲನೆಯವರಾಗಿ ತೇರ್ಗಡೆ ಹೊಂದಿ, ವಿದ್ಯಾರ್ಥಿ ವೇತನವನ್ನು ಪಡೆಯುತ್ತಾರೆ.

'ಬಂಕಿಮ' ಎಂದರೆ 'ಬಗ್ಗಿರುವ' ಎಂದು ಅರ್ಥ, ಆದ್ದರಿಂದ 'ಬಂಕಿಮಚಂದ್ರ' ಎಂದರೆ ಅಭಿವೃದ್ಧಿಶೀಲನಾದ ಬಿದಿಗೆಯ ಚಂದ್ರ ಎಂದು ಅರ್ಥ. 'ಕಾಂಟಾಲಪಾಡಾ' ಎಂದರೆ 'ಹಲಸಿನ ಹಳ್ಳಿ' ಎಂದು ಅರ್ಥವಾಗುತ್ತದೆ.

## ೩.೨. ದುರ್ಗೇಶನಂದಿನಿ: ಚಾರಿತ್ರಿಕ ಪ್ರಜ್ಞೆ

ಬಂಕಿಮಚಂದ್ರರ ದುರ್ಗೇಶನಂದಿನಿ ಕಾದಂಬರಿಯು, ಐತಿಹಾಸಿಕ ಕಾದಂಬರಿಯಾಗಿದ್ದು, ಬಂಕಿಮಚಂದ್ರರ ಕಾದಂಬರಿಗಳಲ್ಲಿ ಅತ್ಯಂತ ಪ್ರಸಿದ್ಧವಾದುದಾಗಿದೆ. 'ದುರ್ಗೇಶನಂದಿನಿ' ಕಾದಂಬರಿಯು ಬಿ. ವೆಂಕಟಾಚಾರ್ಯರಿಂದ ೧೮೮೫ರಲ್ಲಿ ಪ್ರಥಮಬಾರಿಗೆ ಕನ್ನಡಕ್ಕೆ ಬಂಗಾಳಿಯಿಂದ ಅನುವಾದಗೊಂಡ ಕಾದಂಬರಿಯಾಗಿದೆ. ಬಿ. ವೆಂಕಟಾಚಾರ್ಯರಿಂದ ಆರಂಭಗೊಂಡ ಅನುವಾದ ಪರಂಪರೆಯು ಬಂಗಾಳಿ ಕಾದಂಬರಿಕಾರರಾದ ಬಂಕಿಮಚಂದ್ರ, ರವೀಂದ್ರನಾಥ ಠಾಕೂರ್, ಶರಚ್ಚಂದ್ರರ ಅನೇಕ ಕಾದಂಬರಿಗಳು, ಕಥೆ, ಕಾವ್ಯ, ನಾಟಕಗಳು ಕನ್ನಡಕ್ಕೆ ಅನುವಾದಗೊಂಡು ಕನ್ನಡ ಕಾದಂಬರೀ ಕ್ಷೇತ್ರವು ಸಮೃದ್ಧವಾಗುವಂತೆ ಅನುವಾದಕರು ಮಾಡಿದ್ದಾರೆ. 'ದುರ್ಗೇಶನಂದಿನಿ' ಕಾದಂಬರಿಕಾರ ಬಂಕಿಮಚಂದ್ರ ಚಟರ್ಜಿಯವರನ್ನು ಇಂಗ್ಲಿಷ್‌ರಿಗೆ ಪರಿಚಯಿಸಿದವರು. 'ಎಡ್ವಿನ್ ಆರ್ನಾಲ್ಡ್' ಎಂಬ ಆಂಗ್ಲ ಬರಹಗಾರರು. ಕ್ರಿ.ಶ.೧೮೮೫ರ ಹೊತ್ತಿನಲ್ಲಿ ಬಂಕಿಮಚಂದ್ರರು ಬಂಗಾಳಿ ಭಾಷಾ ಸಾಹಿತ್ಯದ ಕಾದಂಬರಿ ಬಗೆಯಲ್ಲಿ ಖ್ಯಾತನಾಮರಾಗಿದ್ದರು. ಬಿ.ವೆಂಕಟಾಚಾರ್ಯರು (ಇಂಗ್ಲಿಷಿನ) ಕಾದಂಬರಿ 'ದುರ್ಗೇಶನಂದಿನಿ' ಕಾದಂಬರಿಯನ್ನು ಕನ್ನಡ ಓದುಗರಿಗೆ ಅನುಕೂಲವಾಗುವಂತೆ ಕನ್ನಡ ಭಾಷೆಗೆ ಭಾಷಾಂತರಿಸಿದರು. ಆ ಸಂದರ್ಭದ ಕನ್ನಡದ ಗದ್ಯ-ನಡುಗನ್ನಡ ಶೈಲಿಯಿಂದ ಹೊರಬಂದು ಹೊಸ ಬಗೆಯ ಶೈಲಿಯನ್ನು ಕಂಡುಕೊಳ್ಳಲು ತವಕಿಸುತ್ತಿತ್ತು. ಇಂತಹ ಸಂದರ್ಭದಲ್ಲಿ ಬಿ.ವೆಂಕಟಾಚಾರ್ಯರ ಅನುವಾದವು ಕನ್ನಡ ಗದ್ಯ ಪ್ರಕಾರವಾದ ಕಾದಂಬರಿಗಳ ಬೆಳವಣಿಗೆಗೆ ನೆರವಾಯಿತು.

ಬಂಕಿಮಚಂದ್ರರ ಮೇಲೆ ಅಧ್ಯಯನ ನಡೆಸಿದ ಶ್ರೀ ಅ. ನಾರಾಯಣಸ್ವಾಮಿ ಅಯ್ಯರ್ ಅವರು ಬಂಕಿಮಚಂದ್ರರ ಕಾದಂಬರಿಗಳನ್ನು ಹೀಗೆ ಗುರುತಿಸುತ್ತಾರೆ.

"ಬಂಕಿಮಚಂದ್ರರ ಒಟ್ಟು ೧೪ ಕಾದಂಬರಿಗಳನ್ನು ಸ್ಥೂಲವಾಗಿ ಮೂರು ವರ್ಗಗಳಾಗಿ ವಿಂಗಡಿಸಬಹುದು.

ಅ. **ಐತಿಹಾಸಿಕ ವಸ್ತುವನ್ನು ಕುರಿತ ಕಾದಂಬರಿಗಳು:-** 'ದುರ್ಗೇಶನಂದಿನಿ', ಮೃಣಾಲಿನೀ, ಕಪಾಲಕುಂಡಲ, ರಾಜಸಿಂಹ ಮತ್ತು ಚಂದ್ರಶೇಖರ.

ಆ. **ಅಂದಿನ ಸಮಾಜದ ಸ್ಥಿತಿಯನ್ನು ಚಿತ್ರಿಸಿರುವ ಸಾಮಾಜಿಕ ಕಾದಂಬರಿಗಳು:-** ವಿಷವೃಕ್ಷ, ಇಂದಿರಾ, ರಜನೀ, ಕೃಷ್ಣಕಾಂತನ ಉಯಿಲು ಮತ್ತು ರಂಜಕ ಕಾದಂಬರಿಗಳು (Romance) ವರ್ಗಕ್ಕೆ ಸೇರತಕ್ಕವುಗಳಾದ ಯುಗಳಾಂಗುರೀಯ ಮತ್ತು ರಾಧಾರಾಣಿ.

ಇ. **ಐತಿಹಾಸಿಕ ಹಿನ್ನೆಲೆಯೊಡನೆ ರಚಿತವಾದ ಉಪದೇಶಾತ್ಮಕ ಕಾದಂಬರಿಗಳು:-** ಸೀತಾರಾಮ, ದೇವಿಚೌಧುರಾಣಿ, ಆನಂದಮಠ" ಎಂದು ವರ್ಗೀಕರಿಸುತ್ತಾರೆ.[೧] ಆರಂಭದ ಮೂರು ಕಾದಂಬರಿಗಳಲ್ಲಿ ಆಂಗ್ಲ ಸಾಹಿತ್ಯಕ್ಕೆ ಬಂಕಿಮರು ಋಣಿಯಾಗಿದ್ದರು ಎಂಬುದನ್ನು ದಾಖಲಿಸುತ್ತಾರೆ.

೧. 'ಕನ್ನಡ ನುಡಿ', ಶುಕ್ರವಾರ, ಅಕ್ಟೋಬರ್ ೨೦, ೧೯೪೪, ಸಂಪುಟ ೭, ಸಂಚಿಕೆ ೪.

'ದುರ್ಗೇಶನಂದಿನಿ'ಯಲ್ಲಿ ಮೂರು ವಿವಿಧ ಸ್ತರಗಳಿಗೊಳಪಟ್ಟ ಜನಾಂಗೀಯ ಸಂಸ್ಕೃತಿಯನ್ನು ಬಹುಸೂಕ್ಷ್ಮವಾಗಿ ವಿಶ್ಲೇಷಣೆಗೊಳಪಡಿಸಿದ್ದಾರೆ. 'ರಜಪೂತರು', 'ಯವನರು' ಹಾಗೂ 'ಪಠಾಣರು'. ಭರತ ಭೂಮಿಯ ಒಡೆತನಕ್ಕೆ ನಡೆಸಿದ ರಾಜಕೀಯ ವಿದ್ಯಮಾನಗಳನ್ನು ಕುರಿತು ನಲ್ವತ್ತಮೂರು ಪರಿಚ್ಛೇದಗಳಲ್ಲಿ ಬರೆದು ಮುಗಿಸಿದ್ದಾರೆ. ರಜಪೂತರ ದೇಶಾಭಿಮಾನ, ಧರ್ಮಾಭಿಮಾನ ಹುಟ್ಟಿನಿಂದ ರಕ್ತಗತವಾಗಿರುವ ಸ್ವಾಭಿಮಾನಗಳನ್ನು, ಪಾತ್ರ ಹಾಗೂ ಉಪಪಾತ್ರಗಳ ಮೂಲಕ ವ್ಯಾಖ್ಯಾನಿಸಿದರೆ, ಯವನರ ರಾಜ್ಯದಾಹ, ಆಡಳಿತ ನಡೆಸುವ ರಾಜಕೀಯ ಮಹತ್ವಾಕಾಂಕ್ಷೆ ಒಡೆದು ಆಳುವ ಕಾರ್ಯತಂತ್ರಗಳನ್ನು ವಿಶ್ಲೇಷಿಸಿದ್ದಾರೆ. ಉಳಿದ ಪಠಾಣರಲ್ಲಿ 'ರಕ್ತಗತವಾಗಿ ಬಂದಿರುವ ಐಷಾರಾಮಿ ಬದುಕಿನ ಹಂಬಲ, ಶತ್ರುವಿನಾಶದಲ್ಲಿ ನಿಷ್ಕರುಣೆ ಹಾಗೂ ಅವರ ಧೂರ್ತವರ್ತನೆಗಳನ್ನು ಓದುಗರ ಮನಮುಟ್ಟುವಂತೆ ಚಿತ್ರಿಸುತ್ತಾರೆ.

ಬಂಕಿಮಚಂದ್ರರು ತಮ್ಮ ಕೃತಿ, 'ದುರ್ಗೇಶನಂದಿನಿ'ಯಲ್ಲಿ ಭಿನ್ನ ಸಂಸ್ಕೃತಿಗಳ ಪ್ರಾತಿನಿಧಿಕ ಪಾತ್ರಗಳನ್ನು ಕಥಾವಸ್ತುವಿಗೆ ಅಳವಡಿಸಿಕೊಂಡಿರುವುದು ತುಂಬಾ ಪರಿಣಾಮಕಾರಿಯೆನಿಸಿದೆ. ರಜಪೂತ ಸಂಸ್ಕೃತಿಯ ಪ್ರತಿನಿಧಿಯಾಗಿ ತಿಲೋತ್ತಮೆಯನ್ನು, ಪಠಾಣ ಸಂಸ್ಕೃತಿಯ ಪ್ರತಿನಿಧಿಯಾಗಿ 'ಅಯೇಷಾ'ಳ ಪಾತ್ರವನ್ನು 'ಯವನ'(ಸಂಸ್ಕೃತಿಯ ಪ್ರತಿನಿಧಿಯಾಗಿ) ವಿಮಲೆಯನ್ನು ನಿಯಮಿಸಿಕೊಂಡಿದ್ದಾರೆ. 'ಮಹಿಳೆ' ಯಾವ ಧರ್ಮದ ಹಿನ್ನೆಲೆಯಿಂದ ಬಂದಿದ್ದರೂ ನಿಸರ್ಗದತ್ತ ತಾಯ್ತನ, ಕರುಣೆ, ಅನುಕಂಪಗಳ ಸಂಕೇತವಾಗುತ್ತಾಳೆ. ಬಂಕಿಮಚಂದ್ರರ ಪ್ರಸ್ತುತ ಕಾದಂಬರಿಯಲ್ಲಿ ವಿಮಲೆ ಸಹೃದಯರ ಮನಸ್ಸಿನಲ್ಲಿ ಬಹುಕಾಲ ಉಳಿಯುವ ಪಾತ್ರವಾಗಿದ್ದಾಳೆ. ಕಠಿಣ ಮತ್ತು ಮೃದುತ್ವಗಳ ಮಾದರಿಗಳಂತೆ ಕಾದಂಬರಿಯ ಪುರುಷ ಹಾಗೂ ಸ್ತ್ರೀ ಪಾತ್ರಗಳು ಅಭಿವ್ಯಕ್ತಗೊಳ್ಳುತ್ತವೆ. ಪೌರಾಣಿಕ ಕಥಾನಕಗಳಲ್ಲಿ ಬರುವ ಸಿದ್ಧ ಮಾದರಿ ಪಾತ್ರಗಳ ಗುಣ ಧರ್ಮಗಳನ್ನು ಆರೋಪಿಸದೆ ಲೋಕ ಸತ್ಯದ ಪರಿಧಿಯಲ್ಲಿ ವಾಸ್ತವತೆಯನ್ನು ಮೊಟ್ಟಮೊದಲ ಸಲವೆನ್ನುವಂತೆ ಪ್ರಯೋಗಶೀಲತೆಯನ್ನು ಮೆರೆದಿದ್ದಾರೆ.

ಇಲ್ಲಿನ ಕಾದಂಬರಿ ಪಾತ್ರಗಳಲ್ಲಿ ಬರುವ ಸ್ತ್ರೀಯರು ಚಿಂತನಾಶೀಲಗುಣವುಳ್ಳವರು, ತಮ್ಮ ಆಲೋಚನೆಗಳನ್ನು, ಸಂವೇದನೆಗಳನ್ನು ಪತ್ರದ ಮುಖೇನ ಬರಹರೂಪದಲ್ಲಿ ಅನುಕೂಲ ವ್ಯಕ್ತಿಗಳಿಗೆ ಸಂವಹನಗೊಳಿಸಬಲ್ಲ ಪ್ರಬುದ್ಧೆಯರಾಗಿದ್ದಾರೆ. ಕಥಾವಸ್ತುವಿಗೆ ಸೀಮಿತವಾಗಿರುವಂತೆ ಇತಿಹಾಸದ ವಿದ್ಯಮಾನಗಳನ್ನು ಸಂಯೋಜಿಸಿ, ಕಥೆಗೆ ತಕ್ಕಂತಹ ಅನುಪಮ ಬೆಡಗಿನ ಸ್ತ್ರೀ ಪಾತ್ರಗಳನ್ನು ಸೃಷ್ಟಿಸಿದ್ದಾರೆ. ಕಾದಂಬರಿಕಾರರಲ್ಲಿ ಸ್ತ್ರೀಸಂವೇದನೆಯ ತುಡಿತ ಹೆಜ್ಜೆ ಹೆಜ್ಜೆಗೂ ಮಿಡಿದಿರುವುದನ್ನು ಕಾಣುತ್ತೇವೆ. ಸ್ತ್ರೀ ವರ್ಣನೆಯ ವಿಚಾರಕ್ಕೆ ಬಂದರೆ 'ಅಯೇಷಾ', 'ವಿಮಲೆ', 'ತಿಲೋತ್ತಮೆ'ಯರು ಒಬ್ಬರಿಗಿಂತ ಒಬ್ಬರು ರೂಪಸಿಯರು. ತಿಲೋತ್ತಮೆ ತಾಳ್ಮೆ ಹಾಗೂ ನಿಷ್ಠೆಗೆ ರೂಪಕವಾದರೆ, ಅಯೇಷಾ ರೂಪ ಹಾಗೂ ಕರುಣೆಯ ಮೂರ್ತ ರೂಪ ತಳೆದಿದ್ದಾಳೆ. ಇನ್ನು ವಿಮಲೆ, ರೂಪ, ಗುಣ ಸಮಯ ಸಾಧಕತ್ವ, ತ್ಯಾಗ ಇತ್ಯಾದಿ ಅನೇಕ ಗುಣಧರ್ಮಗಳ ಪ್ರತಿನಿಧಿಯಾಗಿ ಮಿಂಚುತ್ತಾಳೆ. ತನ್ನ ಪ್ರೇಮನಾಯಕನನ್ನು ಕೊಂದ ಶತ್ರುವನ್ನು ಕೊಂದು ಪ್ರತೀಕಾರವೆಸಗುವ ದಿಟ್ಟ ಮಹಿಳೆಯಾಗಿ ವಿಮಲೆ ಕಂಡುಬರುತ್ತಾಳೆ. ಜಗತ್ಸಿಂಹ, ಕತಲೂಖಾನ, ಉಸ್ಮಾನ್‌ಖಾನ್, ಅಭಿರಾಮಸ್ವಾಮಿ

ಇತ್ಯಾದಿ ಪಾತ್ರಗಳು ಮುಖ್ಯವೆನಿಸಿದರೂ ಇವೆಲ್ಲವೂ ಸ್ತ್ರೀ ಪಾತ್ರಗಳಿಗೆ ಪೋಷಕ ಪಾತ್ರಗಳಂತೆ ವರ್ತಿಸುತ್ತವೆ.

ಬಂಕಿಮಚಂದ್ರರು ಕಾದಂಬರಿಯ ಕಥಾನಾಯಕಿಯ ರೂಪ ಲಾವಣ್ಯಗಳನ್ನು ಬಹಳ ಮುತುವರ್ಜಿ ವಹಿಸಿ, ವರ್ಣಿಸುತ್ತಲೇ ಓದುಗರಿಗೆ ಪರಿಚಯ ಮಾಡಿಸುತ್ತಾರೆ. ವೆಂಕಟಾಚಾರ್ಯರು ಆ ಭಾಗವನ್ನು ಸೊಗಸಾಗಿ ಕನ್ನಡಕ್ಕೆ ಅನುವಾದಿಸಿದ್ದಾರೆ:

> "ತಿಲೋತ್ತಮೆಯು ವಯಸ್ಸಿನಲ್ಲಿ ಹದಿನಾರು ವರುಷದವಳಾಗಿದ್ದಳು. ಅದುಕಾರಣ ಅವಳ ದೇಹವು ಪೂರ್ಣ ಪ್ರಾಯದವಳಾದ ರಮಣೀಯ ದೇಹದಂತೆ, ಸಂಪೂರ್ಣತೆಯನ್ನು ಹೊಂದಿರಲಿಲ್ಲ. ದೇಹ ಪ್ರಮಾಣದಲ್ಲಿಯೂ ಮುಖದಲ್ಲಿಯೂ ಸ್ವಲ್ಪ ಸ್ವಲ್ಪ ಬಾಲೆಯ ಭಾವವು ಕಂಡು ಬರುತ್ತಿದ್ದಿತ್ತು. ಲಲಾಟವು ಸುಘಟಿತವಾಗಿಯೂ, ಸುಂದರವಾದುದಾಗಿಯೂ ಇದ್ದಿತು; ಅಲ್ಪವಾಗಿರಲಿಲ್ಲ. ಅತಿವಿಶಾಲವಾಗಿಯೂ ಇರಲಿಲ್ಲ; ಅರ್ಧ ರಾತ್ರಿಯ ಬೆಳುದಿಂಗಳಿನಿಂದ ಶೋಭಾಯಮಾನವಾದ ನದಿಯೋಪಾದಿಯಲ್ಲಿ ಪ್ರಶಾಂತ ಭಾವಪ್ರಕಾಶವಾಗಿದ್ದಿತು. ಅವಳ ಲಲಾಟದ ಉಭಯ ಪಾರ್ಶ್ವಗಳಲ್ಲಿಯೂ ಅತಿ ನಿಬಿಡ ಕೃಷ್ಣವರ್ಣವುಳ್ಳ ಕುಂಚಿತವಾದ ಮುಂಗುರುಳು, ಭ್ರೂಯುಗ್ಮ, ಕಪಾಲ, ಗಂಡಸ್ಥಳ, ಭುಜ, ವಕ್ಷಸ್ಥಳ ಇವುಗಳ ಮೇಲೆ ಬಿದ್ದು ಅಲುಗಾಡುತ್ತಿದ್ದಿತು. ಮಸ್ತಕದ ಹಿಂಭಾಗದಲ್ಲಿ ಅಂಧಕಾರದಂತೆ ಕೇಶರಾಶಿಯು ತುರುಬುಕಟ್ಟಿ, ಸೊಗಸಾದೊಂದು ಮುಕ್ತಹಾರದಿಂದ ಕಟ್ಟಲ್ಪಟ್ಟಿದ್ದಿತು. ಆ ಲಲಾಟದ ತಲದಲ್ಲಿ ಭ್ರೂ ಯುಗ್ಮವು ಧನುರಾಕಾರವಾಗಿ ನಿಬಿಡವರ್ಣವಾಗಿ ಚಿತ್ರಕಾರನಿಂದ ತಿದ್ದಲ್ಪಟ್ಟಿದ್ದಂತಿದ್ದಿತು. ಆದರೆ ಮತ್ತೊಂದು ತಿಲಾಂಶದಷ್ಟು ಸ್ಥೂಲವಾಗಿದ್ದರೆ ದೋಷರಹಿತವಾದುದಾಗಿರುತ್ತಿದ್ದಿತ್ತು. ಪಾಠಕ ಮಹಾಶಯರೇ ನಿಮಗೆ ಚಂಚಲ ದೃಷ್ಟಿಯಲ್ಲಿ ಆಸೆಯಲ್ಲವೇ? ಹಾಗಿದ್ದರೆ ತಿಲೋತ್ತಮೆಯು ನಿಮಗೆ ಮನೋರಂಜನಿಯಾಗಲಾರಳು. ತಿಲೋತ್ತಮೆಯ ಕಣ್ಣುಗಳು ಅತಿ ಶಾಂತವಾದುವು, ಮಿಂಚಿನ ಹಾಗೆ ಚಂಚಲ ಕಟಾಕ್ಷವುಳ್ಳವಳಾಗಿರಲಿಲ್ಲ. ಅವಳ ಮುದ್ದಾದ ಕಣ್ಣುಗಳೆರಡೂ ಅತೀ ವಿಶಾಲವಾಗಿಯೂ ಶಾಂತವಾಗಿಯೂ ಜ್ಯೋತಿರ್ಮಯವಾಗಿಯೂ ಇರುವುವು. ಅವುಗಳ ವರ್ಣವಾದರೋ ಉಷಃಕಾಲದಲ್ಲಿ ಸೂರ್ಯೋದಯಕ್ಕೆ ಸ್ವಲ್ಪ ಮೊದಲು ಚಂದ್ರಾಸ್ತಸಮಯದಲ್ಲಿ ಆಕಾಶವು ಧಾರಣೆ ಮಾಡುವ ವರ್ಣದಂತೆ ಕೋಮಲವಾದ ನೀಲವರ್ಣದ್ದಾಗಿದ್ದಿತು. ಈ ಪ್ರಕಾರ ಕೋಮಲವಾಗಿಯೂ ಪ್ರಶಸ್ತವಾಗಿಯೂ ಇದ್ದಾ ಕಣ್ಣುಗಳಿಂದ ತಿಲೋತ್ತಮೆಯು ಒಮ್ಮೆ ದೃಷ್ಟಿಸಿ ನೋಡಿದರೆ ಆ ದೃಷ್ಟಿಯಲ್ಲಿ ಸ್ವಲ್ಪವಾದರೂ ಕಾಪಟ್ಯವು ತೋರದು, ತಿಲೋತ್ತಮೆಯು ಅಪಾಂಗ ದೃಷ್ಟಿಯಿಂದ ಎಂದರೆ, ಅರೆನೋಟದಿಂದ ನೋಡುವ ರೀತಿಯನ್ನರಿತಿರಲಿಲ್ಲ... ನಾಸಿಕವು ಎಸಳಾಗಿ ಚಂಪಕ ಪುಷ್ಪಕ್ಕೆ ಸಮಾನವಾಗಿದ್ದಿತು. ಓಷ್ಠಾಧರಗಳೆರಡೂ ಎರಡು ಗುಲಾಬಿ ಹೂವುಗಳು ರಸದಲ್ಲಿ ಮುಳುಗಿ ತೇಲುವಂತೆ ಸ್ವಲ್ಪ ಚಿಕ್ಕವಾಗಿ ದುಂಡಾಗಿ ಮಂದಸ್ಮಿತಯುಕ್ತವಾಗಿರುವವು."[೨]

ಹೀಗೆ ಸ್ತ್ರೀ ಸೌಂದರ್ಯ ವಿವರಣೆಯು ಸಂಪ್ರದಾಯ ಬದ್ಧತೆಯ ರೂಪವರ್ಣನೆಯನ್ನು ಸೂಕ್ಷ್ಮವಾಗಿ ಗಮನಿಸಿದರೆ ಅಲ್ಲಿ ಸುಂದರಿಯ ಚಂಚಲ ಸ್ವಭಾವವಿಲ್ಲದ ಗಂಭೀರ ಭಾವದ ವ್ಯಕ್ತಿತ್ವ ಓದುಗರಿಗೆ ಪರಿಚಯವಾಗುವುದರಲ್ಲಿ ಸಂದೇಹವಿಲ್ಲ. ಇಂತಹ ಸಮಯೋಚಿತ ಸಹಜ ವರ್ಣನೆಗಳು ಕಥಾ ನಾಯಕಿಯ ವರ್ಣನಾ ಶೈಲಿಗೆ ಸೇರುತ್ತವೆ. ಆಯಷೆ ಪಠಾಣ ಕತಲೂಖಾನನ ಮಗಳು, ರೂಪದಲ್ಲಿ ದಂತದ ಪುತ್ಥಳಿಯಂತಿದ್ದಳು.

---

೨. ಬಿ. ವೆಂಕಟಾಚಾರ್ಯ 'ದುರ್ಗೇಶನಂದಿನಿ', ಸಾಹಿತ್ಯ ಮಂದಿರ, ಬೆಂಗಳೂರು – ೧೯. ಡಿಸೆಂಬರ್ ೧೯೬೪, ಪುಟ ೩೩–೩೪.

"ಆಯಷೆಯು ಇಪ್ಪತ್ತೆರಡು ವರುಷದವಳಾಗಿರಬಹುದು. ಅವಳು ಪರಮಸುಂದರಿಯಾಗಿದ್ದಳು. ಅವಳಾ ಸೌಂದರ್ಯವನ್ನು ನಾಲ್ಕಾರು ಮಾತುಗಳಿಂದ ವರ್ಣಿಸುವುದಸಾಧ್ಯ. ತಿಲೋತ್ತಮೆಯು ರೂಪವತಿಯೇ ಅಹುದು; ಆದರೆ ತಿಲೋತ್ತಮೆಯ ಸೌಂದರ್ಯಕ್ಕೂ ಆಯಷೆಯ ಸೌಂದರ್ಯಕ್ಕೂ ತಾರತಮ್ಯವುಂಟು. ಸ್ಥಿರ ಯೌವನೆಯಾದ ವಿಮಲೆಯ ಸೌಂದರ್ಯ ಪ್ರಾಚುರ್ಯವೂ ಜನರನ್ನು ಮೋಹಗೊಳಿಸುತ್ತಿದ್ದಿತು. ಆದರದು ಆಯಷೆಯ ರೂಪರಾಶಿಗನುರೂಪವಾಗಿರಲಿಲ್ಲ. ಕೆಲವು ತರುಣಿಯರ ಸೌಂದರ್ಯವು ವಸಂತಕಾಲದ ನವಸ್ಫುಟ ಮಲ್ಲಿಗೆಯಂತೆ ವ್ರೀಡಾಸಂಕುಚಿತ ವಾಗಿಯೂ, ಕೋಮಲವಾಗಿಯೂ, ನಿರ್ಮಲವಾಗಿಯೂ, ಪರಿಮಳಯುಕ್ತವಾಗಿಯೂ ಇರುವುದಲ್ಲವೆ? ತಿಲೋತ್ತಮೆಯ ಸೌಂದರ್ಯವು ಅಂತಹುದಾಗಿದಿತ್ತು. ಮತ್ತೆ ಕೆಲವು ರಮಣೀಯರ ರೂಪವು ಅಪರಾಹ್ನದ ಸ್ಥಳಪದ್ಮದೋಪಾದಿಂಯೊಳು ವಾಸನೆರಹಿತವಾಗಿಂಯೂ ಮುದಿತೋನ್ಮುಖವಾಗಿಯೂ, ಶುಕ್ಲಪಲ್ಲವಗಳುಳ್ಳದಾಗಿದ್ದರೂ ಸುಶೋಭಿತವಾಗಿಯೂ ಅಧಿಕ ವಿಕಸಿತವಾಗಿಯೂ, ಅಧಿಕ ಪ್ರಭಾವ ವಿಶಿಷ್ಟವಾಗಿಯೂ ಮಧುರ ಪರಿಪೂರ್ಣವಾಗಿಯೂ ಇರುವುದು. ವಿಮಲೆಯು ಅಂತಹ ಸುಂದರಿಯಾಗಿದ್ದಳು. ಆಯಷೆಯ ಸೌಂದರ್ಯವಾದರೋ ನವ–ರವಿ–ಕರ ಪ್ರಫುಲ್ಲ–ಜಲ–ನಳಿನಿಯಂತೆ ಸುವಿಕಾಸಿತವಾಗಿಯೂ, ಸುವಾಸಿತ ರಸ ಪರಿಪೂರ್ಣ ಪ್ರದೀಪ್ತವಾಗಿ ಸಂಕುಚಿತವಾಗದೆಯೂ ವಿಶುಷ್ಕವಾಗದೆಯೂ ಇದ್ದಿತ್ತು".[೩]

ಬಂಕಿಮಚಂದ್ರರು... ಹೀಗೆ ಇತ್ಯಾದಿ ಮಧುರ ಮಾತುಗಳಿಂದ ಕಾದಂಬರಿಯ ಸ್ತ್ರೀ ಪಾತ್ರಗಳನ್ನು ವಿವರಿಸುತ್ತಾ ಹೋಗುತ್ತಾರೆ. ನಿಸರ್ಗದ ಚೆಲುವನ್ನು ಸ್ತ್ರೀಯರ ಸೌಂದರ್ಯವನ್ನೂ ಒಂದೇ ಅಳತೆಯಲ್ಲಿ ತೂಗುವ ಪರಂಪರಾನುಗತವಾದ ಸೌಂದರ್ಯ ಸಮೀಕ್ಷೆ ಬಂಕಿಮರದ್ದಾಗಿದೆ. ಸೌಂದರ್ಯಾನುಭೂತಿಯು ವಿಶಿಷ್ಟ ತಾತ್ವಿಕ ಸೂತ್ರಗಳಂತೆ ನಮ್ಮನ್ನು ಸೆಳೆಯುತ್ತವೆ. ಇಲ್ಲಿ ವರ್ಣಿಸಲಾಗಿರುವ ಸ್ತ್ರೀಯರು ಧರಿಸುವ ಆಭರಣಾದಿಗಳು ಅವರವರ ಅಭಿರುಚಿಯನ್ನು ಸ್ಥಿರಗೊಳಿಸುವುದರ ಜೊತೆಗೆ ಅವರ 'ಬೆಡಗು' ಆಭರಣಗಳಿಗೇ ಆಭರಣಗಳಂತೆ ಶೋಭಾಯಮಾನವನ್ನುಂಟು ಮಾಡುತ್ತವೆ.

ಆಯಷೆಯ ಬಗ್ಗೆ ಪಠಾಣ ಉಸ್ಮಾನಖಾನನು ಅನುರಾಗ ಹೊಂದಿದವನಾಗಿರುತ್ತಾನೆ. ಆದರೆ 'ಆಯಷೆ' ಜಗತ್ಸಿಂಹನ ಧೀರೋದಾತ್ತ ರೂಪಕ್ಕೆ ಮಾರುಹೋಗಿ ಗುಪ್ತ ಪ್ರಣಯಿನಿಯಾಗಿ ಬಿಡುತ್ತಾಳೆ. ಉಸ್ಮಾನಖಾನನನ್ನು ಸೋದರನೆಂದು ಸಂಬೋಧಿಸಿ ಆತನ ಪ್ರೇಮಭಾವಕ್ಕೆ ದಳ್ಳುರಿಯನ್ನಿಟ್ಟು ಬಿಡುತ್ತಾಳೆ. ಆಯಷೆ; "ನೀನು ನನ್ನ ಪ್ರಿಯತಮನಾದ ಸೋದರನೆಂದು ಪ್ರೀತಿಸುತ್ತಿರುವೆನು".[೪] ಆ ಮಾತು ಕಿವಿಗೆ ಬೀಳುತ್ತಲೇ ಉಸ್ಮಾನನ ಮುಖವು ಬಾಡಿ ಮಲಿನವಾಯಿತು. ಅವನು "ಅಯ್ಯೋ ಸೃಷ್ಟಿಕರ್ತನೆ? ಇಷ್ಟು ದಿನಗಳಾದ ಬಳಿಕ ಈ ಮಾತೆ!!! ಹಾ! ಕುಸುಮ

---

೩. ಬಿ.ವೆಂಕಟಾಚಾರ್ಯ, 'ದುರ್ಗೇಶನಂದಿನಿ', ಸಾಹಿತ್ಯಮಂದಿರ, ಹನುಮಂತನಗರ, ಬೆಂಗಳೂರು–೧೯, ಡಿಸೆಂಬರ್ ೧೯೬೪. ಪುಟ–೩೩–೩೪.

೪. ಬಿ.ವೆಂಕಟಾಚಾರ್ಯ, 'ದುರ್ಗೇಶನಂದಿನಿ', ಸಾಹಿತ್ಯಮಂದಿರ, ಹನುಮಂತನಗರ, ಬೆಂಗಳೂರು–೧೯, ಡಿಸೆಂಬರ್ ೧೯೬೪. ಪುಟ–೧೦೯.

ಮಧ್ಯದಲ್ಲಿ ಪಾಷಾಣವಿಟ್ಟಂತೆ, ಅಂತಹ ಕುಸುಮ ಸಮನಾದ ದೇಹದಲ್ಲೆಂತಹ ಪಾಷಾಣಮಯನಾದ ಹೃದಯವನ್ನಿಟ್ಟೆ? ಎಂದುಕೊಂಡು ಸಂಕಟದಿಂದ ಆಯಷೆಯನ್ನವಳ ತಾಯಿಯ ಕೊಠಡಿಯ ಬಾಗಿಲವರೆಗೆ ಕರೆತಂದು ಬಿಟ್ಟು ಹಿಂತಿರುಗಿ ಹೊರಟುಹೋದನು."[೫]

'ಆಯೆಷೆ' ರೂಪಕ್ಕೂ-ಗುಣಕ್ಕೂ ತಾರತಮ್ಯವಿಲ್ಲ. ಜಗತ್ಸಿಂಹನು ಗಾಯಾಳುವಾಗಿ ನರಕ ಯಾತನೆಗಳನ್ನು ಅನುಭವಿಸುತ್ತಿದ್ದಾಗ, ಆಯೆಷೆ ತೋರಿದ ಮಾನವೀಯ ಅನುಕಂಪ ಮತ್ತು ನಡೆಸಿದ ಶುಶ್ರೂಷೆ ವಿಶ್ವಕ್ಕೆ ಒಂದು ರೀತಿಯಲ್ಲಿ ಮಾದರಿಯಾದ ಸ್ತ್ರೀಯರ ತ್ಯಾಗ ಹಾಗೂ ಸೇವಾ ಮನೋಭಾವದ ಪ್ರತಿರೂಪದಂತೆ ನಿರೂಪಣೆಗೊಂಡಿದೆ. ಮಾದರಿಯಾದ ಸ್ತ್ರೀತ್ವದ ಪರಾಮರ್ಶೆಯಂತೆ ನಿರೂಪಣೆಗೊಂಡಿದೆ. ಆಯೆಷೆ ತನ್ನ ರಾಜಕುಮಾರಿತನದ ಬಿಂಕ ಬಿಗುಮಾನಗಳನ್ನು ಮೀರಿ ನಡೆದು ತೋರಿದ ವರ್ತನೆ ಸಹೃದಯರ ಹೃನ್ಮನಗಳನ್ನು ಆರ್ದ್ರಗೊಳಿಸುತ್ತದೆ. ಭಗ್ನಪ್ರೇಮಿಯಾದ 'ಉಸ್ಮಾನ್‌ಖಾನ್' ಹೇಳುವ ವಿಷಾದದ ಉದ್ಗಾರಗಳು ಪ್ರೇಮಭಗ್ನತೆಯ ಧ್ವನಿರೂಪಗಳೇ ಹೊರತು, ಆಯೆಷಾ ಕಠಿಣಹೃದಯದವಳಲ್ಲ. "ಹಾ! ಕುಸುಮ ಮಧ್ಯದಲ್ಲಿ ಪಾಷಾಣವಿಟ್ಟಂತೆ; ಅಂತಹ ಕುಸುಮ ಸಮನಾದ ದೇಹದಲ್ಲೆಂತಹ ಪಾಷಾಣಮಯವಾದ ಹೃದಯವನ್ನಿಟ್ಟೆ"[೬] ಎಂದು ಸೃಷ್ಟಿಕರ್ತನನ್ನು ಆಕ್ಷೇಪಿಸುತ್ತಾನೆ. ಅವು ಭಗ್ನಪ್ರೇಮಿಯ ಹತಾಷ ಉದ್ಗಾರಗಳೇ ಹೊರತು, ಆಯೆಷೆಗೆ ಅವು ಹೋಲಿಕೆಯಾಗದ ನುಡಿಗಳೆನ್ನಬಹುದು.

ಬಂಕಿಮಚಂದ್ರರು ತಿಲೋತ್ತಮೆ ಮತ್ತು ಆಯೆಷಾಳ ಗುಣ ಸ್ವಭಾವಾದಿ ಮೌಲ್ಯಗಳನ್ನು ತೌಲನಿಕವಾಗಿ ವಿಶ್ಲೇಷಿಸುವಂತೆ ಕಾಣುತ್ತದೆ. ವಿರಹ, ಅಸಹಾಯಕತೆಗಳಿಂದ ಚಿಂತಾ ಪರಿತಾಪದಲ್ಲಿ ದಹನಗೊಂಡು ರುಗ್ಣಶಯ್ಯೆಯಲ್ಲಿದ್ದ ತಿಲೋತ್ತಮೆಯನ್ನು ಗುರು ಅಭಿರಾಮಸ್ವಾಮಿ ನಾನಾ ಔಷಧೋಪಚಾರಗಳಿಂದ ಶುಶ್ರೂಷೆ ಮಾಡಿ ತನ್ನ ಆರೋಗ್ಯಶಾಸ್ತ್ರ ಪರಿಣತಿಯನ್ನು ಮೆರೆದರೂ, ಆತನ ಶುಶ್ರೂಷೆ ಕರ್ತವ್ಯದ ಪರಿಧಿಯಿಂದಾಚೆಗೆ ಮೀರಿ ನಿಲ್ಲುವುದಿಲ್ಲ. ಜಗತ್ಸಿಂಹನ ದರ್ಶನ, ಸಾಮೀಪ್ಯ, ಪ್ರೇಮಾನುರಾಗದ ಅಮೃತಮಯ ಪ್ರೇಮ ಪರಿಣಾಮವಾಗಿ ತಿಲೋತ್ತಮೆ ಮುನ್ನಿನ ಆರೋಗ್ಯ, ಸೌಂದರ್ಯಗಳನ್ನು ಪಡೆದು ವಿವಾಹಯೋಗ್ಯ ವಧುವಾಗಿ ಮಾರ್ಪಟ್ಟಳು. ಆಕೆಯ ವಿವಾಹ ಸಂಭ್ರಮೋತ್ಸವಕ್ಕೆ ಆಹ್ವಾನಿತಳಾಗಿ ಬಂದು ಪಾಲ್ಗೊಂಡು ತನ್ನ ಅಂತರಾಳದ ಪ್ರೇಮನಾಯಕನಾದ ಜಗತ್ಸಿಂಹ ರಾಜಕುಮಾರ, ರಾಜಕುಮಾರಿ ತಿಲೋತ್ತಮೆಯನ್ನು ಮದುವೆಯಾದಾಗ 'ಆಯೆಷೆ' ಉದ್ವಿಗ್ನಳಾಗುವುದೇ ಇಲ್ಲ. ಅಕ್ಕರೆಯಿಂದ ಅಕ್ಕ ತಂಗಿಯ ವಿವಾಹ ಮಾಡುವಂತೆ ಸಂಭ್ರಮಿಸುತ್ತಾಳೆ. ತನ್ನ ತ್ಯಾಗದ ಸಂಕೇತವೆಂಬಂತೆ ರತ್ನಾಭರಣವನ್ನು ನೀಡಿ ಆಶೀರ್ವದಿಸುತ್ತಾಳೆ. ಬಯಸಿದರೆ ಪಾದ ಸೇವಕನಂತೆ ವಿಧೇಯನಾದ ಉಸ್ಮಾನ್‌ಖಾನನ

---

೫. ಬಿ.ವೆಂಕಟಾಚಾರ್ಯ, 'ದುರ್ಗೇಶನಂದಿನಿ', ಸಾಹಿತ್ಯಮಂದಿರ, ಹನುಮಂತನಗರ, ಬೆಂಗಳೂರು-೧೯, ಡಿಸೆಂಬರ್ ೧೯೬೪. ಪುಟ-೧೧೭.

೬. ಎ.ಆರ್.ಕೃಷ್ಣಶಾಸ್ತ್ರೀ 'ಬಂಕಿಮಚಂದ್ರ', ಮೈಸೂರು ವಿಶ್ವವಿದ್ಯಾನಿಲಯ, ೧೯೬೦. ಪುಟ-೯೭. (ಎರಡನೆಯ ಭಾಗ, ಎರಡನೆಯ ಪರಿಚ್ಛೇದ)

ಪ್ರೇಮವನ್ನು ನಿರಾಕರಿಸಿ ಜಗತ್ಸಿಂಹನನ್ನು ಪ್ರಾಣನಾಯಕನಂತೆ ಪ್ರೇಮಿಸಿದ ಆಯೆಷೆ ವ್ಯಕ್ತಪಡಿಸುವ ತ್ಯಾಗದ ಪ್ರಕ್ರಿಯೆ ಎಂತಹ ಕಠಿಣ ಮನಸ್ಸಿನವರನ್ನು ಮೃದುಗೊಳಿಸಿಬಿಡುತ್ತದೆ.

ಪ್ರೇಮವೆಂಬುದು ಸ್ತ್ರೀಪುರುಷರ ನಡುವಿನ ಲೌಕಿಕ ವ್ಯವಹಾರವಲ್ಲ. ನಿಸರ್ಗ ಸಹಜವಾದ ಶರೀರ ಧರ್ಮವೂ ಅಲ್ಲ; ಅದು ಹೃದಯದ ಭಾವಲೋಕದ ಸಂಪತ್ತು. ಅದನ್ನು ಹಲವರಿಗೆ ಹಂಚಿಕೊಡುವ ಚಂಚಲತ್ವ ಸಾಧ್ಯವೇ ಇಲ್ಲ. ಪ್ರೇಮವೆಂಬುದು ಸಮರ್ಪಣ ತತ್ವದ ಮನಃಸ್ಥಿತಿ ತನ್ನ ಪ್ರಾಣನಾಯಕ ಬೇರೊಬ್ಬಳ ಪಾಲಾದನೆಂಬ ಈರ್ಷ್ಯೆಗೆ ಅಲ್ಲಿ ಅವಕಾಶವೇ ಇಲ್ಲ. ಆಯೆಷಾಳ ಪ್ರೇಮಾನುರಾಗ ವಾಸ್ತವಲೋಕಕ್ಕೆ ಸಂಬಂಧಪಟ್ಟದ್ದಲ್ಲ. ಎಷ್ಟು ತಪಸ್ಸು ಮಾಡಿ ಧ್ಯಾನಿಸಿದರೂ ಭಗವಂತನ ದರ್ಶನ ಕೃಪೆಯಾಗದ ತಪೋ ಸಾಧನೆಗೆ ಸಂಬಂಧಪಟ್ಟದ್ದಲ್ಲ. ಅಂಥ ತಾಪಸ ತಾಳ್ಮೆಯ ಸ್ವಭಾವ ಆಯೆಷಾಳದ್ದು. ನಮ್ಮ ಮನಸ್ಸು ಜಗತ್ಸಿಂಹನ ಜೊತೆ, ಆಯೆಷಾಳನ್ನೇ ಕುರಿಸಿ ಕಣ್ತುಂಬಿಕೊಳ್ಳುವ ಆಸೆಗೊಳಗಾಗುವುದು ತಪ್ಪುವುದೇ ಇಲ್ಲ. ದುರ್ಗೇಶನಂದಿನಿ ಕಾದಂಬರಿಯಲ್ಲಿ ವಿಶ್ಲೇಷಣೆಗೆ ಅರ್ಹವಾದ ಇನ್ನೊಂದು ಸ್ತ್ರೀಯೆಂದರೆ 'ವಿಮಲೆ'. ತಿಲೋತ್ತಮೆಗೆ ಮಲತಾಯಿಯಂತೆ, ಆಪ್ತ ಸೇವಕಿಯಂತೆ ವರ್ತಿಸುತ್ತಾ ಬೆಳೆಯುವ ಈ ಪಾತ್ರ ಕೊಂಚ ಸಂಕೀರ್ಣಕ್ಕೆ ಸೇರಬಹುದಾದ ಪಾತ್ರವಿದು. ಇತರ ಸ್ತ್ರೀ ಪಾತ್ರಗಳನ್ನು ವಿಶ್ಲೇಷಿಸುವಂತೆ ವಿಶ್ಲೇಷಿಸುವ ಮುನ್ನ ಈಕೆಯ ಪೂರ್ವ ವೃತ್ತಾಂತವನ್ನು ಪರಿಚಯ ಮಾಡಿಕೊಳ್ಳಬೇಕಾಗುತ್ತದೆ.

## ೩.೩. ವಿಮಲೆಯ ಪಾತ್ರ ಚಿತ್ರಣ

ಬಂಕಿಮಚಂದ್ರರ ದುರ್ಗೇಶನಂದಿನಿ ಕಾದಂಬರಿಯಲ್ಲಿ ಬರುವ ಪ್ರಮುಖ ಸ್ತ್ರೀ ಪಾತ್ರಗಳಲ್ಲಿ 'ವಿಮಲೆ' ಬಹುಮುಖ್ಯವಾದ ಪಾತ್ರ. ಸಮಸ್ತ ಪಾತ್ರಗಳೂ 'ವಿಮಲೆ' ಪಾತ್ರದ ನಿರೂಪಣೆಗೆ ಪೂರಕವಾಗಿ ನಿಲ್ಲುತ್ತವೆ. ಕಾದಂಬರಿಗೆ 'ದುರ್ಗೇಶನಂದಿನಿ' ಎಂಬ ಶೀರ್ಷಿಕೆಗೆ ಬದಲಾಗಿ 'ವಿಮಲೆ'ಯ ಹೆಸರುಳ್ಳ ಶೀರ್ಷಿಕೆಯನ್ನು ಕೊಡಬಹುದಾದ ಮಟ್ಟಿಗೆ 'ವಿಮಲೆ' ಕಾದಂಬರಿಯ ತುಂಬಾ ಆವರಿಸಿಕೊಳ್ಳುತ್ತಾಳೆ. ತನ್ನ ಪೂರ್ವ ವೃತ್ತಾಂತವನ್ನು ಪತ್ರದ ಬರಹದ ಮೂಲಕ ಅಭಿವ್ಯಕ್ತಗೊಳಿಸುವ ತಂತ್ರಗಾರಿಕೆಯಲ್ಲಿ 'ವಿಮಲೆ' ಪ್ರಾಮಾಣಿಕ ಆತ್ಮನಿವೇದನೆಗೊಂದು ಅವಕಾಶ ಕಲ್ಪಿಸಿ ಕೊಡಲಾಗಿದೆ.

ಸಂಕಲ್ಪಿಸಿದ್ದನ್ನು ಸಾಧಿಸುವ ಹಠವನ್ನು ಪಾಲಿಸುವ ವಿಮಲೆ ಕಾರ್ಯಸಾಧನೆಗೆ ಎಂತಹ ವೇಷವನ್ನಾದರೂ ಧರಿಸುತ್ತಾಳೆ. ನಾನಾ ಕಪಟಗಳನ್ನು ಅನುಸರಿಸುತ್ತಾಳೆ. ಸಹಜವಾದ ಕಡೆಗಣ್ಣ ಕುಡಿನೋಟ, ಅಪಾಂಗ ದೃಷ್ಟಿ ಕಾರ್ಯ ಸಾಧನೆಯ ಸಂದರ್ಭಕ್ಕೆ ಎದುರಾಳಿಯನ್ನು ಪ್ರೇಮದ ಭ್ರಮೆಗೊಳಗಾಗುವಂತೆ ಇರುತ್ತದೆ. ಹತ್ತೊಂಬತ್ತನೆಯ ಶತಮಾನದ ಆರಂಭದ ದಶಕಗಳ ಕಾಲದಲ್ಲಿಯೇ ಸ್ತ್ರೀ ಸಬಲೀಕರಣದ ಛಾಯೆಯಾಗಿ 'ವಿಮಲೆ' ಓದುಗರ ಪ್ರಜ್ಞೆಯನ್ನು ಜಾಗೃತವಾಗಿಸುತ್ತಾಳೆ. ಮಂದಾರಣ ದುರ್ಗಕ್ಕೆ ಹತ್ತಿರವಾದೊಂದು ಗ್ರಾಮದಲ್ಲಿ ಶಶಿಶೇಖರ

ಭಟ್ಟಾಚಾರ್ಯನೆಂಬ ಬ್ರಾಹ್ಮಣನಿದ್ದನು. ಈತನ ತಂದೆ ಸಂಪ್ರದಾಯಬದ್ಧ ಬ್ರಾಹ್ಮಣನಾಗಿದ್ದನು. ಶಶಿಶೇಖರನು ಅತಿಯಾದ ವಿದ್ಯಾರ್ಜನೆ ಮಾಡಿದ್ದರೂ ಕೂಡ ಆತನ ಸ್ವಭಾವದಲ್ಲಿ ಸ್ತ್ರೀ ಲಂಪಟತನ ಅತಿಯೆನಿಸುವಷ್ಟು ಹೆಚ್ಚಾಗಿಯೇ ಇತ್ತು. 'ಮಂದಾರಣ' ದುರ್ಗದ ಜಯಧರಸಿಂಹನ ಆಪ್ತ ಸೇವಕನ ಕುಟುಂಬದಲ್ಲಿ ಒಬ್ಬಾಕೆ ಚೆಲುವೆಯಿದ್ದಳು. ವಿವಾಹವಾಗಿದ್ದ ಆಕೆಯ ಗಂಡ ಸೈನಿಕನಾಗಿ ಕಾರ್ಯ ನಿರ್ವಹಿಸುತ್ತಿದ್ದ ಕಾರಣ ಬಹುಕಾಲ ತನ್ನ ಪತ್ನಿಯಿಂದ ದೂರವಿರುತ್ತಿದ್ದನು. ಪತಿ ಬರುವ ಹಾದಿಯ ಮೇಲೆ ಕಣ್ಣಿಟ್ಟು ಹಗಲು ರಾತ್ರಿಗಳನ್ನು ಎಣಿಸುತ್ತಿದ್ದಳು.

ಅವಳ ಸೌಂದರ್ಯದ ಕಾರಣಕ್ಕೆ ಪರಪುರುಷರ ಕಣ್ಣುಗಳು ಅವಳತ್ತ ನೋಡುತ್ತಿದ್ದವು. ಅಂತಹ ಸೆಳೆತದ ಆಕರ್ಷಣೆಗೆ ತರುಣನಾದ ಶಶಿಶೇಖರನೂ ಒಳಗಾದನು. ಇಬ್ಬರೂ ಸಹಮತದಿಂದ ಪರಸ್ಪರ ಪ್ರಣಯಿಗಳಾದರು. ಬಹು ಸೌಂದರ್ಯವತಿಯಾದ ಆಕೆ ಶಶಿಶೇಖರನ ಅವೈದಿಕ ಸಂಬಂಧ ಮತ್ತು ಸಂಪರ್ಕದಿಂದ ಗರ್ಭವತಿಯಾದಳು. ಈ ವಿಷಯ ಬಿದ್ದು ಗರ್ಭವತಿಯನ್ನು ಗರ್ಭಕ್ಕೆ ಕಾರಣ ಪುರುಷನಾದ ಶಶಿಶೇಖರನನ್ನು ಕರೆಸಿಕೊಂಡು ನಾನಾ ರೀತಿಯ ವಾಕ್ಯಗಳಿಂದ ಅವಹೇಳನ ಮಾಡಿದನು. ಅಪಮಾನಿತನಾದ ಶಶಿಶೇಖರನು ಮನೆಯನ್ನು ತೊರೆದು ದೇಶಾಂತರ ಹೋಗಿಬಿಟ್ಟನು. ಅಲ್ಲಲ್ಲಿ ಅಲೆದಾಡಿ ಕೊನೆಗೆ ಪಾಪಿಗಳ ಪ್ರಾಯಶ್ಚಿತ್ತ ಪುಣ್ಯಕ್ಷೇತ್ರವಾಗಿದ್ದ 'ಕಾಶೀ' ಕ್ಷೇತ್ರಕ್ಕೆ ಬಂದು ನೆಲೆಸಿದನು. ಶಶಿಶೇಖರ ವಿದ್ಯಾಭಿಲಾಷೆಯಾದ್ದರಿಂದ ಕಾಶಿಯಲ್ಲಿ ವಿದ್ಯಾಗುರುವಾಗಿ ನೆಲೆಸಿದ್ದ ಮಹಾಕವಿ 'ದಂಡಿ'ಯ ಎದುರು ತಾನು ಕಲಿತಿದ್ದ ವಿದ್ಯೆಯನ್ನು ಪರಿಚಯಿಸಿಕೊಂಡು ಆತನ ಬಳಿ ಇನ್ನೂ ಹೆಚ್ಚಿನ ವಿದ್ಯಾರ್ಜನೆ ಮಾಡಲು ಶಿಷ್ಯನಾಗಿ ಸೇರಿದನು. ಶಶಿಶೇಖರ ಜ್ಯೋತಿಷ್ಯಶಾಸ್ತ್ರದಲ್ಲಿ ಪರಿಣತನಾದನು.

'ಶಶಿಶೇಖರ' ವಿದ್ಯಾವಿಶಾರದನಾದರೂ ಆತನಿಂದ ಸ್ತ್ರೀ ವ್ಯಾಮೋಹ ದೂರವಾಗಲಿಲ್ಲ. ಕಾಶಿಯಲ್ಲಿ ಶೂದ್ರಳೊಬ್ಬಳ ಮನೆಯ ಪಕ್ಕದ ಕುಟೀರದಲ್ಲಿ ವಾಸಿಸುತ್ತಿದ್ದನು. ಶೂದ್ರ ಹೆಂಗಸಿಗೆ ನವ ತಾರುಣ್ಯಕ್ಕೆ ಬಂದ ಮಗಳಿದ್ದಳು. ತಾಯಿಯ ಆದೇಶದಂತೆ ಕಿರುಹರೆಯದಲ್ಲಿ ವಿದ್ವತ್ತಿನ ತೇಜಸ್ಸುಳ್ಳ ಬ್ರಾಹ್ಮಣನ ಸೇವೆ ಮಾಡಿದರೆ ಮಹಾ ಪುಣ್ಯ ಪ್ರಾಪ್ತಿಯೆಂದು ತಿಳಿದು ಶಶಿಶೇಖರನ ಸೇವೆಗೆ ಭಕ್ತಿಯಿಂದ ನಿಂತಳು. ಆಹಾರ ಪದಾರ್ಥಗಳನ್ನು ಅಣಿಮಾಡಿ ಕೊಡುವುದರ ಜೊತೆ ಆ ಶೂದ್ರ ಕನ್ಯೆ ತನ್ನ ಹರೆಯಾದಿ ಅಭಿಲಾಷೆಯನ್ನು ಶಶಿಶೇಖರನಿಗೆ ದೇಹ ಸಮೇತ ಸಮರ್ಪಿಸಿದಳು. ಶೂದ್ರ ಸುಂದರಿ ಶಶಿಶೇಖರನ ಮನದನ್ನೆಯಾಗಿ ಗರ್ಭವತಿಯಾಗಿಬಿಟ್ಟಳು. ಈ ಸಂಗತಿ ವಿದ್ಯಾಗುರು ದಂಡಿಯ ಕಿವಿಗೆ ಬಿದ್ದು, ಶಶಿಶೇಖರನನ್ನು ಉದ್ದೇಶಿಸಿ "ಶಿಷ್ಯ ನಾನು ದುರ್ಮಾರ್ಗಿಗಳಿಗೆ ಪಾಠವನ್ನು ಹೇಳುವುದಿಲ್ಲ, ನೀನು ಈ ಕ್ಷಣದಿಂದ ಮುಖ ತೋರಿಸಬೇಡ ಕಾಶಿಯಿಂದ ಹೊರಟು ಹೋಗೆಂದು"[೨] ಮೂದಲಿಸಿ ಬಹಿಷ್ಕರಿಸಿದನು.

---

೨. ಬಿ.ವೆಂಕಟಾಚಾರ್ಯ, 'ದುರ್ಗೇಶನಂದಿನಿ', ಸಾಹಿತ್ಯಮಂದಿರ, ಹನುಮಂತನಗರ, ಬೆಂಗಳೂರು - ೧೯, ಡಿಸೆಂಬರ್ ೧೯೬೪. ಪುಟ-೧೩೪

ಗುರುವಿನ ವಾಗ್ದಂಡನೆಗೆ ಅಪಮಾನಿತನಾದ ಶಶೀಶೇಖರ ಕಾಶಿಯಿಂದ ಹೊರಟುಹೋದನು. ಗರ್ಭವತಿಯಾದ ಶೂದ್ರ ಸ್ತ್ರೀಯು ತಾಯಿಯೊಡನೆ ಮನೆಯಿಂದ ಬಹಿಷ್ಕಾರಕ್ಕೊಳಗಾಗಿ ಬೇರೊಂದು ಕುಟೀರದಲ್ಲಿ ವಾಸಿಸುತ್ತಾ ಹೊಟ್ಟೆಪಾಡಿಗೆ ಕೂಲಿ ಕೆಲಸಕ್ಕೆ ತನ್ನ ಶರೀರವನ್ನು ದಂಡಿಸಿ ಶ್ರಮವಹಿಸಿ ದುಡಿಯುವುದೇ ನೆಮ್ಮದಿಯೆಂದು ಭಾವಿಸಿ ಬಾಳು ನಡೆಸುತ್ತಿದ್ದಳು. ದಿನಗಳು ಕಳೆದಂತೆ ಬೇಸಿಗೆ ಮಳೆಗಾಲಗಳು ನಿಯಮ ತಪ್ಪದಂತೆ ಭೂಮಿಗಿಳಿದು ಋತುಮಾನಗಳನ್ನು ನಡೆಸಿಕೊಂಡವು. ಕೊಟ್ಟ ಮಾತಿಗೆ ತಪ್ಪದಂತೆ ಋತುಮಾನದ ಚಳಿಗಾಲ ಗಂಗೆಯ ಬೆನ್ನೇರಿ ಬಂದಂತೆ ಕಾಶಿ ಪುಣ್ಯಕ್ಷೇತ್ರಕ್ಕೆ ಬಂದಿತ್ತು. ಮೈ ನಡುಗಿಸುವ ಛಳಿ; ಇರುಳಿತ್ತೆಂದರೆ ಪ್ರಾಣವನ್ನೇ ಹಿಡಿದಲ್ಲಾಡಿಸುವ ಛಳಿ. ಆ ಒಂದು ರಾತ್ರಿ ಪಠಾಣನೊಬ್ಬ ವಂಗದೇಶದಿಂದ ಡೆಲ್ಲಿಗೆ ಹೋಗಲು ಕಾಶಿ ಮಾರ್ಗವಾಗಿ ಬಂದನು. ಕಾಶಿಗೆ ಬರುವಷ್ಟರಲ್ಲಿ ಕಾಶಿಗೆ ಕವುದುಗತ್ತಲೆ ಬಂದಿಳಿದಿತ್ತು. ಇರುಳು ಪ್ರಯಾಣ ಕಷ್ಟಸಾಧ್ಯವೆಂದು ಕಾಶಿಯಲ್ಲಿ ಇರುಳು ಉಳಿದು ನಂತರ ಮುಂದಿನ ಪ್ರಯಾಣವೆಂದು ನಿರ್ಣಯ ಮಾಡಿದನು.

ಕಾಶೀಕ್ಷೇತ್ರ ಹಿಂದೂಗಳ ಮಹಾಪುಣ್ಯಕ್ಷೇತ್ರ. ಯಾತ್ರಿಕ ಪಠಾಣನಿಗೆ ಯಾರೊಬ್ಬರೂ ಆಶ್ರಯ ಕೊಡಲಿಲ್ಲ. ಪಠಾಣ ಸಾಕಷ್ಟು ಸಿರಿವಂತನಾಗಿದ್ದರೂ, ಹಣವನ್ನು ಕೊಡುತ್ತೇನೆಂದು ದುಂಬಾಲು ಬಿದ್ದರೂ ಯಾರೂ ಆಶ್ರಯ ನೀಡಲಿಲ್ಲ. ಆಶ್ರಯಕ್ಕಾಗಿ ನಗರದಲ್ಲೆಲ್ಲಾ ಅಲೆದು ಕೊನೆಗೆ ಬಡವಿ ಕೂಲಿಗಾರ್ತಿ, ಶೂದ್ರಳ ಕುಟೀರದ ಬಾಗಿಲೆದುರು ನಿಂತು ಪಠಾಣ ಆಶ್ರಯ ಬೇಡಿದ. ಪಠಾಣನ ಹೆಂಡತಿಯೂ ಒಬ್ಬ ಚಿಕ್ಕ ಮಗನೂ ಜೊತೆಗಿದ್ದರು. ಕೊರೆವ ಚಳಿಯಲ್ಲಿ ಎಳೆಯ ಬಾಲಕ ಆರೋಗ್ಯ ಕಳೆದುಕೊಳ್ಳುವನೆಂಬ ಧಾವಂತ ಶೂದ್ರ ಸ್ತ್ರೀಗುಂಟಾಯಿತು. ಸ್ವಭಾವತಃ ಕರುಣಾಮಯಿಯೂ, ಮಾತೃ ಹೃದಯಿಯೂ ಆದ ಶೂದ್ರ ಹೆಂಗಸು ಪಠಾಣನಿಗೆ ಆಶ್ರಯ ನೀಡಿದಳು. ಕಾಶಿ ಕ್ಷೇತ್ರದಲ್ಲಿ ಎಳೆಯ ಮಕ್ಕಳನ್ನು ಅಪಹರಿಸುವ ಕಳ್ಳರ ಕಾಟ ಅತಿಯಾಗಿತ್ತು. ಯಾವ ಕಳ್ಳನಿಗೊ ಪಠಾಣನ ಎಳೆಯ ಬಾಲಕ ಕಣ್ಣಿಗೆ ಬಿದ್ದನು. ಆಶ್ರಿತನಾದ ಪಠಾಣ ಹೆಂಡತಿ ಮಗನೊಡನೆ ಕುಟೀರದಲ್ಲಿ ಮಲಗಿದ್ದನು. ಅರ್ಧರಾತ್ರಿಯಾಯಿತು. ಹೊಂಚು ಹಾಕಿದ್ದ ಕಳ್ಳ ಶೂದ್ರಳ ಮನೆಗೆ ಕನ್ನ ಹಾಕಿ ಒಳನುಗ್ಗಿ ತಾಯಿಯ ಪಕ್ಕದಲ್ಲಿ ಮಲಗಿ ನಿದ್ರಿಸುತ್ತಿದ್ದ ಗಂಡುಮಗುವನ್ನು ಅಪಹರಿಸಿ ಕನ್ನಕಿಂಡಿಯ ಮೂಲಕ ಹೊರ ಹೊರಟನು. ಎಚ್ಚರಗೊಂಡ ಪಠಾಣನ ಹೆಂಡತಿ ಪಕ್ಕದಲ್ಲಿ ಮಲಗಿದ್ದ ಪುತ್ರನನ್ನು ಕಾಣದೆ ಬೊಬ್ಬೆ ಹೊಡೆದು ರೋದಿಸಿ ಎಲ್ಲರೂ ಎಚ್ಚರವಾಗುವಂತೆ ಗದ್ದಲ ಮಾಡಿದಳು. ಶೂರನಾದ ಪಠಾಣ ಕಳ್ಳನನ್ನು ಬೆಂಬತ್ತಿ ಹಿಡಿದು ಮಗುವನ್ನು ರಕ್ಷಿಸಿ ತಂದನು. ಕಳ್ಳನನ್ನು ಹೆಡೆಮುರಿ ಕಟ್ಟಿ ಮನಸೋ ಇಚ್ಛೆ ಒದ್ದನು. ಕಳ್ಳನು ಪಠಾಣನ ಒದೆತವನ್ನು ತಾಳಲಾರದೆ ಪ್ರಾಣವುಳಿಸುವಂತೆ ಅಂಗಲಾಚಿದನು. ಕರುಣೆ ಹುಟ್ಟಿ ಪಠಾಣನು ಕಳ್ಳನ ಕಿವಿಯೊಂದನ್ನು ಕೊಯ್ದು ಶಿಕ್ಷಿಸಿ ಬಿಟ್ಟು ಕಳುಹಿಸಿದನು. ಕಳ್ಳನು ಅಪಹರಿಸಿದ್ದ ಪಠಾಣ ಮಗನ ಹೆಸರು ಉಸ್ಮಾನ್‌ಖಾನ್.

ಮುಂದೆ ಈತ ಕತಲೂಖಾನನ ಆಪ್ತ ಸೇನಾನಿಯಾಗುತ್ತಾನೆ. ಆಶ್ರಯವನ್ನು ನೀಡಿದ ಶೂದ್ರ ಹೆಂಗಸಿಗೆ ಪಠಾಣನು ಹಣ ಕೊಡಲು ಮುಂದಾದಾಗ, ಆಕೆ ನಿರಾಕರಿಸಿ ಈ ನನ್ನ ಮಗಳ ತಂದೆ

ಎಲ್ಲಿರುವನೆಂದು ಹುಡುಕಿಕೊಟ್ಟರೆ ತುಂಬಾ ಉಪಕಾರವಾಗುತ್ತದೆ ಎಂದು ಕೇಳಿಕೊಳ್ಳುವಳು. ಪಠಾಣನು ಪ್ರಭಾವಿ ಸೈನಿಕನಾದ್ದರಿಂದ ಹುಡುಕಿಸಿಕೊಡುವ ಭರವಸೆಯನ್ನಿತ್ತು ಡೆಲ್ಲಿಗೆ ಪ್ರಯಾಣ ಬೆಳೆಸಿದನು. ಆಡಿದ ನುಡಿಗೆ ತಪ್ಪದಂತೆ ಪಠಾಣನು ಶಶಿಶೇಖರನೇ ಶೂದ್ರಳ ಪ್ರೇಮಿಯೆಂದೂ ಆಕೆಯ ಮಗಳ ತಂದೆಯೆಂದೂ ಪತ್ತೆ ಮಾಡಿಸಿದನು. ಶಶಿಶೇಖರ ತನ್ನ ಹೆಸರನ್ನು ಬದಲಾಯಿಸಿಕೊಂಡು ಅಭಿರಾಮಸ್ವಾಮಿ ಎಂಬ ಹೆಸರಿಟ್ಟುಕೊಂಡಿದ್ದನು. ಕೆಲಕಾಲದ ನಂತರ ಶೂದ್ರ ಸ್ತ್ರೀಯ ಮಗಳು ಅರ್ಥಾತ್ ಅಭಿರಾಮಸ್ವಾಮಿಯ ಮಗಳು ತನ್ನ ತಾಯಿಯನ್ನು ಕಳೆದುಕೊಂಡು ಅನಾಥೆಯಾದಳು. ಪಠಾಣ ಸೈನಿಕರ ನೆರವಿನಿಂದ ಅಭಿರಾಮಸ್ವಾಮಿಯು ಡೆಲ್ಲಿಯಲ್ಲಿರುವುದನ್ನು ತಿಳಿದು 'ಮೆಹರು' ಶೂದ್ರ ಸ್ತ್ರೀಯ ಮಗಳು ಕಾಶಿಯಿಂದ ತಂದೆಯಿದ್ದ ಡೆಲ್ಲಿಗೆ ಹೋದಳು. ಮೊದಮೊದಲು ಶೂದ್ರ ಮಗಳನ್ನು ನಿರಾಕರಿಸಿದ ಅಭಿರಾಮಸ್ವಾಮಿ ಮಗಳ ದೈನ್ಯತೆಯನ್ನು ನೋಡಿ ಸ್ವೀಕರಿಸಿ ಆಕೆಗಿದ್ದ 'ಮೆಹರು' ಎಂಬ ಹೆಸರನ್ನು ಬದಲಾಯಿಸಿ 'ವಿಮಲೆ' ಎಂದು ವೈದಿಕ ಸಂಪ್ರದಾಯಕ್ಕೆ ಹೊಂದಿಕೆಯಾಗುವ ಹೆಸರಿಟ್ಟನು. ವಿಮಲೆ ತನ್ನ ತಂದೆ ಅಭಿರಾಮಸ್ವಾಮಿಯ ಸೇವೆಯನ್ನು ನಡೆಸಿ ಅಚ್ಚುಮೆಚ್ಚಿನ ಮಗಳಾದಳು.

ಬಂಕಿಮಚಂದ್ರರ ಪ್ರಸ್ತುತ ಕಾದಂಬರಿಯಲ್ಲಿ ಪಾತ್ರವಾಗಿ ಬರುವ ತಿಲೋತ್ತಮೆಯೂ ವಿಮಲೆಯ ಸೋದರಿಯೇ ಆಗಿರುತ್ತಾಳೆ. ಮಂದಾರಣ ದುರ್ಗದ ಹೆಸರಾಂತ ಚೆಲುವೆಯಾದ ಈಕೆ ರಾಜಕುಮಾರಿಯಾಗಿ ಅರಮನೆ ಸೇರಿ ಬೆಳೆಯುತ್ತಿರುತ್ತಾಳೆ. ಅಕ್ಕನ ಸ್ಥಾನದಲ್ಲಿದ್ದರೂ ವಿಮಲೆ ಅದನ್ನು ಗೋಪ್ಯಮಾಡಿ ರಾಜಕುಮಾರಿಯ ಸೇವಕಿ-ಸಖಿಯಂತೆ ವರ್ತಿಸುತ್ತಾಳೆ. 'ಅಭಿರಾಮಸ್ವಾಮಿ ಮಂದಾರಣ ದುರ್ಗದ ಮಾನಸಿಂಹನಿಗೆ ಆಪ್ತ ಸಲಹೆಗಾರನಾಗಿ ತನಗಿದ್ದ ವೈಚಾರಿಕ ಶಕ್ತಿಯನ್ನು ದೊರೆಗೆ ದೊರಕಿಸಿಕೊಡುತ್ತಾನೆ. ವಿಮಲೆಗೆ ಅಸಾಧಾರಣ ಬುದ್ಧಿವಂತಿಕೆ ಆಕೆಯ ತಂದೆ ಅಭಿರಾಮಸ್ವಾಮಿಯಿಂದಲೇ ರಕ್ತಗತವಾಗಿ ಬಂದಿದೆಯೆನ್ನಬಹುದು. ಕತಲೂಖಾನನನ್ನು ಪ್ರೇಯಸಿಯಂತೆ ನಟಿಸಿ ಕೊಲ್ಲುವ ಸಂದರ್ಭ ಓದುಗರ ಮೈನವಿರೇಳಿಸುವಂಥದ್ದು. "ಧೈರ್ಯಂ ಸರ್ವತ್ರ ಸಾಧನಂ" ಎಂಬ ಉಕ್ತಿಗೆ ವಿಮಲೆಯ ಸಾಹಸಗಳು ಹೊಂದಿಕೆಯಾಗುತ್ತವೆ.

### ೩.೪. ಭಾಷಾಶೈಲಿ

ಕಾದಂಬರಿಯಲ್ಲಿ ಬಳಕೆಯಾಗಿರುವ ಭಾಷಾ ಶೈಲಿ ಬಂಗಾಳಿ ಭಾಷೆಗೆ ಹೊಸ ಕಸುವನ್ನು ತಂದಿತ್ತಿದೆ. ಅಂತೆಯೇ ಬಿ.ವೆಂಕಟಾಚಾರ್ಯರು ಕನ್ನಡ ಭಾಷೆಯ ಗದ್ಯದ ಬೆಳವಣಿಗೆಯಲ್ಲಿ ಈ ಪ್ರಯೋಗವನ್ನು ಕೈಗೊಂಡು ಯಶಸ್ವಿಯಾಗಿದ್ದಾರೆನ್ನಬಹುದು.

1. ತಟಿದಾಲೋಕದಿಂದ = ಮಿಂಚಿನ ಬೆಳಕಿನಿಂದ
2. ಪಾರಿತೋಷಕವಾಗಿ = ಬಹುಮಾನವಾಗಿ
3. ಅನಾವೃತ = ಮುಚ್ಚಲ್ಪಡದ
4. ವಸಂತಪ್ರಸೂತನವಪಲ್ಲವ = ವಸಂತದಲ್ಲಿ ಹುಟ್ಟುವ ಹೊಸ ಚಿಗುರು

5. ಕಟಿಬಂಧನ = ನಡುಕಟ್ಟು
6. ಉಷ್ಣೀಷ = ಮಕುಟ, ರುಮಾಲು
7. ಅನಿಮಿಷನಯನೆಯಾಗಿ = ಕಣ್ಣುರೆಪ್ಪೆ ಮುಚ್ಚದೆ
8. ಸತೃಷ್ಣ = ಬಯಕೆಯುಳ್ಳ, ಆಸೆಯುಳ್ಳ
9. ಸಾಕೂತದಿಂದ = ಬೇಕೆಂದು, ಉದ್ದೇಶದಿಂದ
10. ತೃಷಾಕಾತರ = ತೃಷೆಯಿಂದ ಹಲುಬಿಸುವ
11. ವ್ಯಸ್ತ = ಕಳವಳಗೊಂಡ
12. ನಿರ್ವ್ಯಾಜ = ವ್ಯಾಜವಿಲ್ಲದ, ಕಾರಣವಿಲ್ಲದ
13. ವಜ್ರಪತನ = ಸಿಡಿಲು ಬೀಳುವುದು
14. ದುರ್ದಮ್ಯವಾದ = ಅಡಗಿಸಲು ಕಷ್ಟವಾದ
15. ಶ್ಯಾಲಕ = ಭಾವ ಮೈದುನ
16. ಉದ್ವಿಗ್ನ = ಕಳವಳವುಳ್ಳ
17. ಭ್ರೂಭಂಗಿ = ಹುಬ್ಬುಗಂಟು
18. ಬಾಷ್ಪಾಕುಲ = ಕಣ್ಣೀರು ತುಂಬಿದ
19. ಕರಾಳ = ಭಯಂಕರವಾದ ಕೋರೆಹಲ್ಲು
20. ಅಂತಃಸತ್ವೆ = ಗರ್ಭಿಣಿ
21. ಭಾಂಡಸ್ಥ = ಗಡಿಗೆಯಲ್ಲಿರುವ
22. ಕರಗ್ರಾಹಿ = ಕಂದಾಯ ಅಥವಾ ಕಪ್ಪವನ್ನು ತೆಗೆದುಕೊಳ್ಳುವವನು
23. ವಿಷಣ್ಣವದನ = ಬಾಡಿದ ಮುಖ
24. ವಿಶುಷ್ಕ = ಹೆಚ್ಚು ಕಂದಿದುದಾಗಿ
25. ವಾತಾಯನ = ಕಿಟಕಿ
26. ಸಮೀರಣ = ತಂಗಾಳಿ, ವಾಯು
27. ಯಾತಾಯಾತ = ಬಂದು ಹೋಗುವುದು
28. ಓಸರಿಸಿದಾಲೋಚನೆ = ತಕ್ಕ ಅಥವಾ ಸರಿಯಾದಾಲೋಚನೆ
29. ಉದಾಸೀನನನ್ನು = ಸಂನ್ಯಾಸಿಯನ್ನು
30. ಪ್ರಗಲ್ಭ = ಹೆದರದ, ಧೀರ
31. ದರ್ಪಣ = ಕನ್ನಡಿ
32. ಗಂಧವಾರಿಸಿಕ್ತ = ಅತ್ತರಿಂದ ತೋಯಿಸಿದ
33. ಶಯನಾಗಾರ = ಮಲಗುವ ಕೊಠಡಿ
34. ವ್ಯಜನ = ಬೀಸಣಿಗೆ

35. ಅಭಿಸಾರ = ಸಂಕೇತ ಮಾಡಿದ ಭೇಟಿ, ಮೇಳನ ಸ್ಥಾನ
36. ಅಪ್ರತಿಭೆ = ವಿಭ್ರಮೆ
37. ದೈರ್ಘ್ಯ = ಎತ್ತರ
38. ಧೃಷ್ಟ = ಬುದ್ಧಿಗೇಡಿತನ
39. ಶರದಿಂದುನಿಭಾನನೆ = ಶರತ್ಕಾಲದ ಚಂದ್ರನ ಹಾಗೆ ಮುಖವುಳ್ಳವಳೆ
40. ದಂಶನ = ಕಚ್ಚುವುದು
41. ಚೇಲಾಂಚಲವನ್ನು = ಉತ್ತರೀಯದ ಸೆರಗನ್ನು
42. ಪುತ್ರವಧೂ = ಸೊಸೆ
43. ಪ್ರತ್ಯುತ್ಪನ್ನ ಮತಿ = ಕುಶಾಗ್ರ ಬುದ್ಧಿಯುಳ್ಳ
44. ನೀರವವಾಗಿ = ಶಬ್ದವಿಲ್ಲದೆ
45. ಅಸುರುಸಿರನ್ನು = ಕಷ್ಟದಿಂದ ನಿಟ್ಟುಸಿರನ್ನು
46. ಈಶ್ವರಾವೇಶ = ದೇವೋಪದೇಶ
47. ಪ್ರತಿಯೋಗಿ = ಎದುರಾಳಿ

ಹೀಗೆ ಬಂಕಿಮಚಂದ್ರರು ಕಾದಂಬರಿ ಬರೆದ ರೀತಿ, ಬಂಗಾಳಿ ಗದ್ಯ ಸಾಹಿತ್ಯದಲ್ಲಿ ಒಂದು ಹೊಸ ಪ್ರಯೋಗ, ಭಾಷಾ ಬಳಕೆ, ಅವರು ತಮ್ಮ ಕಾದಂಬರಿಗಳಿಗೆ ಆರಿಸಿಕೊಂಡ ಕಥಾವಸ್ತುಗಳು ಎರಡು ಮೂರು ಶತಮಾನಗಳ ಹಿಂದಿನ ಕಾಲದವು. ಹೆಸರಿಡುವುದರಲ್ಲಿ ಅವರದು ನವೀನತೆ ಉದಾಹರಣೆಗೆ ದುರ್ಗೇಶನಂದಿನಿ; ಪಾತ್ರ ಸೃಷ್ಟಿಯಲ್ಲಿಯೂ ಸಹಜತೆ ಮತ್ತು ನೂತನತೆ. ಬಂಕಿಮಚಂದ್ರರ ಕಾದಂಬರಿಗಳಲ್ಲಿ ಚಿತ್ರಿತವಾಗಿರುವ ಮಕ್ಕಳು, ಗೃಹಿಣಿ ಮತ್ತು ತಾಯಿಯರ ಪಾತ್ರಗಳು ಅತಿ ಸಹಜವಾಗಿ ಕಣ್ಣಿಗೆ ಗೋಚರಿಸುತ್ತವೆ.

### ೩.೫. ಆನಂದಮಠ: ರಾಷ್ಟ್ರೀಯ ಪ್ರಜ್ಞೆ

ಬಂಕಿಮಚಂದ್ರರ ಆನಂದಮಠ ಕಾದಂಬರಿಯು ಐತಿಹಾಸಿಕ ಕಾದಂಬರಿ ಆಗಿದೆ. ಕ್ರಿ.ಶ.1771ರ ಆಸುಪಾಸಿನಲ್ಲಿ ವಂಗದೇಶದಲ್ಲಿ ಕ್ಷಾಮ ಬಂದು ಜನಜೀವನದ ಮೇಲೆ ಭೀಕರ ಬರಗಾಲವನ್ನು ಉಂಟು ಮಾಡಿದುದರ ವಿವರಗಳಿಂದ ಕಾದಂಬರಿ ಮೊದಲಾಗುತ್ತದೆ. 'ಪದಚಿಹ್ನ' ಗ್ರಾಮದ ಜಮೀನ್ದಾರ ಮಹೇಂದ್ರಸಿಂಹನೂ ಪತ್ನಿ ಕಲ್ಯಾಣಿಯೂ ಅವರಿಬ್ಬರ ಹೆಣ್ಣು ಕೂಸು ಸುಕುಮಾರಿ ಹುಟ್ಟಿ ಬೆಳೆದ ಮನೆಯನ್ನು ಬಿಟ್ಟು ಅನಾಥನಂತೆ ಬದುಕಲು ಬೇಕಾದ ಆಹಾರವನ್ನು ಹುಡುಕಿ ಗುಳೆ ಹೊರಟರು. ಬರಗಾಲದ ಭೀಕರತೆ ಎಲ್ಲೆಡೆ ವ್ಯಾಪಿಸಿತ್ತು. ಹಸಿವು, ಸಾವು – ನರಳಿಕೆಗಳು ಎಲ್ಲೆಡೆ ಕೇಳಿ ಬರುತ್ತಿದ್ದವು. ಬೇಸಾಯವಿಲ್ಲದ ಜನರು ಆಹಾರಗಳಿಗಾಗಿ ತಮ್ಮ ಬಳಿ ಇದ್ದುದನೆಲ್ಲ ಮಾರಿದರು. ಸಿಡುಬು, ಕಾಲರಾ, ರೋಗಗಳಿಂದ ಜನರು ಸಾಯುತ್ತಿದ್ದರು. ಹಸಿವು ಎಲ್ಲ ರೋಗಕ್ಕಿಂತಲೂ ಬಲವಾದ ಯಾತನೆಯನ್ನುಂಟು ಮಾಡುತ್ತಿತ್ತು. ಮಹೇಂದ್ರಸಿಂಹ ಗುಳೇ

ಹೊರಟ ಪ್ರಯಾಣದ ಮೊದಲ ದಿನಗಳಲ್ಲಿ ಪತ್ನಿ ಕಲ್ಯಾಣಿಗೂ, ಮಗಳು ಸುಕುಮಾರಿಗೂ ಹಾಲು ತಂದು ಕೊಡುವ ತುರ್ತಿನಲ್ಲಿ ದಾರಿಯಲ್ಲಿ ಸಿಕ್ಕಿದ ಧರ್ಮಶಾಲೆಯಲ್ಲಿ ಅವರಿಬ್ಬರನ್ನು ಕೂರಿಸಿ ಹೊರನಡೆದ ನಂತರ ಆಹಾರಕ್ಕಾಗಿ ಹಂಬಲಿಸುತಿದ್ದ ಕ್ಷಾಮ ಪೀಡಿತರ ಗುಂಪೊಂದು ಕಲ್ಯಾಣಿಯನ್ನು ಮಗು ಸುಕುಮಾರಿಯನ್ನು ಎತ್ತಿಕೊಂಡು ಅರಣ್ಯಕ್ಕೆ ತಂದರು. ಹಾಲು ತಂದ ಮಹೇಂದ್ರಸಿಂಹ ಧರ್ಮಶಾಲೆಯಲ್ಲಿ ಪತ್ನಿ ಮತ್ತು ಮಗಳನ್ನು ಕಾಣದೆ ಆತಂಕದಿಂದ ಎಲ್ಲೆಡೆ ಹುಡುಕಲಾರಂಭಿಸಿದನು.

ಪಿಶಾಚಿಗಳಂತಿದ್ದ ಕಳ್ಳರು ಕಲ್ಯಾಣಿಯ ಬಳಿಯಿದ್ದ ನಗನಾಣ್ಯಗಳನ್ನು ಅಪಹರಿಸಿದರು. ಆಹಾರದ ಕಾರಣಕ್ಕಾಗಿ ಮಾನವೀಯತೆಯನ್ನು ಮರೆತು ಜಗಳವಾಡಿ ತಮ್ಮ ಮುಖಂಡನನ್ನೇ ಕೊಂದು ಹಾಕಿದರು. ಘೋರವಾದ ಹಸಿವಿನ ಕೆರಳಿಕೆಯಿಂದ ಸತ್ತ ತಮ್ಮ ಮುಖಂಡನ ಕಳೇಬರವನ್ನೇ ಸುಟ್ಟು ತಿನ್ನುವ ಆಲೋಚನೆ ಮಾಡಿದರು. ಕಳ್ಳರ ಬಡಿದಾಟದ ಸದ್ದಿಗೆ ಮೂರ್ಛಿತಳಾಗಿದ್ದ ಕಲ್ಯಾಣಿ ಎಚ್ಚರಗೊಂಡು ಮಗುವನ್ನು ಎತ್ತಿಕೊಂಡು ಅಲ್ಲಿಂದ ಪಲಾಯನ ಮಾಡಿದಳು. ಪಿಶಾಚಿ ರೂಪದ ಕಳ್ಳರು ಕಲ್ಯಾಣಿಯನ್ನು ಅನಾಮತ್ತಾಗಿ ಸುಟ್ಟು ತಿನ್ನುವ ಹಂಚಿಕೆ ಹೂಡಿದರು. ಕಲ್ಯಾಣಿ ನಡೆಯಲಾರದೆ ಹುಲ್ಲು ಪೊದರಿನಲ್ಲಿ ಅವಿತು ಹರಿನಾಮ ಸ್ಮರಣೆ ಮಾಡಿದಳು. ಕೊಂಚ ಸಮಯದ ನಂತರ ಹರಿಗೀತೆಯ ಲಹರಿಯೊಂದು ಗಾಳಿಯಲ್ಲಿ ತೇಲಿಬಂತು ಕಲ್ಯಾಣಿಯು ಎಳೆತನದಲ್ಲಿ ಕೇಳಿದ್ದ ಪುರಾಣ ಸಂಗತಿಗಳೆಲ್ಲ ನೆನಪಾದವು. ಹರಿಗೀತೆಯನ್ನು ಹಾಡುತ್ತ ಬಂದವರು ಮಠದ ಸ್ವಾಮಿಯಾಗಿದ್ದರು. ಅವರು ಹತ್ತಿರ ಬರುತ್ತಿದ್ದಂತೆಯೇ ಕಲ್ಯಾಣಿ ಮೂರ್ಛಿತಳಾಗಿದ್ದಳು.

ಅದೊಂದು ಬಹು ಪ್ರಾಚೀನವಾದ ಕಲ್ಲುಮಠ ಅರಣ್ಯದ ನಟ್ಟ ನಡುವೆ ಇತ್ತು. ಪುರಾತತ್ವ ವಿದ್ವಾಂಸರು ಆ ಮಠದ ಇತಿಹಾಸವನ್ನು ಭಗವಾನ್ ಬುದ್ಧನ ಅನುಯಾಯಿಗಳ ಕಾಲಕ್ಕೊಯ್ದು ನಿಲ್ಲಿಸುವಂತಹ ಪ್ರಾಚೀನತೆಯನ್ನು ಆ ತಾಣ ಹೊಂದಿತ್ತು. ಮಠದ ನಡುವಿನ ವಿಶಾಲವಾದ ಅಂಗಳದಲ್ಲಿ ದಪ್ಪನೆಯ ಮರವನ್ನು ಬೆಂಕಿಗೆ ಉರುವಲಾಗಿ ಇಟ್ಟಿದ್ದು ಅಲ್ಲಿಂದ ಮಂದವಾದ ಬೆಳಕು ಹೊಮ್ಮುತ್ತಿತ್ತು.

ಕಲ್ಯಾಣಿಯುನ್ನು ರಕ್ಷಿಸಿ ತಂದ ವ್ಯಕ್ತಿ ಆ ಮಠದ ಸ್ವಾಮಿಯಾಗಿದ್ದನು. ಸ್ವಾಮಿ ತೇಜೋಮೂರ್ತಿಯಾಗಿದ್ದನು. ಕಲ್ಯಾಣಿ ಎಚ್ಚರಗೊಂಡು ನೋಡಿದಳು. ಸುರಕ್ಷಿತ ಸ್ಥಳವೆಂಬ ನಂಬಿಕೆಯುಂಟಾಯಿತು. ತೇಜೋಮೂರ್ತಿ ಕಲ್ಯಾಣಿಯನ್ನು ಉಪಚರಿಸಿ ಕುಡಿಯಲು ಹಾಲು ಕೊಟ್ಟು ತಾಯಿ ಮತ್ತು ಮಗುವಿಗೆ ತ್ರಾಣವುಂಟಾಗುವಂತೆ ಆರೈಕೆ ಮಾಡಿದನು. ಪತಿ ಮಹೇಂದ್ರಸಿಂಹನನ್ನು ಕಾಣದೆ ಕಂಗಾಲಾಗಿದ್ದ ಕಲ್ಯಾಣಿ ಹಾಲು ಕುಡಿಯಲು ನಿರಾಕರಿಸಿದಳು, ಕೇವಲ ನೀರು ಕುಡಿದು ದಣಿವಾರಿಸಿಕೊಂಡಳು.

ಕಾದಂಬರಿಯ ಪ್ರಾರಂಭದಿಂದಲೂ ಮಠದ ಬಗ್ಗೆ ಕುತೂಹಲವನ್ನು ಕೆರಳಿಸುವುದನ್ನು ಬಂಕಿಮಚಂದ್ರರು ನಡೆಸಿದ್ದಾರೆ. 'ಕುತೂಹಲ' ಒಂದು ವಿಶೇಷ ಗುಣದಂತೆ ಕಾದಂಬರಿಯಲ್ಲಿ

ವರ್ಣಿತವಾಗಿದೆ. ಇದೇ ಸಮಯದಲ್ಲಿ ಮುಸಲ್ಮಾನ ಮೀರ್‌ಜಾಫರ್‌ನೆಂಬುವನು ಬಂಗಾಳದ ಆಡಳಿತಗಾರನಾಗಿದ್ದನು. ಈತನು ಮಹಾಕ್ರೂರಿಯಾಗಿದ್ದನು. ಜನರ ಹಿತರಕ್ಷಣೆಗಿಂತ ಮೇಲಾಗಿ ಕಂದಾಯ ತೆರಿಗೆಗಳನ್ನು ವಿಧಿಸಿ ವಸೂಲು ಮಾಡುವುದೇ ಆಡಳಿತವೆಂದು ಭಾವಿಸಿದ್ದ ಪ್ರಜಾದ್ರೋಹಿಯಾಗಿದ್ದನು. ಕಂದಾಯವನ್ನು ವಸೂಲು ಮಾಡಿ ಖಜಾನೆಗೆ ಸೇರಿಸುವ ಹೊಣೆಗಾರಿಕೆಯನ್ನು ಬ್ರಿಟಿಷ್ ದಳವಾಯಿಗಳಿಗೆ ವಹಿಸಿದ್ದನು. ಮಹಾಕ್ರೂರಿಗಳಾಗಿದ್ದ ಬ್ರಿಟಿಷ್ ಅಧಿಕಾರಿಗಳು ಮಹಾಬರಗಾಲದಲ್ಲಿಯೂ ಪ್ರಜೆಗಳಿಂದ ನಿಷ್ಕರುಣೆಯಿಂದ ತೆರಿಗೆ ಸಂಗ್ರಹಿಸಿ ಖಜಾನೆಯನ್ನು ತುಂಬಿಸುತ್ತಿದ್ದರು. ದೇಶದಲ್ಲಿ ದರೋಡೆ, ಕೊಲೆ, ಸುಲಿಗೆಗಳು ಮೇರೆ ಮೀರಿದ್ದವು. ಪ್ರಜಾರಕ್ಷಣೆಯನ್ನು ಮೀರ್‌ಜಾಫರ್ ತನ್ನದಲ್ಲವೆಂಬಂತೆ ವರ್ತಿಸುತ್ತಿದ್ದನು. ಅರಾಜಕತೆ ಎಲ್ಲೆಲ್ಲಿಯೂ ತಾಂಡವವಾಡುತ್ತಿತ್ತು. ಬಾಣಲೆಯಲ್ಲಿ ಬೇಯುತ್ತಿದ್ದವರನ್ನು ಬೆಂಕಿಗೆಸೆದಂತೆ ಭಯಂಕರ ಕ್ಷಾಮ ಬಂದು ಬಂಗಾಳವನ್ನು ಆವರಿಸಿಕೊಂಡಿತ್ತು. ಸಾವು–ನೋವು, ರೋಗ–ರುಜಿನಗಳೇ ದೇಶದ ತುಂಬಾ ವ್ಯಾಪಿಸಿತ್ತು. ಬಂಗಾಳ ದೇಶದ ಮಠದ ಸ್ವಾಮಿಗಳು ಬ್ರಹ್ಮಚಾರಿಗಳು ದೇಶರಕ್ಷಣೆಯ ಸಲುವಾಗಿ ಬಂಡಾಯ ಮನೋಭಾವ ತಳೆದರು. ಅನ್ಯಾಯಕ್ಕೆ ಒಳಗಾಗಿ ಪ್ರಾಣ ಮಾತ್ರವೇ ಆಸ್ತಿಯನ್ನಾಗಿ ಅನುಭವಿಸುತ್ತಿದ್ದ ಜನರನ್ನು ಸಂಘಟಿಸಿ ದುರಾಡಳಿತದ ಎದುರು ಬಂಡಾಯ ಸಂಘಟನೆಯಾಗುತ್ತಿತ್ತು. ಬದುಕು ದುಸ್ತರವಾದಾಗ ಶಾಂತಿ, ಧ್ಯಾನ ಇತ್ಯಾದಿಗಳಿಗೆ ಕವಡೆ ಕಾಸಿನಷ್ಟು ಕಿಮ್ಮತ್ತಿಲ್ಲವೆಂದು ಕಂಡುಕೊಂಡ ಮಠದ ಸ್ವಾಮಿಗಳು ಬ್ರಹ್ಮಚಾರಿಗಳು ಸಾತ್ವಿಕ ಸಿಟ್ಟಿನಿಂದ ಬಂಡಾಯ ಸಂಘಟನೆ ನಡೆಸುತ್ತಿದ್ದರು.

ಕಂದಾಯ ವಸೂಲಿ ಮಾಡಿದ ಹಣವನ್ನು ತುಂಬಿಕೊಂಡು ಬ್ರಿಟಿಷರು ಬಂದೂಕು ಹಿಡಿದ ಸೈನಿಕರ ರಕ್ಷಣೆಯಲ್ಲಿ ಕಲ್ಕತ್ತಕ್ಕೆ ಹೋಗುವ ದಾರಿಯಲ್ಲಿ ಪತ್ನಿ ಮತ್ತು ಮಗಳನ್ನು ಹುಡುಕುತ್ತಾ ಮಹೇಂದ್ರಸಿಂಹನು ಎದುರಿಗೆ ಬಂದನು. ಮದೋನ್ಮತ್ತರಾದ ಬ್ರಿಟಿಷ್ ಸಿಪಾಯಿಗಳು ಪ್ರತಾಪಸಿಂಹನನ್ನು ತಳ್ಳಿ–ತಳ್ಳಿ ಮುಂದೆ ಸಾಗುತ್ತಿದ್ದರು. ಬ್ರಿಟಿಷ್ ಸಿಪಾಯಿನೊಬ್ಬ ಮಹೇಂದ್ರಸಿಂಹನನ್ನು ಡಕಾಯಿತನೆಂದು ತಿಳಿದು ಮಹೇಂದ್ರಸಿಂಹನ ಬಂದೂಕನ್ನು ಕಿತ್ತುಕೊಂಡನು. ನಿಸ್ಸಹಾಯಕನಾದ ಮಹೇಂದ್ರಸಿಂಹನ ಬಗ್ಗೆ ಕುದುರೆ ಸವಾರನಾದ ಬ್ರಿಟಿಷ್ ಅಧಿಕಾರಿಗೆ ಸಿಪಾಯಿ ದೂರು ಹೇಳಿದನು. ಆ ಬ್ರಿಟಿಷ್ ಅಧಿಕಾರಿ ಕುಡಿದ ಅಮಲಿನಲ್ಲಿ ಈತನಿಗೆ ಮದುವೆ ಮಾಡು ಎಂದು ಬಿಟ್ಟನು. ಅಮಲಿನ ಬಾಯಲ್ಲಿ 'ಖೈದು ಮಾಡು' ಎಂಬುದು ಮದುವೆ ಎಂದಾಗಿ ಹೊರಹೊಮ್ಮಿತ್ತು. ಸಿಪಾಯಿಗಳು ಮಹೇಂದ್ರಸಿಂಹನನ್ನು ಸೆರೆಹಿಡಿದು ಜೊತೆಯಲ್ಲಿ ಎಳೆದೊಯ್ದರು.

ತೇಜಸ್ವಿ ಬ್ರಹ್ಮಚಾರಿಯ ಆಪ್ತ ಶಿಷ್ಯ, ಭವಾನಂದನು ಗುರುಗಳ ಆದೇಶದಂತೆ ಮಹೇಂದ್ರಸಿಂಹನು ಉಳಿದುಕೊಂಡಿದ್ದ ಧರ್ಮಶಾಲೆಗೆ ಬಂದು ವಿಚಾರಿಸಿದನು. ಯಾರೊಬ್ಬರೂ ಸುಳಿವು ನೀಡಲಿಲ್ಲ. ಹಿಂತಿರುಗುವಾಗ ಮಹೇಂದ್ರ ಸಿಂಹನನ್ನು ಸೆರೆಹಿಡಿದಿದ್ದ ಸಿಪಾಯಿಗಳು ಎದುರಾದರು. ಭವಾನಂದ ಸಿಪಾಯಿಗಳಿಗೆ ದಾರಿ ಬಿಟ್ಟು ದಾರಿಯ ಬದಿಯಲ್ಲಿ ನಿಂತನು. ಸಿಪಾಯಿಗಳು ನೋಡಿ ಈತನೂ ದರೋಡೆಕೋರನೆಂದು ತೀರ್ಮಾನಿಸಿದನು. ಭವಾನಂದನನ್ನು ಸೆರೆ ಹಿಡಿದು ಮಹೇಂದ್ರನೊಟ್ಟಿಗೆ

ಕರೆದೊಯ್ದರು. ನಂತರ ಬ್ರಹ್ಮಚಾರಿಯೂ ಸೇರಿ ಬಹು ಉಪಾಯದಿಂದ ಹಣ ತುಂಬಿದ ಎತ್ತಿನಗಾಡಿಯ ಕಾವಲು ಸಿಪಾಯಿಗಳನ್ನು ಕೊಂದುಹಾಕಿ ಹಣವನ್ನು ವಶಕ್ಕೆ ಪಡೆಯಲಾಯಿತು. ಭವಾನಂದ, ಜೀವಾನಂದ, ಮಹೇಂದ್ರಸಿಂಹನೂ ಸೇರಿ ಹಣದ ಗಾಡಿಯನ್ನು ವಶಕ್ಕೆ ಪಡೆದರು.

ಭವಾನಂದ ಬಂಡಾಯಗಾರನಾಗಿ ತೋರುವಷ್ಟೇ ಕಠಿಣ ಮನಸ್ಸಿನವನಾಗಿರಲಿಲ್ಲ. ಭೂಮಿಯ ಮೇಲಿನ ಬೆಳದಿಂಗಳ ರಮ್ಯತೆಯನ್ನು ಕಂಡು ಭಾವತೀವ್ರತೆಗೆ ಒಳಗಾಗುವ ಪ್ರಕೃತಿಯ ಸೌಂದರ್ಯವನ್ನು ಆಸ್ವಾದಿಸುವ ಮನಸ್ಸಿನವನಾಗಿದ್ದ. ಹಣ ತುಂಬಿದ ಗಾಡಿಯ ಉಸ್ತುವಾರಿ ನಡೆಸುತ್ತಿದ್ದ ಸೈನ್ಯಾಧಿಕಾರಿಯ ತಲೆ ಕತ್ತರಿಸುವಾಗ ಇದ್ದ ಮನಃಸ್ಥಿತಿ ಕೂಡಲೇ ಬದಲಾಗಿತ್ತು. ಆನಂದೋತ್ಸಾಹದಿಂದ ನಿಸರ್ಗದ ರಮಣೀಯತೆಯನ್ನು ಆಸ್ವಾದಿಸುವ ಭಾವತೀವ್ರತೆ ಆತನದಾಗಿತ್ತು. ಆತ ಹಾಡತೊಡಗಿದ. ಆ ಹಾಡು ಮಲ್ಲಾರಿ ರಾಗದಲ್ಲಿತ್ತು. ಬಹುಶಃ 'ವಂದೇ ಮಾತರಂ' ಗೀತೆಯನ್ನು ಕೇಳದ ಯಾವ ಭಾರತೀಯನೂ ಇಲ್ಲವೆನ್ನಬಹುದು.

ಹಾಡಿನ ಪಲ್ಲವಿ,
ವಂದೇ ಮಾತರಂ,
ಸುಜಲಾಂ ಸುಫಲಾಂ
ಮಲಯಜ ಶೀತಲಾಂ
ಸಸ್ಯ ಶಾಮಲಾಂ
ಮಾತರಂ

ವಂದೇ ಮಾತರಂ ಗೀತೆಯು ಭರತ ಭೂಮಿಯನ್ನು ಮಾತೃಭೂಮಿಗೆ ಸಮೀಕರಿಸಿ ಹಾಡಿರುವ ಹಾಡಾಗಿದೆ. ಬಂಕಿಮಚಂದ್ರರು ದೇಶಭಕ್ತಿಯ ಕವಿಯಾಗಿ ಈ ಹಾಡನ್ನು ರಚಿಸಿದ್ದಾರೆ. ಒಂದು ದೃಷ್ಟಿಯಲ್ಲಿ 'ಆನಂದಮಠ' ಕಾದಂಬರಿಯ ಕಥಾವಸ್ತು 'ವಂದೇ ಮಾತರಂ' ಗೀತೆಯಾಗಿದೆ. ದೃಷ್ಟಾಂತದ ಪರಿಯಲ್ಲಿಯೂ ಭಾವಗೀತೆಯದರ ವ್ಯಾಖ್ಯಾನದಂತೆಯೂ ಬಿಂಬಿತವಾಗಿದೆ ಯೆನ್ನಬಹುದು. ಆನಂದಮಠ ಕಾದಂಬರಿಯಲ್ಲಿ ಬರುವ ಬಂಡಾಯ ಮನೋಧರ್ಮದ ಸ್ವತಂತ್ರಾಭಿಲಾಷಿಗಳೆಲ್ಲರೂ ಈ ಗೀತೆಯನ್ನು ಸ್ಫೂರ್ತಿಯ ಆವಾಹನೆಗಾಗಿ ಹಾಡಿಕೊಳ್ಳುವಂತಹ ಸನ್ನಿವೇಶಗಳನ್ನು ಸೃಷ್ಟಿಸಿದ್ದಾರೆ ಬಂಕಿಮಚಂದ್ರರು. 'ವಂದೇಮಾತರಂ' ಗೀತೆಯನ್ನು ಹಾಡಿದ ಭವಾನಂದನು ಭಾವತೀವ್ರತೆಗೊಳಗಾಗಿ ಕಣ್ಣೀರನ್ನು ಸುರಿಸುತ್ತಾನೆ.

ಈ ಕಾದಂಬರಿಯನ್ನು ವಂದೇ ಮಾತರಂ ಗೀತೆಯನ್ನು ಬಳಸಿದ್ದರಿಂದ ಕಾದಂಬರಿಯ ಜನಪ್ರಿಯತೆಯ ಜೊತೆಗೆ, ಸ್ವಾತಂತ್ರ್ಯದ ರಣಕಹಳೆ ದೇಶದೆಲ್ಲೆಡೆ ಮೊಳಗಿಸಲು ಸಾಧ್ಯವಾಯಿತು. ಈ ಗೀತೆಯು ಉಂಟುಮಾಡಿದ ಪರಿಣಾಮವನ್ನು ಕವಿ ರವೀಂದ್ರನಾಥ ಠಾಕೂರರು "ಅದನ್ನು ಹಾಡತೊಡಗಿದಾಗ ನನ್ನಲ್ಲಿ ಆಪಾದಮಸ್ತಕ ವಿದ್ಯುತ್ಸಂಚಾರವಾಯಿತು. ಹೃದಯ ಆವೇಗಕ್ಕೆ ಒಳಗಾಯಿತು. 'ಇದೊಂದು ಹಾಡಲ್ಲ ಜ್ವಾಲಾಮುಖಿ' ಎನಿಸಿತು. ಹಾಡಿನ ಒಂದೊಂದು ಶಬ್ದವು ಶ್ರೋತೃಗಳನ್ನು ಪುಲಕಗೊಳಿಸಿತು"[೮]

---

೮. ಆನಂದ ಮಠ, ಅನುವಾದ -ಗಿ. ಎಸ್.ಆರ್.ರಾಮಸ್ವಾಮಿ. ರಾಷ್ಟ್ರೋತ್ಥಾನ ಸಾಹಿತ್ಯ, ಬೆಂಗಳೂರು, ೨೦೧೧, ಪುಟ-xviii.

ವಂದೇ ಮಾತರಂ ಗೀತೆಯ ಹೆಸರಿನಲ್ಲಿ ಸ್ವಾತಂತ್ರ್ಯ ಹೋರಾಟಗಾರರು ಪತ್ರಿಕೆಯನ್ನು ನಡೆಸುತ್ತಿದ್ದುದನ್ನು ಕಾಣಬಹುದಾಗಿದೆ. ಬಿಪಿನ್ ಚಂದ್ರಪಾಲ್, ಲಾಲಾ ಲಜಪತ್‌ರಾಯ್, ಶ್ರೀ ಅರವಿಂದರು ವಂದೇ ಮಾತರಂ ಶೀರ್ಷಿಕೆಯ ಪತ್ರಿಕೆಗಳನ್ನು ನಡೆಸಿ ರಾಷ್ಟ್ರಾಭಿಮಾನವನ್ನು ಮೂಡಿಸಿದರು.

ಮಠದ ಬ್ರಹ್ಮಚಾರಿ ಸತ್ಯಾನಂದ ಮಹೇಂದ್ರಸಿಂಹನಿಗೆ ಮಹಾವಿಷ್ಣುವಿನ ಮೂರ್ತಿಶಿಲ್ಪವನ್ನು ತೋರಿಸಿ ಅದೇ ದೇವಾಲಯದ ನೆಲಮಾಳಿಗೆಯಲ್ಲಿದ್ದ ಮಹಾಕಾಳಿಯ ಮೂರ್ತಿಶಿಲ್ಪವನ್ನು ತೋರಿಸಿ ಈ ಮಹಾತಾಯಿ ಸಂತಾನರ ಮಾತೃವೆಂದೂ ಈಕೆ ದೇಶದ ಪರ್ಯಾಯ ಸ್ವರೂಪಿಣಿಯೆಂದೂ, ದೇಶದ ಸ್ಥಿತಿಯನ್ನು ಬಿಂಬಿಸುವಂತಹ ಬೆತ್ತಲೆ ರೂಪದಲ್ಲಿ ನಿಂತಿರುವಳೆಂದೂ ಕಾಲ ಮತ್ತು ದೇಶದ ಅಂದಿನ ಸ್ಥಿತಿಯನ್ನು ಮಹಾಕಾಳಿಯ ವಿಗ್ರಹಕ್ಕೆ ಸಮೀಕರಿಸಿ ವರ್ಣಿಸುತ್ತಾನೆ. ಮಹೇಂದ್ರ ಸಿಂಹನ ಧಮನಿಗಳಲ್ಲಿ ಭಯ ಮತ್ತು ಭಕ್ತಿಗಳು ಹರಿದಾಡಿದಂತಹ ಅನುಭವವಾಗುತ್ತದೆ. ಸತ್ಯಾನಂದ ಕಾಳಿಯನ್ನು ವರ್ಣಿಸುತ್ತಾ “ಕಾಳಿ ಕತ್ತಲು ಮುಸುಕಿ ಕಪ್ಪಾಗಿದ್ದಾಳೆ. ಎಲ್ಲವೂ ಹೋಗಿ ಬೆತ್ತಲೆ ನಿಂತಿದ್ದಾಳೆ, ಇಂದು ದೇಶದೆಲ್ಲೆಲ್ಲೂ ಸ್ಮಶಾನ, ಅದಕ್ಕೆ ತಾಯಿಯು ಮೂಳೆಗಳ ಮಾಲೆ ಧರಿಸಿದ್ದಾಳೆ.”[೯] ಮುಂತಾದ ಮಾತುಗಳಿಂದ ದೇಶದ ಸದ್ಯದ ಸ್ಥಿತಿಯ ಚಿತ್ರಣವನ್ನು ಸಾಂಕೇತಿಕವಾಗಿ ವರ್ಣಿಸುತ್ತಾನೆ. ಮುಂದೆ ಅಮೃತಶಿಲೆಯ ದೇಗುಲದಲ್ಲಿದ್ದ ಬಂಗಾರದ ಕಾಳಿಯ ಭವ್ಯಮೂರ್ತಿಯನ್ನು ಮಹೇಂದ್ರ ಸಿಂಹನಿಗೆ ತೋರಿಸಿ, ಮುಂದಿನ ದಿನಗಳಲ್ಲಿ ತಾಯಿಯ ರೂಪ ಹೀಗಾಗಬೇಕೆಂದು ಸಂಕಲ್ಪದ ಮಾತು ಹೇಳುತ್ತಾನೆ. ಸತ್ಯಾನಂದನು ಕಳ್ಳರ ಸೆರೆಯಲ್ಲಿ ನಿತ್ರಾಣಳಾಗಿದ್ದ ಮಹೇಂದ್ರಸಿಂಹನ ಪತ್ನಿ ಕಲ್ಯಾಣಿಯನ್ನು ರಕ್ಷಿಸಿದ ಆಪದ್ಬಾಂಧವನಾಗಿದ್ದನು.

ಮಹೇಂದ್ರಸಿಂಹನಿಗೆ ಪತ್ನಿ ಕಲ್ಯಾಣಿಯನ್ನು ಮಗುವನ್ನು ದುಃಖದಿಂದ ತೋರಿಸುವ ಮಾತುಗಳನ್ನಾಡಿ ಆತನ ಉದ್ವೇಗ ಸ್ಥಿತಿಯನ್ನು ಶಮನಗೊಳಿಸುತ್ತಾನೆ. ಕಲ್ಯಾಣಿ ಶೋಕತಪ್ತಳಾಗಿ ಊಟವನ್ನೇ ಮಾಡಿಲ್ಲವೆಂಬ ವಿವರಣೆಯೂ ಸತ್ಯಾನಂದನಿಂದ ದೊರಕುತ್ತದೆ. ಮಹೇಂದ್ರಸಿಂಹನು ಮಾತೃಸೇವೆಯ ದೀಕ್ಷೆ ಹೊಂದಲು ಅಪೇಕ್ಷಿತನಾಗಿ ಮಠದಿಂದ ಪತ್ನಿಯೊಡನೆ ‘ಪದಚಿಹ್ನ’ ಗ್ರಾಮಕ್ಕೆ ಪ್ರಯಾಣ ಬೆಳೆಸುತ್ತಾನೆ. ಕಾಡಿನಲ್ಲಿ ಎಷ್ಟು ಅಲೆದಾಡಿದರೂ ಅರಣ್ಯದಿಂದ ಹೊರಗೆ ಹೋಗುವ ದಾರಿ ಸಿಕ್ಕಲಿಲ್ಲ. ಕೊನೆಗೆ ಸಂತಾನಗೋಸಾಯಿ ಧೀರಾನಂದನ ಮಾರ್ಗ ಸೂಚನೆಯನ್ನು ಅನುಸರಿಸಿ ದಟ್ಟ ಕಾಡಿನ ಗರ್ಭದಿಂದ ಹೊರ ಜಗತ್ತಿಗೆ ಬರುತ್ತಾನೆ. ಮಹೇಂದ್ರಸಿಂಹ ತನಗರಿವಿಲ್ಲದಂತೆ ‘ಸಂತಾನ ಹೋರಾಟಗಾರರ ಗುಂಪಿನಲ್ಲಿ ಒಬ್ಬನಾಗಿ ಬಿಡುತ್ತಾನೆ. ಮಹೇಂದ್ರಸಿಂಹನು ಮಾತೃಸೇವಾಕಾಂಕ್ಷಿಯಾಗಿರಲು ಕಲ್ಯಾಣಿಯು ತಾನು ಗಂಡನಿಂದ ದೂರವಾಗದಿದ್ದರೆ ಮಹೇಂದ್ರಸಿಂಹ ವ್ರತ ಪಾಲಿಸಲು ಸಾಧ್ಯವಾಗುವುದಿಲ್ಲವೆಂದು ಬಗೆದು ತಾನು ತನ್ನ ಮಗುವೂ ವಿಷದ ಗುಳಿಗೆಯನ್ನು ನುಂಗಿದರು. ಕಲ್ಯಾಣಿಯ ಈ ತ್ಯಾಗ ಬಲಿದಾನಕ್ಕೆ ಮಹೇಂದ್ರಸಿಂಹನೂ ಎಳೆಮಗುವಿನಂತೆ ಅಳುತ್ತಿರಲು ಕಲ್ಯಾಣಿ ವಿಷ್ಣು ಸ್ಮರಣೆಯಾದ ಹರೇ ಮುರಾರೆ ಎಂಬ ಸ್ತುತಿ

---

೯. ಬಿ. ವೆಂಕಟಾಚಾರ್ಯ ‘ಆನಂದಮಠ’ ಕರ್ನಾಟಕ ಅನುವಾದ ಸಾಹಿತ್ಯ ಅಕಾಡೆಮಿ ಪುಟ–೨೭

ಗೀತೆಯನ್ನು ಹಾಡಿದಳು. ಗಂಡನನ್ನು ಹಾಡುವಂತೆ ಪ್ರೇರೇಪಿಸಿದಳು. ಸಂತಾನರಿಗೆ ವಿಷ್ಣು ಸ್ತುತಿ ರಕ್ಷಾಧ್ವನಿಮಣಿಯಂತೆ ಒದಗುತ್ತಿತ್ತು. ಇಲ್ಲಿ ಕುಟುಂಬ ಪ್ರೇಮಕ್ಕಿಂತ ರಾಷ್ಟ್ರಪ್ರೇಮದ ಮಹತ್ವವನ್ನು ಬಂಕಿಮಚಂದ್ರರು ಈ ಪಾತ್ರಗಳ ಮೂಲಕ ಜಾಗೃತಗೊಳಿಸುತ್ತಾರೆ.

ಅನಾಥವಾದ ಮಗುವನ್ನು ಜೀವಾನಂದನು ಪೋಷಿಸಲು ನಿರ್ಧರಿಸಿದನು. ಕಲ್ಯಾಣಿಯು ನಿರ್ಜೀವವಾಗಿ ನದಿತೀರದ ಮರದ ಬುಡದಲ್ಲಿಯೇ ಬಿದ್ದಿದ್ದಳು. ಸತ್ಯಾನಂದ ಮತ್ತು ಮಹೇಂದ್ರರಿಬ್ಬರೂ ಮಹಮ್ಮದೀಯ ಸುಭೇದಾರನಿಗೆ ಸೆರೆ ಸಿಕ್ಕಿ ಸೆರೆಮನೆಯಲ್ಲಿರುವಾಗ ಧೀರಾನಂದನೆಂಬ ಸಂತಾನರ ಸಂನ್ಯಾಸಿ ಮಾರುವೇಷ ಧರಿಸಿ ಸೆರೆಮನೆಯ ಪಹರೆಯವನಂತೆ ಪ್ರವೇಶಿಸಿ ಸತ್ಯಾನಂದ ಮತ್ತು ಮಹೇಂದ್ರಸಿಂಹನನ್ನು ಬಿಡುಗಡೆಗೊಳಿಸಲು ಪ್ರಯತ್ನಿಸಿದರೂ ಕಾರ್ಯಕಾರಣಗಳಿಂದ ಸತ್ಯಾನಂದನು ಸೆರೆಮುಕ್ತನಾಗದೆ ಸೆರೆಯಲ್ಲಿಯೇ ಇರುತ್ತಾನೆ. ಗುರುಗೌರವದಿಂದ ಮಹೇಂದ್ರಸಿಂಹನೂ ಸತ್ಯಾನಂದನೊಡನೆಯೇ ಇರುತ್ತಾನೆ. ಜೀವಾನಂದ ಮಹೇಂದ್ರನ ಮಗುವನ್ನು ಸೋದರಿಗೆ ಒಪ್ಪಿಸಿ ಪೋಷಣೆ ಮಾಡುವಂತೆ ತಿಳಿಸುತ್ತಾನೆ.

### ೩.೬. ಸ್ತ್ರೀ ಸಬಲೀಕರಣದ ವ್ಯಾಖ್ಯೆ

ಆನಂದಮಠ ಕಾದಂಬರಿಯಲ್ಲಿ ಬರುವ ದೇಶಪ್ರೇಮದ ವ್ರತ ಸ್ವೀಕರಿಸಿ ಸ್ತ್ರೀಪಾತ್ರಗಳೆಲ್ಲವೂ ಭಾರತೀಯ ಸಂಸ್ಕೃತಿಯ ದೃಷ್ಟಾಂತಗಳ ಪರಿಧಿಯಲ್ಲಿ ಚರ್ಚೆಯಾಗಿವೆ. ಜೀವಾನಂದ ತನ್ನ ಪತ್ನಿ ಶಾಂತಿಯನ್ನು ಮತ್ತು ಮನೆಯನ್ನು ತೊರೆದು ದೇಶಭಕ್ತಿಯ ಸೇವೆಯಲ್ಲಿ ತನ್ನನ್ನು ತೊಡಗಿಸಿಕೊಂಡಿರುತ್ತಾನೆ. ಬಂಕಿಮಚಂದ್ರರ ಕಾದಂಬರಿಯ ಸ್ತ್ರೀಪಾತ್ರಗಳು ಭಾರತೀಯ ಆದರ್ಶ ಮಹಿಳೆಯರ ಪರಂಪರೆಯನ್ನು ಪಾಲಿಸಿಕೊಂಡವುಗಳು. ತಂತಮ್ಮ ಪತಿಗಳ ಯಶಸ್ಸಿನಲ್ಲಿ ತಮ್ಮ ತ್ಯಾಗದ ಪಾಲು ಸೇರಲೆಂಬ ಮಹತ್ವಾಕಾಂಕ್ಷೆಯಿಂದ ಜೀವಿಸುವ ತ್ಯಾಗಮಯಿ(ಯರು)ಗಳು. ಜೀವಾನಂದನ ಪತ್ನಿ ದಾರಿದ್ರ್ಯವನ್ನು ಆವಾಹಿಸಿಕೊಂಡು ಚಿಂದಿಯನ್ನುಟ್ಟು ಚರಕದಲ್ಲಿ ನೂಲುವ ಕೆಲಸದಲ್ಲಿ ಮಗ್ನಳಾಗಿರುತ್ತಾಳೆ. ಜೀವಾನಂದನ ಸೋದರಿ ಮನೆಗೆ ಅಪರೂಪಕ್ಕೆ ಬಂದ ಅಣ್ಣನೊಡನೆ ಅತ್ತಿಗೆಯ ಸಮಾಗಮವಾಗಲೆಂಬ ಆಶಯದಿಂದ ಯತ್ನಿಸಿ ಶಾಂತಿಯನ್ನು ಕರೆತಂದು ಜೀವಾನಂದನ ಬಳಿ ಕಳುಹಿಸುತ್ತಾಳೆ. ಜೀವಾನಂದ ಪತ್ನಿಯ ಸ್ಥಿತಿಯನ್ನು ಆಕೆಯ ಸೌಂದರ್ಯವನ್ನು ಕಂಡು ಮರುಗುತ್ತಾನೆ. ತಾನು ಮಾಡಿದ ಅನ್ಯಾಯವನ್ನು ನೆನೆದು ಕಣ್ಣೀರು ಸುರಿಸುತ್ತಾನೆ. ಮರಳಿ ಅಜ್ಞಾತ ಹೋರಾಟಕ್ಕೆ ಹೋಗುವುದಿಲ್ಲವೆಂದು ಹೇಳುತ್ತಾನೆ. 'ಶಾಂತಿ' ಪತಿಜೀವಾನಂದನ ಉದ್ವೇಗವನ್ನು ಸಾಂತ್ವನಗೊಳಿಸಿ "...ನೀನು ವೀರ, ನಾನು ವೀರಪತ್ನಿಯೆಂಬುದು ನನಗೆ ಈ ಪ್ರಪಂಚದಲ್ಲಿ ಎಲ್ಲಕ್ಕಿಂತಲೂ ಹೆಚ್ಚು ಸುಖವನ್ನುಂಟು ಮಾಡುವಂತಹುದು, ನೀನು ಹಾಳು ಹೆಣ್ಣಿಗಾಗಿ ಧರ್ಮವನ್ನು ಬಿಡುವೆಯಾ?.. ನೀನು ಎಂದೂ ವೀರ ಧರ್ಮವನ್ನು ಬಿಡಬೇಡ."[೧೦]

---

೧೦. ಆನಂದಮಠ, ಅನುವಾದ -೧, ಎಸ್.ಆರ್.ರಾಮಸ್ವಾಮಿ, ರಾಷ್ಟ್ರೋತ್ಥಾನ ಸಾಹಿತ್ಯ, ಬೆಂಗಳೂರು, ೨೦೧೧ ಪುಟ-೬೩

ಇಂತಹ ಉದಾತ್ತ ಧ್ಯೇಯಾದರ್ಶಗಳನ್ನು ಹೊಂದಿದ ಕೆಲ ಸ್ತ್ರೀ ಪಾತ್ರಗಳಲ್ಲಿ 'ಶಾಂತಿ'ಯೂ ಒಬ್ಬಳು. ತಾಯಿ ನಾಡಿನ ಯಶಸ್ಸಿಗೆ, ಪಾರತಂತ್ರ್ಯದ ವಿಮೋಚನೆಗೆ ಈ ಸ್ತ್ರೀ ಪಾತ್ರಗಳು ತುಡಿಯುವುದನ್ನು 'ಆನಂದಮಠ' ಕಾದಂಬರಿಯಲ್ಲಿ ಕಾಣಬಹುದು. ಬಂಗಾಳೀ ಸ್ತ್ರೀಯರು ರೂಪಿನಲ್ಲಿ ಎಷ್ಟೊಂದು ಸುಂದರಿಯರೋ ಗುಣಸ್ವಭಾವದಲ್ಲಿಯೂ ರೂಪಾತಿಶಯವುಳ್ಳವರು. ಬಂಕಿಮಚಂದ್ರರು ಇಂತಹ ಹಲವಾರು ಮಹಿಳಾಮಣಿಗಳನ್ನು ಸಹೃದಯರಿಗೆ ಪರಿಚಯಿಸಿಕೊಡುತ್ತಾರೆ.

ಮುಸಲ್ಮಾನ ಆಡಳಿತಗಾರರು ಕಾವಿ ಧರಿಸಿದ ಸಂನ್ಯಾಸಿಗಳನ್ನು ಸೆರೆ ಹಿಡಿಯುತ್ತಿದ್ದರು. ಆದಕಾರಣ ಸಂನ್ಯಾಸಿಗಳು ಮುಸಲ್ಮಾನ ತರುಣರಂತೆ ವೇಷ ಧರಿಸಿ ಕಾರ್ಯಚಟುವಟಿಕೆ ನಡೆಸುತ್ತಿದ್ದರು. ಭವಾನಂದನೆಂಬ ಸಂನ್ಯಾಸಿಯೂ ಕೂಡ ಮಠದಲ್ಲಿದ್ದ ಉಡುಪು ಧರಿಸಿ ಮಾರುವೇಷ ಹಾಕಿದುದನ್ನು ಬಂಕಿಮರು ಸ್ವಾರಸ್ಯವಾಗಿ ವರ್ಣಿಸುತ್ತಾರೆ. ಮಾರುವೇಷದ ಭವಾನಂದ ನದೀತೀರದ ಮರದ ಬುಡದಲ್ಲಿ ಪ್ರಾಣ ತೊರೆದು ಬಿದ್ದಿದ್ದ ಕಲ್ಯಾಣಿಯನ್ನು ನೋಡಿ ಆಕೆಗೆ ವಿಷಪ್ರಾಶನವಾಗಿದೆಯೆಂದು ತಿಳಿದು, ನಾಡಿಯನ್ನು ಪರೀಕ್ಷಿಸಿ ವಿಷಾಪಹಾರಿ ಮುದ್ದಿನ ಎಲೆಗಳಿಂದ ರಸ ತೆಗೆದು ಆಕೆಯ ಬಾಯಿಗೆ, ಮೂಗಿಗೆ ಹಾಕುತ್ತಾನೆ. ಅದೇ ರಸವನ್ನು ಆಕೆಯ ಅಂಗಾಲುಗಳಿಗೆ ತಿಕ್ಕಿ ತಿಕ್ಕಿ ದೇಹ ಬಿಸಿಯೇರುವಂತೆ ಮಾಡುತ್ತಾನೆ. ಬಹಳ ಹೊತ್ತಿನ ಮೇಲೆ 'ಕಲ್ಯಾಣಿ'ಗೆ ಉಸಿರಾಟ ಪ್ರಾರಂಭವಾಗುತ್ತದೆ. ಭವಾನಂದನು ನೀಡಿದ ವಿಷಾಪಹಾರಿ ಶುಶ್ರೂಷೆಯಿಂದ 'ಕಲ್ಯಾಣಿ'ಗೆ ಹೋದ ಜೀವ ಮರಳಿ ಬಂದಂತಾಗುತ್ತದೆ.

ಆನಂದಮಠ ಕಾದಂಬರಿಯಲ್ಲಿ ಬರುವ ಎಲ್ಲ ಪಾತ್ರಗಳಿಗಿಂತ ಶಾಂತಿಯ ಪಾತ್ರವೇ ಓದುಗರ ಆಸಕ್ತಿಗೆ ಕಾರಣವಾಗಿದೆ. 'ಶಾಂತಿ' ಜೀವಾನಂದನ ಬಾಲ್ಯದ ಗೆಳತಿಯಂತಹ ಪರಿಚಿತಳು. ಶಾಂತಿ ಒಂದು ಮಾತಿನಲ್ಲಿ ಹೇಳಬಹುದಾದರೆ ಯಾರೂ ಇಲ್ಲದ ಅನಾಥೆ; ಬಾಲ್ಯದಲ್ಲಿಯೇ ಜೀವಾನಂದ ಶಾಂತಿಯನ್ನು ವಿವಾಹವಾಗಿ, ಕೆಲದಿವಸಗಳ ನಂತರ ದೇಶಸೇವೆಯ ದೀಕ್ಷೆ ಹೊಂದಿ ಸಂತಾನರ ಧರ್ಮದಂತೆ 'ಪತ್ನಿ' ಹಾಗೂ ಮನೆಯಿಂದ ದೂರವಾಗಿರುತ್ತಾನೆ. ಜೀವಾನಂದನ ತಂಗಿ 'ನಿಮಾಯಿ' ಚಿನ್ನದಂತಹ ಹುಡುಗಿ. ಜೀವಾನಂದನು ಶಾಂತಿಯನ್ನು 'ನಿಮಾಯಿ' ಬಳಿ ತಂದು ಬಿಟ್ಟಾಗ ಹೆಂಗರುಳಿನ ಪ್ರತಿರೂಪವಾಗಿ ಶಾಂತಿಯನ್ನು ಸಂತೈಸಿದಳು. ಅಣ್ಣನ ಪತ್ನಿ ಅತ್ತಿಗೆಯೆಂಬ ಪ್ರೀತ್ಯಾದರಗಳಿಗೆ ಕೊರತೆ ತೋರದೆ ಹೊಂದಾಣಿಕೆಯ ಬದುಕನ್ನು ನಡೆಸುತ್ತಿದ್ದಳು. ಅಣ್ಣ ಜೀವಾನಂದ ಸಂತಾನ ಧರ್ಮ ದೀಕ್ಷಿತನಾದಾಗ ಶಾಂತಿ ನೂರುಗಂಟಿನ ಹರಕು ಸೀರೆಯುಟ್ಟು ಸಂನ್ಯಾಸಿನಿಯಂತೆ ಚರಕ ಹಿಡಿದು ನೂಲುವಾಗಿನ ಪ್ರತಿದಿನವು ಕೂಡ ಶಾಂತಿಯ ಉಪಚಾರದಲ್ಲಿ ಮಗ್ನಳಾಗಿದ್ದಳು. ಜೀವಾನಂದನು ಒಂದು ದಿನ 'ಕಲ್ಯಾಣಿಯ ಮಗುವನ್ನು ತಂಗಿಯ ಮನೆಗೆ ತಂದು ಸೇರಿಸುವ ಕಾರಣಕ್ಕೆ ಮನೆಗೆ ಬಂದಾಗ 'ನಿಮಾಯಿ' ಸೋದರನಿಗೆ ಭೋಜನವಿಟ್ಟು ಉಪಚರಿಸಿ ಶಾಂತಿ ಮತ್ತು ಜೀವಾನಂದರ ಮುಖಾಮುಖಿಗೆ ಮುತುವರ್ಜಿ ವಹಿಸುತ್ತಾಳೆ. "ನಿಮ್ಮಿ ಚಕ್ಕಂಬಟ್ಲು ಹಾಕಿ ಕುಳಿತು ಮಗುವನ್ನು ಮಲಗಿಸಿಕೊಂಡು ಹಾಲನ್ನು ತಣ್ಣಗೆ ಮಾಡಿ ಒಳಲೆಯಿಂದ ಕುಡಿಸತೊಡಗಿದಳು. ಇದ್ದಕ್ಕಿದ್ದಂತೆ ಅವಳ ಕಣ್ಣಿನಿಂದ ನೀರು ತೊಟ್ಟಿಕ್ಕಿತು.

ಅವಳಿಗೊಂದು ಗಂಡುಮಗುವಾಗಿ ತೀರಿಕೊಂಡಿತ್ತು. ಆ ಮಗುವಿನದೇ ಇಲ್ಲಿದ್ದ ಒಳಲೆ."೧೧ 'ನಿಮಾಯಿ' ಕಲ್ಯಾಣಿಯ ಶಿಶುವನ್ನು ಬಹು ಅಕ್ಕರೆಯಿಂದ ಪೋಷಿಸುವ ಹೃದಯ ವೈಶಾಲ್ಯ ಹೊಂದಿದವಳಾಗಿದ್ದಾಳೆ. ಕೆಲದಿನಗಳ ನಂತರ ತನ್ನ ಮಗುವಂತೆ ಬೆಳೆಸಿದ ಕಲ್ಯಾಣಿಯ ಮಗುವನ್ನು ಪದಚಿಹ್ನದಲ್ಲಿ ಬಿಟ್ಟು ಬರುವ ಸಂದರ್ಭದಲ್ಲಿ ಎಳೆಮಗುವಿನಂತೆ ಅಳುತ್ತಾಳೆ.

ಬಂಕಿಮಚಂದ್ರರು ಸಾತ್ವಿಕ ಸ್ವಭಾವದ ಸುಸಂಸ್ಕೃತ ಬಂಗಾಳೀ ಮಹಿಳಾ ಪಾತ್ರಗಳನ್ನು ಚಿತ್ರಿಸುವುದರಲ್ಲಿ ಸಿದ್ಧಹಸ್ತರು. ಆ ಸ್ತ್ರೀಯರ ಚೆಲುವನ್ನು, ಗುಣಗಳನ್ನು ಅತಿಯಾದ ಭಾವುಕತೆಯಿಂದಲೇ ಚಿತ್ರಿಸುತ್ತಾರೆ.

ಸತ್ಯಾನಂದ ಸನ್ಯಾಸಿ ಹೋರಾಟಗಾರರ ಮುಖಂಡನಾಗಿರುವುದು ಕಂಡು ಕಾಣದಂತೆ ಗೋಪ್ಯವಾಗಿದೆ. ಮಹೇಂದ್ರಸಿಂಹನನ್ನು ಪದಚಿಹ್ನದಲ್ಲಿ ನೆಲೆಗೊಳಿಸಿ ಆತನನ್ನು ಫಿರಂಗಿ, ಬಂದೂಕುಗಳ ತಯಾರಿಕೆಗೆ ನಿಯೋಜಿಸುವುದು ಕಾದಂಬರಿಯಲ್ಲಿ ಬಹು ರೋಚಕವಾಗಿ ವರ್ಣಿಸಲ್ಪಟ್ಟಿದೆ. ಒಂದು ಕಾಲದಲ್ಲಿ ಶ್ರೀಮಂತ ಜಮೀನ್ದಾರನಾಗಿದ್ದ ಮಹೇಂದ್ರಸಿಂಹ ದೇಶಸೇವೆಯ ದೀಕ್ಷೆ ತೊಟ್ಟು, ಪ್ರಾಣದಾಸೆಯನ್ನು ತೊರೆದು ಶ್ರಮಿಸುತ್ತಾನೆ. ಮುಸಲ್ಮಾನರು ತಮ್ಮಾಡಳಿತಕ್ಕೊಳಪಟ್ಟ ದೇಸೀಯರಿಂದ ಹತ್ತು ಪಟ್ಟು ಕಂದಾಯ – ತೆರಿಗೆಗಳನ್ನು ಗುತ್ತಿಗೆಯ ಆಧಾರದಿಂದ ಬ್ರಿಟೀಷರಿಂದ ಕಟ್ಟುನಿಟ್ಟಾಗಿ ವಸೂಲು ಮಾಡುವ ರೀತಿ ಅಮಾನುಷವಾಗಿತ್ತು. ದೇಶದೆಲ್ಲೆಡೆ ಭೀಕರ ಕ್ಷಾಮದಿಂದ ಜನ ತಲ್ಲಣಿಸುತ್ತಿದ್ದರೂ ಬ್ರಿಟಿಷರು ಮತ್ತು ಮುಸಲ್ಮಾನ ಅರಸರು ಐಷರಾಮಿ ಜೀವನ ನಡೆಸುತ್ತಿದ್ದರು. ಇಂತಹ ಬರ್ಬರ ಸನ್ನಿವೇಶದಲ್ಲಿ ದೇಶಪ್ರೇಮಿಗಳು ಆದ ಸಂತಾನ ಸನ್ಯಾಸಿಗಳು ದೇಶಭಕ್ತಿ ಮತ್ತು ಮಾನವೀಯ ದೃಷ್ಟಿಯಿಂದ ಆಡಳಿತ ವ್ಯವಸ್ಥೆಯ ವಿರುದ್ಧ ಬಂಡೆದ್ದು, ಸರ್ಕಾರದ ಖಜಾನೆಗಳನ್ನು ಲೂಟಿ ಹೊಡೆದು ಹಸಿದವರಿಗೆ ಆಹಾರವನ್ನು ದೊರಕಿಸಿ ಮಾನವೀಯತೆಯನ್ನು ಪ್ರಕಟಿಸಿದ್ದಾರೆ.

'ಸಂನ್ಯಾಸಿಗಳ ದಂಗೆ'ಯೆಂದು ಬಂಕಿಮಚಂದ್ರರು ಭಾವಿಸಿದಂತೆ ತೋರುವುದಿಲ್ಲ. 'ಆನಂದಮಠ' ಕಾದಂಬರಿಯಲ್ಲಿ ಬರುವ ಸಂತಾನರು ಮಹಾವ್ರತವನ್ನು ಕೈಗೊಂಡ ದೇಶಸೇವಕರೆಂದು ಚಿತ್ರಿಸಲಾಗಿದೆ. ಹೆಚ್ಚು ಜನರಿರುವ ಸಮುದಾಯ ಸದುದ್ದೇಶದಿಂದ ಸಂಘಟಿತರಾಗಿ ಹೋರಾಟಕ್ಕಿಳಿದರೆ ಪ್ರಬಲ ಶತ್ರುವನ್ನು ಎದುರಿಸುವ ಸಾಧ್ಯತೆಯಿರುತ್ತದೆ.

ಸಂತಾನರ ಸಂಘಟನೆ ಕಾದಂಬರಿಯಲ್ಲಿ ಸ್ವಾತಂತ್ರ್ಯದ ಸಂಗ್ರಾಮದಂತೆ ಕಾಣುತ್ತದೆ. ಕಾದಂಬರಿಯುದ್ದಕ್ಕೂ "ವಂದೇ ಮಾತರಂ" ಗೀತೆ ಸ್ವಾತಂತ್ರ್ಯ ಹೋರಾಟದ ಸ್ಫೂರ್ತಿಯನ್ನು ಬಿತ್ತುವ ಗೀತೆಯಾಗಿದೆ. ದೇಶಸೇವೆಗೆ ದೀಕ್ಷೆ ಪಡೆದ ಸಂತಾನರು ಸನ್ಯಾಸಿಗಳಂತೆ ವೇಷಧಾರಿಗಳಾಗಿದ್ದಾರೆ. ಕೆಲವು ಗೃಹಸ್ಥ ದೀಕ್ಷೆ ಪಡೆದ ಸಂತಾನರು ತಮ್ಮ ಪತ್ನಿಯ ದರ್ಶನವನ್ನು ಮಾಡಬಾರದೆಂಬ ವ್ರತ ಹಿಡಿದಿದ್ದಾರೆ. ವ್ರತಗೆಟ್ಟರೆ ಪ್ರಾಯಶ್ಚಿತ್ತ ಮಾಡಿಕೊಳ್ಳುವುದು ಎಂದರೆ

---

೧೧. ಆನಂದಮಠ, ಅನುವಾದ-೧. ಎಸ್.ಆರ್.ರಾಮಸ್ವಾಮಿ, ರಾಷ್ಟ್ರೋತ್ಥಾನ ಸಾಹಿತ್ಯ, ಬೆಂಗಳೂರು, ೨೦೧೧, ಪುಟ-೫೬.

ಪ್ರಾಣತ್ಯಾಗವೆಂದು ಭಾವಿಸಲಾಗಿದೆ. ದೇಶಸೇವೆಯ ಸಲುವಾಗಿ ಬಲಿದಾನವಾದರೆ ಅದು ಶ್ರೇಷ್ಠವೆಂಬ ಭಾವನೆ ಸಂತಾನರಲ್ಲಿ ಒಪ್ಪಿತವಾದ ಸಂಗತಿ.

ಬಂಕಿಮಚಂದ್ರರು ಕಾದಂಬರಿಯಲ್ಲಿ ಮುಸಲ್ಮಾನರ ವಿರುದ್ಧ ದ್ವೇಷ ತೀವ್ರತೆಯಿಂದ ಆವೇಶಪಟ್ಟರೂ ಇಂಗ್ಲಿಷರ ಬಗ್ಗೆ ಮೃದುಧೋರಣೆಯುಳ್ಳವರಾಗಿದ್ದಾರೆ. ಪರಕೀಯರೆಂದು ನಿರ್ಧರಿಸುವಾಗ ಮಹಮ್ಮದೀಯರನ್ನು ಮಾತ್ರವೇ ನಿರ್ಧರಿಸಿ ಬ್ರಿಟಿಷರನ್ನು ಶತ್ರುಗಳ ಗುಂಪಿಗೆ ಸೇರಿಸುವುದಿಲ್ಲ. ಇದಕ್ಕೆ ಕಾರಣ ಬಂಕಿಮಚಂದ್ರರು ಬ್ರಿಟಿಷ್ ಸರ್ಕಾರದಲ್ಲಿ ಅಧಿಕಾರಿಯಾಗಿದ್ದವರು. ಇಂಗ್ಲಿಷರಿಂದ ಉಪಕಾರ ಹೊಂದಿದವರು. ಆದರೂ ದೇಶಭಕ್ತಿಗೀತೆ 'ವಂದೇಮಾತರಂ' ರಣಘೋಷವಾಗಿ ಜನರಲ್ಲಿ ಜಾಗೃತಿಯನ್ನುಂಟು ಮಾಡಿತ್ತು. ಆಡಳಿತ ವ್ಯವಸ್ಥೆಯ ಮುಂದೆ ಯಾರಾದರೂ 'ವಂದೇ ಮಾತರಂ' ಹಾಡಿದರೆಂದರೆ ಅಂಥವರನ್ನು ಸೆರೆಮನೆಗೆ ಹಾಕಲಾಗುತ್ತಿತ್ತು. ಬಂಕಿಮಚಂದ್ರರು ಪ್ರಾರಂಭ ಮಾಡಿದ ಸ್ವಾತಂತ್ರ್ಯದ ರಣಕಹಳೆ ಬಹುಕಾಲ ಭಾರತೀಯರ ಸ್ಫೂರ್ತಿಯ ಸೆಲೆಯಾಗಿ ನೆಲೆಸುವಂತಾಯಿತು. ಬಂಕಿಮಚಂದ್ರರಿಗೆ ನೀಚ ಸ್ವಭಾವದ ಬ್ರಿಟಿಷ್ ಅಧಿಕಾರಿಗಳ ಬಗ್ಗೆ ಅಸಹಿಷ್ಣುತೆಯಿದ್ದರೂ ವಾರೆನ್ ಹೇಸ್ಟಿಂಗ್ಸ್‌ನಂಥ ಅಧಿಕಾರಿಗಳ ಬಗ್ಗೆ ಗೌರವವೂ ಇತ್ತು. ಆದರೆ ಎಲ್ಲಿಯೂ ಬಂಕಿಮಚಂದ್ರರು ಬ್ರಿಟಿಷರ ಆರಾಧಕರಾಗಲಿಲ್ಲ.

ಬ್ರಿಟಿಷರು ಭಾರತಕ್ಕೆ ವ್ಯಾಪಾರಕ್ಕೆ ಬಂದವರು. ಅವರ ಮನಸ್ಸು ಮತ್ತು ನೋಟಗಳು ಸಂಪತ್ತಿನ ಮೇಲೆ ಕೇಂದ್ರೀಕೃತವಾಗಿದ್ದವು. ಹಂತಹಂತವಾಗಿ ರಾಜ್ಯಾಡಳಿತಕ್ಕೆ ಪ್ರವೇಶಿಸಿ ಗಟ್ಟಿಯಾಗಿ ನೆಲೆಯನ್ನು ಸ್ಥಾಪಿಸಿಕೊಂಡರು. ರಾಜ್ಯಾಡಳಿತದ ಜೊತೆಗೆ ಭಾರತೀಯರಿಗೆ ಆಧುನಿಕ ಶಿಕ್ಷಣದ ಸಂಚಲನವುಂಟು ಮಾಡಿದರು. ಈ ಸಂಗತಿಯನ್ನು ಬಂಕಿಮಚಂದ್ರರು ಸತ್ಯಾನಂದನ ಮೂಲಕ ಹೇಳಿಸಿದ್ದಾರೆ.

'ಆನಂದಮಠ' ಕಾದಂಬರಿಯಲ್ಲಿ ಬಳಕೆಯಾಗಿರುವ ಸ್ತ್ರೀಪಾತ್ರಗಳು ಯಾವ ಸಂದರ್ಭದಲ್ಲಿಯೂ ಪುರುಷರ ಬಗ್ಗೆ ಉದಾಸೀನತೆಯನ್ನು ತೋರಿಸಿಲ್ಲ. ವಿಧೇಯತೆ, ದೇಶಪ್ರೇಮ, ದೈವಭಕ್ತಿ ಮುಂತಾದ ಅನೇಕ ಸದ್ಗುಣಗಳಲ್ಲಿ ಭಾರತೀಯ ಮಾದರಿ ಮಹಿಳೆಯರಂತೆಯೇ ಕಂಡು ಬರುತ್ತಾರೆ. ತನ್ನ ಪತಿಯ ಯಶಸ್ಸಿಗೆ ತಾನು ನೆರವಾಗುವುದನ್ನು ಸ್ತ್ರೀದೀಕ್ಷೆ ಅಥವಾ ವ್ರತವೆಂದೇ ತಿಳಿಯುತ್ತಾರೆ.

ಸಂತಾನರು ನಿರ್ಣಾಯಕ ಯುದ್ಧದಲ್ಲಿ ಜಯ ಗಳಿಸಲು ಮುಖ್ಯ ಕಾರಣ, ದೀಕ್ಷೆ ಪಡೆದ ಹೋರಾಟಗಾರರು ತಮ್ಮ ಮುಖಂಡನಿಗೆ ನಿಷ್ಠೆಯಿಂದ ಇರುವುದೇ ಆಗಿದೆ. ಯಾರೊಬ್ಬರೂ ಹೇಡಿಗಳಲ್ಲ. ದೇಶ ಸೇವೆಯ ತುರ್ತಿನಲ್ಲಿ ದೇಹ – ಪ್ರಾಣಗಳೆರಡನ್ನೂ ಬಹಳ ತುಚ್ಛವಾಗಿ ಭಾವಿಸುವಂತಹ ಪರಾಕ್ರಮಶಾಲಿಗಳು. ಸಂತಾನ ಸೈನಿಕರು ತರಬೇತಿ ಹೊಂದಿದವರಲ್ಲ. ಹರಿನಾಮ ಸ್ಮರಣೆಯನ್ನೇ ತಮ್ಮ ವಿಜಯದ ಗೀತೆಯನ್ನಾಗಿ ಹಾಡಿಕೊಂಡವರು. ಬ್ರಿಟಿಷರು ಹಾಗೂ ಮುಸಲ್ಮಾನರ ಬಳಿ ಫಿರಂಗಿ, ಬಂದೂಕುಗಳಿದ್ದರೇ, ಸಂತಾನ ಸೈನಿಕರ ಬಳಿ 'ವಂದೇ ಮಾತರಂ' ಎಂಬ ದೇಶಭಕ್ತಿಗೀತೆಯೊಂದೇ ಸ್ಫೂರ್ತಿಯ ಅಸ್ತ್ರವಾಗಿತ್ತು.

ಯುದ್ಧದ ತರಬೇತಿಯಿಲ್ಲದ ಸಂತಾನರಿಗೆ ಜೀವಾನಂದ, ಧೀರಾನಂದ, ಸತ್ಯಾನಂದರಂಥ ದಕ್ಷ ಮುಂದಾಳುಗಳಾಗಿದ್ದರು. ಇವರ ಮುಂದಾಳತ್ವದಲ್ಲಿ ಬ್ರಿಟಿಷರ ಹಾಗೂ ಮುಸಲ್ಮಾನರ ಸೈನ್ಯದ ವಿರುದ್ಧ ಸಂತಾನರಿಗೆ ಗೂಢಚರ್ಯೆಯ ಮಾಹಿತಿಗಳನ್ನು ಒದಗಿಸಿದ್ದರು. ಕಾದಂಬರಿಯಲ್ಲಿ ಬರುವ ಕೆಲವು ಸ್ತ್ರೀಯರು ಕುದುರೆ ಸವಾರಿಯಲ್ಲಿ ಪರಿಣತರು. ಶತ್ರುವಿನ ದಾಳಿಯಲ್ಲಿ ಸಿಕ್ಕಿ ಇನ್ನೇನು ಸೆರೆಯಾಗಬೇಕೆನ್ನುವಷ್ಟರಲ್ಲಿ ಸಮಯೋಚಿತ ಧೈರ್ಯ ವಹಿಸಿ ಶತ್ರುವನ್ನು ವಂಚಿಸುವಷ್ಟರಮಟ್ಟಿಗೆ ಬುದ್ಧಿವಂತೆಯರಾಗಿದ್ದಾರೆ.

ಬಂಕಿಮಚಂದ್ರರು ಪ್ರಕೃತಿಯನ್ನು ಕಾದಂಬರಿಯಲ್ಲಿ ವರ್ಣಿಸುತ್ತಾರೆ; ನಿಸರ್ಗದ ರಮ್ಯತೆ ಮನುಷ್ಯನ ಮನಸ್ಸಿನ ಮೇಲೆ ಉಂಟು ಮಾಡುವ ಪರಿಣಾಮ ಅನನ್ಯವಾದುದೆಂಬ ಆಶಯ ಬಂಕಿಮಚಂದ್ರರದ್ದು. ನದಿ, ಕಾಡು, ಬೆಳದಿಂಗಳು, ಗಾರುಗತ್ತಲೆ, ಕಾಡು ಮೃಗಗಳ ವರ್ಣನೆ, ಇತ್ಯಾದಿಗಳನ್ನು ಭಾವುಕರಾಗಿಯೇ ವರ್ಣನೆಗೆ ತೊಡಗುತ್ತಾರೆ. ಅವರ 'ವಂದೇ ಮಾತರಂ' ಗೀತೆಯ ಸಾಲುಗಳಲ್ಲಿ ಬರುವ 'ಸುಜಲಾಂ, ಸುಫಲಾಂ, ಮಲಯಜಶೀತಲಾಂ' ಎಂಬ ನವಿರು ಭಾವಗಳ ವರ್ಣನೆ ಕಾದಂಬರಿಯಲ್ಲಿ ಪ್ರಕೃತಿಯನ್ನು ಕುರಿತಿರುವಂತಹದ್ದು ಆಪ್ಯಾಯಮಾನವಾಗಿ ಬಂದಿದೆ.

## ೩.೭. ವಂದೇ ಮಾತರಂ ಗೀತೆಯ ಮಹತ್ವ

**"ವಂದೇ ಮಾತರಂ"**

ವಂದೇ ಮಾತರಂ
ಸುಜಲಾಂ ಸುಫಲಾಂ
ಮಲಯಜಶೀತಲಾಂ
ಸಸ್ಯಶ್ಯಾಮಲಾಂ
ಮಾತರಂ ॥

ಶುಭ್ರಜ್ಯೋತ್ಸ್ನಾ ಪುಲಕಿತಯಾಮಿನೀಂ
ಫುಲ್ಲಕುಸುಮಿತ ದ್ರುಮದಲ ಶೋಭಿನೀಂ
ಸುಹಾಸಿನೀಂ ಸುಮಧುರ ಭಾಷಿಣೀಂ
ಸುಖದಾಂ ವರದಾಂ ಮಾತರಂ॥

ಸಪ್ತಕೋಟಿಕಂಠ ಕಲಕಲನಿನಾದಕರಾಲೇ,
ದ್ವಿಸಪ್ತಕೋಟಿ ಭುಜೈರ್ಧೃತಖರಕರವಾಲೇ,
ಅಬಲಾ ಕೇನ ಮಾ ಎತ ಬಲೇ॥

ಬಹುಬಲ ಧಾರಿಣೀಂ
ನಮಾಮಿ ತಾರಿಣೀಂ
ರಿಪುದಲವಾರಿಣೀಂ
ಮಾತರಂ॥

ತುಮಿ ವಿದ್ಯಾ ತುಮಿ ಧರ್ಮ
ತುಮಿ ಹೃದಿ ತುಮಿ ಧರ್ಮ
ತ್ವಂ ಹಿ ಪ್ರಾಣಾಃ ಶರೀರೇ॥
ಬಾಹುತೇ ತುಮಿ ಮಾ ಶಕ್ತಿ
ಹೃದಯೇ ತುಮಿ ಮಾ ಭಕ್ತಿ
ತೋಮಾರಈ ಪ್ರತಿಮಾ ಗಡಿ
ಮಂದಿರೇ ಮಂದಿರೇ॥[೧೨]

೧೮೮೬ರಲ್ಲಿ ಮೊಟ್ಟಮೊದಲಿಗೆ ಹೇಮಚಂದ್ರ ಬಂದ್ಯೋಪಾಧ್ಯಾಯ ಅವರು ಕೊಲ್ಕತ್ತಾ ಕಾಂಗ್ರೆಸ್ ಅಧಿವೇಶನದಲ್ಲಿ 'ವಂದೇ ಮಾತರಂ' ಹಾಡಿದರು. ಆದಾದ ಹತ್ತು ವರ್ಷಗಳ ನಂತರ ಗುರುದೇವ ರವೀಂದ್ರನಾಥ ಠಾಕೂರರೇ ಸ್ವರಸಂಯೋಜನೆ ಮಾಡಿ ೧೮೯೬ರಲ್ಲಿ ಹಾಡಿದರು.

"ಯಾವ ಭಾರತ ಪ್ರೇಮಿಯೂ 'ವಂದೇ ಮಾತರಂ' ಗೀತದ ಮಂತ್ರಸದೃಶ ಗುಣವನ್ನು ಗ್ರಹಿಸದಿರಲಾರ" ಡಾ॥ ಗ್ರಿಯರ್‌ಸನ್ :

"ದೇಶದಲ್ಲಿ ಕ್ರಾಂತಿಕಾರಿ ಪ್ರವೃತ್ತಿ ಹರಡಲು ಆನಂದಮಠ ಒಂದು ಪ್ರಮುಖ ಕಾರಣ". 1918ರ ರೌಲಟ್ ಸಮಿತಿ.

"ಅದನ್ನು ಹಾಡತೊಡಗಿದಾಗ ನನ್ನಲ್ಲಿ ಆಪಾದಮಸ್ತಕ ವಿದ್ಯುತ್ಸಂಚಾರವಾಯಿತು. ಹೃದಯ ಆವೇಗಕ್ಕೆ ಒಳಗಾಯಿತು. 'ಇದೊಂದು ಹಾಡಲ್ಲ ಜ್ವಾಲಾಮುಖಿ' ಎನಿಸಿತು. ಹಾಡಿನ ಒಂದೊಂದು ಶಬ್ದವು ಶ್ರೋತೃಗಳನ್ನು ಪುಲಕಗೊಳಿಸಿತು" – ರವೀಂದ್ರನಾಥ ಠಾಕೂರರು

ಆನಂದಮಠ ಕಾದಂಬರಿಯಲ್ಲಿ ಬರುವ ಸನ್ಯಾಸಿಗಳ ಒಂದು ಕ್ರಾಂತಿಕಾರಕ ಹೋರಾಟವನ್ನು ಬ್ರಿಟೀಷ್ ದಾಖಲೆಗಳು 'ಸನ್ಯಾಸಿಗಳ ವಿದ್ರೋಹ'ವೆಂದು ಕರೆದಿದ್ದಾರೆ.

You will hear of great disturbances committed by Sannasis, or wandering Fakirs, who annually infest the province, about this time of the year, in pilgrimages to Jaggannath, goimg in bodies of 1,000 and sometimes even 10,000 men. An officer of reputation (Captain Thomas) lost his life in an unequal attack upon a party of these banditti, about 3,000 of them, near Rangapore, with a small party of Pergona Sepoys which has made them more talked of than they deserve. The Revenue, however, has felt the affects of their ravagesin the northern

---

೧೨. ಮಲ್ಲಾರ–ಕಾವಾಲೀ ತಾಳ; – 'ವಂದೇ ಮಾತರಂ', ಎಂಬಂತೆ, ರವೀಂದ್ರನಾಥ ಠಾಕೂರರವರು ಇದಕ್ಕೆ ಸ್ವರಪ್ರಸ್ತಾರ ಹಾಕಿ ೧೮೯೬ರಲ್ಲಿ ಕಲ್ಕತ್ತದಲ್ಲಿ ನಡೆದ ಕಾಂಗ್ರೆಸ್ ಸಮ್ಮೇಳನದಲ್ಲಿ ಮೊದಲ ಬಾರಿಗೆ ಹಾಡಿದರಂತೆ.

districts. The new establishment of Sepoys which is now forming on the plan enjoined by the court of directors and the provinces, will, I hope, effectually secure them here after from these incursions. - Hastings to Sir Geogre Colebrook - dated 2nd February 1773 - Glein's Memoirs, Vol. I, 282.

(History of The Sannyasi Rebelion from warren Hasting's Letter in Gleig's Memoirs.)

ಎಷ್ಟೇ ನಕರಾತ್ಮಕವಾಗಿ ಆನಂದಮಠ ಕಾದಂಬರಿಯನ್ನು ಬಿಂಬಿಸಿದರೂ ದೇಶ ವ್ಯಾಪಿ ಈ ಕಾದಂಬರಿ ಉಂಟುಮಾಡಿದ ಸಂಚಲನ, ವಂದೇಮಾತರಂ ಗೀತೆಯ ಪರಿಣಾಮ ಅಸಾಧಾರಣವಾದುದು. ಉಳಿದ ಪ್ರಾಂತ್ಯಗಳ ಮೇಲೆ ಉಂಟುಮಾಡಿರುವ ಪರಿಣಾಮ ಇತಿಹಾಸವಾಗಿದೆ.

## ಅಧ್ಯಾಯ -- ನಾಲ್ಕು

# ಬಂಕಿಮಚಂದ್ರ ಸಾಮಾಜಿಕ ಕಾದಂಬರಿ

೪.೧. ಬಂಕಿಮಚಂದ್ರರ ಕಾದಂಬರಿಗಳ ಅನನ್ಯತೆ

೪.೨. ವಿಷವೃಕ್ಷ: ಸಾಮಾಜಿಕತೆ

೪.೩. ವಿಷವೃಕ್ಷವನ್ನು ನಿರಾಕರಣ ಮಾಡಿದವರು

೪.೪. ಕನ್ನಡ ಲೇಖಕರ ಮೇಲೆ 'ವಿಷವೃಕ್ಷ' ಕಾದಂಬರಿಯ ಪ್ರಭಾವ

೪.೫. ಬಹುಪತ್ನಿತ್ವ ನಿರಾಕರಣೆ

ಅಧ್ಯಾಯ - ನಾಲ್ಕು

# ಬಂಕಿಮಚಂದ್ರ ಚಟರ್ಜಿ ಸಾಮಾಜಿಕ ಕಾದಂಬರಿ

## ೪.೧. ಬಂಕಿಮಚಂದ್ರರ ಕಾದಂಬರಿಗಳ ಅನನ್ಯತೆ

ಬಂಕಿಮಚಂದ್ರರ ಕಾದಂಬರಿಗಳು ಕನ್ನಡಕ್ಕೆ ಅನುವಾದ ಆದ ಸಂದರ್ಭವು ಕನ್ನಡ ಸಾಹಿತ್ಯದ ಅರುಣೋದಯದ ಕಾಲವಾಗಿತ್ತು. ಬಿ. ವೆಂಕಟಾಚಾರ್ಯರು ಬಂಗಾಳಿ ಭಾಷೆಯನ್ನು ನೇರವಾಗಿ ಕಲಿತು ಅಲ್ಲಿಂದ ಬಂಕಿಮರ ಕಾದಂಬರಿಗಳನ್ನು ಕನ್ನಡಕ್ಕೆ ತಂದಾಗ ಕನ್ನಡ ಸಾಹಿತ್ಯದ ಓದುಗ ವಲಯದಲ್ಲಿ ಒಂದು ಹೊಸ ಬಗೆಯ ಓದುಗ ವರ್ಗವೇ ನಿರ್ಮಾಣವಾದದ್ದು ಚಾರಿತ್ರಿಕ ಸತ್ಯ. ಕನ್ನಡ ಸಾಹಿತ್ಯದಲ್ಲಿ ಇಂಗ್ಲಿಷ್ ಶಿಕ್ಷಣ ಮತ್ತು ಹೊಸ ಹೊಸ ವೈಚಾರಿಕ ಹಾಗೂ ವೈಜ್ಞಾನಿಕ ವಿಚಾರಗಳ ಪ್ರಭಾವದಿಂದಾಗಿ ಜನರಲ್ಲಿ, ಓದುಗರಲ್ಲಿ ಒಂದು ಹೊಸ ಬಗೆಯ ಜಾಗೃತಿ ಮೂಡುತ್ತಿದ್ದ ಸಂದರ್ಭದಲ್ಲಿ ಬಂಕಿಮರ ಕಾದಂಬರಿಗಳು ಕನ್ನಡಕ್ಕೆ ಬಂದು ಕನ್ನಡದ ವಾಚಕರಲ್ಲಿ ಹೊಸಬಗೆಯ ಪುಸ್ತಕ ಪ್ರೀತಿಯನ್ನು ಹುಟ್ಟುಹಾಕಿದವು. ಆಗ ಕಾದಂಬರಿಗಳೇ ನಿಜವಾದ ಮಹಾಕಾವ್ಯಗಳೆಂಬ ತಿಳುವಳಿಕೆ ವಾಚಕರಲ್ಲಿ, ವಿಮರ್ಶಕರಲ್ಲಿ ಬಂದಿದ್ದರಿಂದ ವಾಚಕರ ಮನಸ್ಸನ್ನು ತಣಿಸಲು ಸಾಕಷ್ಟು ಕಾದಂಬರಿಗಳು ದೊರೆಯದ ಸ್ಥಿತಿಯಿತ್ತು. ಜೊತೆಗೆ ಆ ವೇಳೆಗ ಪ್ರಾಚೀನ ಕಾವ್ಯ ವಾಚನ ಪರಂಪರೆಯೂ ನಿಲುಗಡೆಗೆ ಬಂದು ಹೊಸ ತಲೆಮಾರು ಕನ್ನಡ ಸಾಹಿತ್ಯದಲ್ಲಿ ಹೊಸ ರೂಪಗಳ ಪುಷ್ಟಿಗೆ ತೊಡಗಿತ್ತು. ಗದ್ಯಕೃತಿಗಳ ರಚನೆಯಂತೂ ಅಪರೂಪವಾಗಿದ್ದವು. ಇಂತಹ ಸಂದರ್ಭದಲ್ಲಿ ಬಂಗಾಳಿ ಕಾದಂಬರಿಗಳು ಕನ್ನಡಕ್ಕೆ ಅನುವಾದಗೊಂಡು ಜನರಲ್ಲಿ ಕನ್ನಡ ಸಾಹಿತ್ಯಾಭಿರುಚಿಯನ್ನು ಕೆರಳಿಸಿದವು. ಅವು ಕಥೆ, ಕಾದಂಬರಿಗಳ ರೂಪದಲ್ಲಿ ಕನ್ನಡಕ್ಕೆ ಪ್ರವೇಶಿಸಿ, ಕನ್ನಡದ ಪುನರುಜ್ಜೀವನದ ಘಟ್ಟದಲ್ಲಿ, ಕನ್ನಡನಾಡು ನುಡಿಗಳಿಗೆ ಈ ಕಾದಂಬರಿ ಸಾಹಿತ್ಯವು ಅನುವಾದದ ಮೂಲಕ ಹೊಸ ಚೈತನ್ಯವನ್ನು, ಹೊಸ ಆಲೋಚನೆಯನ್ನು ತುಂಬಿತು. ಇದೇ ರೀತಿಯಲ್ಲಿ ಸಂಸ್ಕೃತದಿಂದ, ಇಂಗ್ಲಿಷಿನಿಂದ ಮತ್ತು ದೇಶಿ ಭಾಷೆಗಳಿಂದ ಮಹತ್ವದ ಕಾವ್ಯ, ಕಥೆ, ಕಾದಂಬರಿಗಳು ಕನ್ನಡಕ್ಕೆ ಅನುವಾದದ ಮೂಲಕ ಬರತೊಡಗಿದವು. ಇದರಿಂದ ಕನ್ನಡ ಸಾಹಿತ್ಯದ ಮೌಲ್ಯ ಮತ್ತಷ್ಟು ವಿಸ್ತರಿಸಿಕೊಂಡಿತು.

ಭಾರತದ ಬಂಗಾಳಿ, ಹಿಂದಿ, ಮರಾಠಿ, ತೆಲುಗು, ತಮಿಳು, ಮಲಯಾಳಂ ಮುಂತಾದ ದೇಸಿ ಭಾಷೆಗಳಿಂದ ಅನುವಾದಗೊಂಡ ಕಥೆ, ಕಾದಂಬರಿಗಳ ಗದ್ಯ ಕೃತಿಗಳ ಮತ್ತು ಪಾಶ್ಚಾತ್ಯ ಇಂಗ್ಲಿಷ್, ರಷ್ಯನ್, ಜರ್ಮನ್ ಮುಂತಾದ ಕಥೆ, ಕಾದಂಬರಿ ಮುಂತಾದ ಗದ್ಯ ಕೃತಿಗಳ ಅನುವಾದದಿಂದ ಕನ್ನಡದ ಗದ್ಯದ ಮೇಲೆ ಪರಿಣಾಮಕಾರಿಯಾದ ಪ್ರಭಾವವಾಗಿದೆ. ಗದ್ಯವನ್ನು ೧೯-೨೦ನೆಯ ಶತಮಾನಗಳಲ್ಲಿ ವಿಶಿಷ್ಟ ಉದ್ದೇಶಗಳಿಗಾಗಿ ಉತ್ತಮವಾಗಿ ಬಳಸಲಾಗಿದೆ. ಪ್ರಾಚೀನದಲ್ಲಿ ಗದ್ಯ ಮತ್ತು ಪದ್ಯಗಳನ್ನು ಸಂಪರ್ಕಸಾಧನೆಗಳಿಗಾಗಿ ಬಳಸುವಾಗ ಕೆಲವು ವಿಶಿಷ್ಟ ಉದ್ದೇಶಗಳಿಗಾಗಿಯೇ ಬಳಸಬೇಕೆಂಬುದನ್ನು ಸೌಂದರ್ಯಶಾಸ್ತ್ರಜ್ಞರು ಹೇಳಿದ್ದುಂಟು. ಅವರಿಗೆ ಗದ್ಯ ಮತ್ತು ಪದ್ಯದ ಬಳಕೆಯ ಅರಿವಿತ್ತು. ಆದರೆ ಈ ಎರಡು ಶತಮಾನಗಳಿಂದ ಗದ್ಯವನ್ನೂ ಪದ್ಯದಂತೆ ಬಳಸುವ ಕ್ರಿಯೆ ಆರಂಭವಾಯಿತು. ಈ ಬಗೆಯ ಕೆಲವು ವಿಮರ್ಶಕರು ಕಥೆ, ಕಾದಂಬರಿಗಳನ್ನು ವಿಮರ್ಶಿಸುವಾಗ, "ಇದು ನಾಟಕೀಯ ಕಾವ್ಯರೂಪದ ಕಾದಂಬರಿ" ಎಂತಲೂ "ಇದು ಕಾವ್ಯಾತ್ಮಕವಾದ ಕಥೆಯಂತಲೂ, ಕಥೆಗೂ ಕವಿತೆಗೂ ವ್ಯತ್ಯಾಸವಿಲ್ಲವೆಂತಲೂ ಬರೆದಿರುವುದನ್ನು ಕಾಣುತ್ತೇವೆ. ಪ್ರಾಚೀನ ಹಾಗೂ ಮಧ್ಯಕಾಲೀನ ಭಾರತದಲ್ಲಿ ಬಳಕೆಯಾದ ಗದ್ಯ ಬರೆಯುವಲ್ಲಿ ಒಂದು ಬಗೆಯ ಸಾಹಚರ್ಯೆ ಇತ್ತು. ಆದರೆ ೧೯ನೆಯ ಶತಮಾನದ ಪ್ರಾರಂಭದಲ್ಲಿ ಭಾರತೀಯ ಭಾಷೆಗಳಲ್ಲಿ ಆಗುತ್ತಿದ್ದ ಗದ್ಯಶೈಲಿಯು ವಿದೇಶಿ ಧರ್ಮ ಪ್ರಚಾರಕರು ಮುದ್ರಣದ ಸಂದರ್ಭದಲ್ಲಿ ಅವರು ಬಳಸಿದ ಬೈಬಲ್ಲಿನ ಪ್ರಾರಂಭಿಕ ಕನ್ನಡ ಅನುವಾದಗಳ ಗದ್ಯ ಕನ್ನಡಕ್ಕೆ ಮಾದರಿಯದ್ದೇನೂ ಆಗಿರಲಿಲ್ಲ. ಆದರೆ ದೇಶಿ ಕಾದಂಬರಿಗಳ, ಕಥೆಗಳ ಅನುವಾದದ ಗದ್ಯವು ಕನ್ನಡದಲ್ಲೂ ಕಥೆ, ಕಾದಂಬರಿಗಳು ಅಭಿವೃದ್ಧಿಗೆ ಕಾರಣವಾಗಿ ಸ್ವತಂತ್ರ ಕಾದಂಬರಿಗಳ ಉಗಮಕ್ಕೇ ಕಾರಣವಾಯಿತು. ಇಂತಹ ಐತಿಹಾಸಿಕ ಪ್ರಭಾವ, ಪ್ರೇರಣೆಗೆ ಬಂಗಾಳದ ಬಂಕಿಮಚಂದ್ರರು, ರವೀಂದ್ರನಾಥ ಠಾಕೂರ್ ಮತ್ತು ಶರಶ್ಚಂದ್ರರ ಹಾಗೂ ಹಿಂದಿಯ ಪ್ರೇಮಚಂದರ ಕಾದಂಬರಿಗಳು ಸ್ಫೂರ್ತಿದಾಯಕವಾದವು.

'ಕಾದಂಬರಿ' ಎಂಬ ಶಬ್ದದ ನಿಷ್ಕೃಷ್ಟ ಅರ್ಥದಲ್ಲಿ ಮತ್ತು ಸಾಂಪ್ರದಾಯಿಕ ಕಥನಸಾಹಿತ್ಯದಿಂದ ಭಿನ್ನವಾದ ಸಾಹಿತ್ಯ ಪ್ರಚಾರವಾಗಿ ಕಾದಂಬರಿಯು ಬ್ರಿಟಿಷರ ಪ್ರಭಾವದಿಂದ ಭಾರತದಲ್ಲಿ ಮತ್ತು ಇತರೆ ದೇಶಿ ಭಾಷೆಗಳಲ್ಲಿ ಪ್ರಧಾನ 'ಸಾಹಿತ್ಯ ಪ್ರಕಾರ'ವಾಗಿ ಬೆಳೆಯಿತು, ನಿಜ. ಇದಲ್ಲದೆ, ಅನೇಕ ಭಾರತೀಯ ಭಾಷೆಗಳಲ್ಲಿ, ಸಾಮಾಜಿಕ ಕಾದಂಬರಿಗಳಿಗಿಂತಲೂ ಮೊದಲು ಚಾರಿತ್ರಿಕ ಕಾದಂಬರಿಗಳು ಉಗಮವಾದುದೇ ತುಂಬಾ ಅರ್ಥಪೂರ್ಣವಾದ ವಿಷಯ. ಭಾರತೀಯ ಚಾರಿತ್ರಿಕ ಕಾದಂಬರಿಕಾರರು ಸರ್ ವಾಲ್ಟರ್ ಸ್ಕಾಟ್ ಮತ್ತು ಅಲೆಗ್ಸಾಂಡರ್ ಡೂಮಾ ಅವರ 'ಚಾರಿತ್ರಿಕ' ಕಾದಂಬರಿಗಳಿಂದ ಪ್ರತ್ಯಕ್ಷವಾಗಿ ಅಥವಾ ಪರೋಕ್ಷವಾಗಿ ಪ್ರಭಾವಿತರಾದವರು. ಆದರೆ ಭಾರತದ ಚಾರಿತ್ರಿಕ ಕಾದಂಬರಿಗಳಲ್ಲಿ ಕಂಡುಬರುವ 'ವಿಭಿನ್ನ ಸಂವೇದನೆಗಳು' ಮಾತ್ರ ಪಾಶ್ಚಾತ್ಯ ಚಾರಿತ್ರಿಕ ಕಾದಂಬರಿಗಳಿಗಿಂತ ಭಿನ್ನವಾದುದು. ಬಂಕಿಮಚಂದ್ರರನ್ನು ಭಾರತದ ವಾಲ್ಟರ್ ಸ್ಕಾಟ್ ಎಂದು ಕರೆದರೂ ಬಂಕಿಮಚಂದ್ರರ ಚಾರಿತ್ರಿಕ ಕಾದಂಬರಿಗಳು ಪಾಶ್ಚಾತ್ಯ ಚಾರಿತ್ರಿಕ ಕಾದಂಬರಿಗಳಿಗಿಂತ

ಅವುಗಳ ಸಂವೇದನೆಗಳಲ್ಲಿ ತುಂಬಾ ವಿಭಿನ್ನವಾದವು. ಭಾರತೀಯ ಚಾರಿತ್ರಿಕ ಕಾದಂಬರಿಕಾರರು ಭಾರತೀಯರ ರಾಷ್ಟ್ರೀಯ ಭಾವನೆಯನ್ನು ಪುನರುಜ್ಜೀವನಗೊಳಿಸುವ ಸಲುವಾಗಿಯೇ ತಮ್ಮ ಕಾದಂಬರಿಗಳನ್ನು ಒಂದು ಸೃಜನಶೀಲ ಮಾಧ್ಯಮದ ವಾಹಕವನ್ನಾಗಿ ಉಪಯೋಗಿಸಿದರು. ಇದಕ್ಕೆ ಅವರ ಚಾರಿತ್ರಿಕ ಕಾದಂಬರಿಗಳಲ್ಲಿ ದೊರೆಯುವ ಆಧಾರಗಳೇ ಸಾಕ್ಷಿಯಾಗಿವೆ. ಬಂಗಾಳಿ ಕಾದಂಬರಿಕಾರರಾದ ಬಂಕಿಮಚಂದ್ರ ಚಟ್ಟೋಪಾಧ್ಯಾಯ, ಠಾಖಲ್ ದಾಸ್ ಬ್ಯಾನರ್ಜಿ, ಮಹಾರಾಷ್ಟ್ರದ ಹರಿನಾರಾಯಣ ಆಪ್ಟೆ, ಕರ್ನಾಟಕದ ಬಿ. ವೆಂಕಟಾಚಾರ್ಯ, ಗಳಗನಾಥರಂತಹ ಚಾರಿತ್ರಿಕ ಕಾದಂಬರಿಕಾರರು 'ಭಾರತದ ಗತವೈಭವ'ವನ್ನು ಚಿತ್ರಿಸಲು ತಮ್ಮ ಈ ಬಗೆಯ ಕಾದಂಬರಿಗಳನ್ನು ಉದ್ದೇಶಪೂರ್ವಕವಾಗಿಯೇ ಉಪಯೋಗಿಸಿರುವುದು ಕಂಡುಬರುತ್ತದೆ. ಇವರು ತಮ್ಮ ಸ್ಥಳೀಯ ಘಟನಾವಳಿಗಳನ್ನು ತಮ್ಮ ಈ ಚಾರಿತ್ರಿಕ ಕಾದಂಬರಿಗಳಿಗೆ ವಸ್ತುವಾಗಿ ಸ್ವೀಕರಿಸಿದ್ದಾರೆ. ಕೆಲವರು ತಮಗೆ ಉಪಲಬ್ಧವಿದ್ದ ಚಾರಿತ್ರಿಕ ವಿಷಯಗಳಿಗೆ ನಿಷ್ಠರಾಗಿದ್ದಾರೆ. ಅದರ ಜೊತೆಗೆ ರಾಷ್ಟ್ರೀಯತೆಯ ಜಾಗೃತ ಪ್ರಜ್ಞೆಯ ವಿಸ್ತರಣೆಗೂ ಅವುಗಳನ್ನು ಉಪಯೋಗಿಸಿದ್ದಾರೆ. ಕೆಲವರಿಗೆ 'ಇತಿಹಾಸ ಪ್ರಜ್ಞೆ' ಇದ್ದರೆ, ಕೆಲವರಿಗೆ 'ಗತದ ವರ್ಣನೆ'ಯೇ ಪ್ರಧಾನವಾಗಿದೆ. ಆದರೆ ಇವರು ಗತಕಾಲಕ್ಕೂ ವರ್ತಮಾನದ ಕಾಲಕ್ಕೂ ಇದ್ದ ವ್ಯತ್ಯಾಸಗಳನ್ನು, ವೈದೃಶ್ಯಗಳನ್ನು ಪ್ರಶ್ನಿಸಿಕೊಂಡಿದ್ದು ಕಡಿಮೆ. ಆದ್ದರಿಂದ ಇವು ಪೂರ್ಣವಾಗಿ ಚಾರಿತ್ರಿಕ ಕಾದಂಬರಿಗಳೆಂದು ಹೇಳಲು ಬರುವುದಿಲ್ಲ. ಆದ್ದರಿಂದ ಇವು 'ಚರಿತ್ರೆ ಸಾಹಸ ಕಾದಂಬರಿಯಾಗಿದ್ದು, ರೊಮಾನ್ಸ್, ಕಲ್ಪನೆ ಎಲ್ಲವೂ ಸೇರಿಕೊಂಡು ಜೀವನದ ಸಂಕೀರ್ಣತೆಯನ್ನು ಮತ್ತು ಚರಿತ್ರೆಯ ಸತ್ಯಗಳನ್ನು ಅನಾವರಣ ಮಾಡುವಲ್ಲಿ ಪೂರ್ಣವಾಗಿ ಯಶಸ್ವಿಯಾಗಿವೆ ಎಂದು ಹೇಳಲು ಬರುವುದಿಲ್ಲ.

ಬಂಕಿಮಚಂದ್ರರ ಮೊದಲ ಐತಿಹಾಸಿಕ ಕಾದಂಬರಿಗಳು ಕೂಡ ಇದಕ್ಕೆ ಹೊರತಲ್ಲ. ೧೯೦೦ರ ಹೊತ್ತಿಗೆ ಬಿ. ವೆಂಕಟಾಚಾರ್ಯರು ಬಂಗಾಳಿಯಿಂದ ಕನ್ನಡಕ್ಕೆ ಅನುವಾದಿಸಿಕೊಟ್ಟ ಬಂಕಿಮರ ಕಾದಂಬರಿಗಳಲ್ಲಿ 'ಆನಂದಮಠ' (೧೮೮೨) 'ದೇವಿ ಚೌಧುರಾಣಿ' (೧೮೮೪), 'ದುರ್ಗೇಶ ನಂದಿನಿ', 'ಸೀತಾರಾಂ' (೧೮೮೭) ಇವು ಬಂಕಿಮರ ಕಡೆಯ ಐತಿಹಾಸಿಕ ಕಾದಂಬರಿಗಳಾಗಿವೆ. ಈ ಕಾದಂಬರಿಗಳಿಗೆ ಅವರು ಚರಿತ್ರೆಯಿಂದಲೇ ಕಥಾವಸ್ತುವನ್ನು ಆರಿಸಿಕೊಂಡಿದ್ದರೂ, ಅವುಗಳ ಆಶಯ, ಅಭಿವ್ಯಕ್ತಿಗೆ ಅನುಗುಣವಾಗಿ ಹಲವಾರು ಮಹತ್ವದ ಬದಲಾವಣೆಗಳನ್ನು ಮಾಡಿಕೊಂಡಿದ್ದಾರೆ. ಇಲ್ಲಿ ಬರೀ ಪಾತ್ರ ಚಿತ್ರಣ ಮತ್ತು ಕಥಾನಿರೂಪಣೆಯೇ ಮುಖ್ಯವಾಗದೆ, ಗಂಭೀರ ವಿಚಾರ ಚಿಂತನೆಗಳು, ರಾಜಕೀಯ ಒತ್ತಡಗಳು, ತಾತ್ವಿಕ ಹಾಗೂ ಧಾರ್ಮಿಕ ವಿಚಾರಗಳು, ರಾಷ್ಟ್ರೀಯ ಪ್ರಜ್ಞೆ ಮುಂತಾದ ಸಂಗತಿಗಳು ಈ ಕಾದಂಬರಿಗಳಲ್ಲಿ ಸಮರ್ಥವಾಗಿ ವಿಶ್ಲೇಷಣೆಗೆ ಒಳಗಾಗಿವೆ.

ಬಂಕಿಮಚಂದ್ರರು ತಮ್ಮ 'ಆನಂದಮಠ' ಕಾದಂಬರಿಯಲ್ಲಿ ಸ್ವಾತಂತ್ರ್ಯ ಹೋರಾಟದ ಸಂದರ್ಭದಲ್ಲಿ ದೇಶಾಭಿಮಾನ, ಸ್ವಾತಂತ್ರ್ಯ ಪ್ರೇಮ ಮತ್ತು ರಾಷ್ಟ್ರೀಯ ಭಾವೈಕ್ಯತೆಯ ಪ್ರಜ್ಞೆಯನ್ನು ಜನತೆಯಲ್ಲಿ ಮೂಡಿಸುವುದನ್ನು ಅತ್ಯಂತ ಪರಿಣಾಮಕಾರಿಯಾಗಿ ನಿರ್ವಹಿಸಲಾಗಿದೆ.

೧೭೭೦ರಲ್ಲಿ ಬಂಗಾಳದಲ್ಲಿ ಉಂಟಾದ ಭೀಕರ ಕ್ಷಾಮದ ಪರಿಸ್ಥಿತಿಯನ್ನು ಕಟ್ಟಿಕೊಡಲಾಗಿದೆ. ಆ ಸಂದರ್ಭದಲ್ಲಿ ಸಂನ್ಯಾಸಿಗಳು ನಡೆಸಿದ ಹೋರಾಟದ ಕಥೆಯೂ ಇದರಲ್ಲಿದೆ. ಈ ಘೋರ ಕ್ಷಾಮದ ಪರಿಣಾಮದಿಂದ ಸಮಾಜದಲ್ಲಿ ಉಂಟಾದ ಅರಾಜಕತೆ, ಕ್ಷಾಮಪೀಡಿತ ಜನರ ಹಸಿವು, ಬಡತನ, ನೋವು, ಸಂಕಟಗಳನ್ನು ಹೃದಯವಿದ್ರಾವಕವಾಗಿ ಚಿತ್ರಿಸಲಾಗಿದೆ. ಈ ಸಂಗತಿಗಳು ಇತಿಹಾಸಕ್ಕೆ ಬದ್ಧವಾಗಿದ್ದರೂ, ಬಂಡಾಯದ ವಿವರಗಳಲ್ಲಿ, ಪಾತ್ರಸೃಷ್ಟಿಗಳಲ್ಲಿ ಬಂಕಿಮರ ಅನನ್ಯ ಪ್ರತಿಭೆ ಎದ್ದು ಕಾಣುತ್ತದೆ. ಅವರು ತಮ್ಮ ಸ್ವತಂತ್ರ ಕಲ್ಪನೆಯಿಂದ ಅದರಲ್ಲಿ ಬರುವ 'ವಂದೇಮಾತರಂ' ಗೀತೆಯು ಭಾರತದಲ್ಲಿ ದೇಶಭಕ್ತಿಯನ್ನು ಜನರಲ್ಲಿ ಜಾಗೃತಗೊಳಿಸುತ್ತದೆ. ಸ್ವಾತಂತ್ರ್ಯದ ಹಂಬಲಕ್ಕಾಗಿ ಇಡೀ ಜನತೆ ಒಗ್ಗೂಡುವ ಚಿತ್ರ ಇಲ್ಲಿ ಬರುತ್ತದೆ.

ಬಂಕಿಮಚಂದ್ರರ 'ದೇವಿ ಚೌಧುರಾಣಿ' ಕಾದಂಬರಿಯಲ್ಲಿ 'ಆನಂದಮಠ'ದಲ್ಲಿ ಬರುವಷ್ಟು ಚಾರಿತ್ರಿಕ ಅಂಶಗಳು ಗಟ್ಟಿಯಾಗಿಲ್ಲ. ಮುಸಲ್ಮಾನರ ಆಳ್ವಿಕೆಯ ಕೊನೆಯ ದಿನಗಳಲ್ಲಿ ಬಂಗಾಳದಲ್ಲಿ ಉಂಟಾಗಿದ್ದ ಅಶಾಂತ ವಾತಾವರಣದ ಚಿತ್ರಣವನ್ನು ಅದು ಕಟ್ಟಿಕೊಡುತ್ತದೆ. ರಾಜಕೀಯ ದುರಾಡಳಿತದಿಂದ ಉಂಟಾದ ಅರಾಜಕ ಪರಿಸ್ಥಿತಿಯಲ್ಲಿ ಬಂಗಾಳದ ಹಲವಾರು ಜಿಲ್ಲೆಗಳಲ್ಲಿ ಲೂಟಿ, ದರೋಡೆ, ಕೊಲೆಗಳು ನಡೆಯುತ್ತವೆ. ಕಾರಣಾಂತರಗಳಿಂದ ಆ ದರೋಡೆಕೋರರಿಗೆ ನೆರವಾಗಿದ್ದ ದೇವಿ ಚೌಧುರಾಣಿಯೂ ಸೇರಿಕೊಳ್ಳುತ್ತಾಳೆ. ಆದರೆ ದರೋಡೆಕೋರರ ಗುಂಪಿನಲ್ಲಿದ್ದ ಭವಾನಿ ಪಾಠಕ್ ಎಂಬ ಧರ್ಮಬೋಧಕನ ಬೋಧನೆಯಿಂದ ಆಕೆ ಬದಲಾಗುತ್ತಾಳೆ. ನಂತರ ಆಕೆ ತನ್ನ ರಾಗ, ದ್ವೇಷ, ಸ್ವಾರ್ಥ ಕಾರ್ಯಗಳನ್ನು ಬಿಟ್ಟು ದುರ್ಬಲರ, ಆರ್ತರ ರಕ್ಷಣೆಗೆ ನಿಲ್ಲುತ್ತಾಳೆ. ದುರುಳರನ್ನು, ದುಷ್ಟರನ್ನು ಶಿಕ್ಷಿಸಿ ವಿರಕ್ತ ಚಕ್ರವರ್ತಿನಿಯಂತೆ ಆಗುತ್ತಾಳೆ. ಈ ಕಾದಂಬರಿಯಲ್ಲಿ ಬಂಕಿಮರು ಆ ದೇವಿ ಚೌಧುರಾಣಿಯ ಸಾಹಸ, ಶೌರ್ಯ, ತ್ಯಾಗ, ಪ್ರೇಮ, ಸಂಯಮ, ಧರ್ಮ ಶ್ರದ್ಧೆ ಮುಂತಾದ ಅವಳ ವ್ಯಕ್ತಿತ್ವವನ್ನು ಅನನ್ಯವಾಗಿ ಕಟ್ಟಿಕೊಡುತ್ತಾರೆ.

೧೮೬೫ರಲ್ಲಿ ಬಂಗಾಳ ಭಾಷೆಯಲ್ಲಿ ಬಂದ ಬಂಕಿಮರ 'ದುರ್ಗೇಶನಂದಿನಿ' ಒಂದು ಮುಖ್ಯ ಐತಿಹಾಸಿಕ ಕಾದಂಬರಿ. ಇದು ಕನ್ನಡದಲ್ಲಿ ಬಿ. ವೆಂಕಟಾಚಾರ್ಯರ ಮೂಲಕ ೧೮೮೫ರಲ್ಲಿ ಬಂತು. ಪ್ರೇಮ ಮತ್ತು ಯುದ್ಧದ ಕಥೆ ಚಾರಿತ್ರಿಕ ಹಿನ್ನೆಲೆಯೊಂದಿಗೆ ಈ ಕಾದಂಬರಿಯಲ್ಲಿ ಅಪೂರ್ವವಾಗಿ ಮೂಡಿಬಂದಿದೆ. ಇಲ್ಲಿ ಶೌರ್ಯ, ಸಾಹಸಗಳು ಪ್ರಭಾವಕಾರಿಯಾಗಿವೆ. ಇಲ್ಲಿನ ಕೆಲವು ಘಟನೆಗಳು ಅವಾಸ್ತವವೆನ್ನಿಸಿದರೂ, ಅದು ಬಂಕಿಮರ ಪ್ರಥಮ ಕಾದಂಬರಿಯಾಗಿರುವುದರ ಜೊತೆಗೆ, ಅವರ ಆಕರ್ಷಕ ಶೈಲಿ, ಕುತೂಹಲಕರವಾದ ಕಥನ, ಇಲ್ಲಿನ ದೋಷಗಳನ್ನೂ, ಅಸಂಭಾವ್ಯತೆಗಳನ್ನೂ ಮರೆಸುವಷ್ಟು ಬಲಿಷ್ಠವಾಗಿವೆ. ಅನಂತರ ಅವರ 'ಕಪಾಲ ಕುಂಡಲಾ', 'ಮೃಣಾಲಿನಿ', 'ವಿಷವೃಕ್ಷ', 'ಚಂದ್ರಶೇಖರ', 'ರಜನಿ', 'ರಾಧಾರಾಣಿ', 'ಕೃಷ್ಣ ಕಾಂತನ ಉಯಿಲು', 'ರಾಜಸಿಂಹ' ಮುಂತಾದ ಬಂಕಿಮಚಂದ್ರರ ಕಾದಂಬರಿಗಳು ವೆಂಕಟಾಚಾರ್ಯರ ಅನುವಾದದ ಕೈ ಮೂಲಕ ಅವ್ಯಾಹತವಾಗಿ ಕನ್ನಡಕ್ಕೆ ಹರಿದುಬಂದಿವೆ.

ಕನ್ನಡಕ್ಕೆ ಬಂದ ಬಂಗಾಳಿ ಅನುವಾದಗಳಲ್ಲಿ ಬಂಕಿಮಚಂದ್ರರದು ಸಿಂಹಪಾಲು. ಇದರ ಯಶಸ್ಸಿಗೆ ವೆಂಕಟಾಚಾರ್ಯರೇ ಕಾರಣ. ಅವರು ಸುಮಾರು ಕಥೆ, ಕಾದಂಬರಿಗಳಿಂದ ಒಟ್ಟು ೬೦ಕ್ಕೂ ಹೆಚ್ಚು ಕೃತಿಗಳನ್ನು ಬಂಗಾಳಿಯಿಂದ ಕನ್ನಡಕ್ಕೆ ತಂದಿದ್ದಾರೆ. ಬಂಕಿಮರ ಹೆಣ್ಣಿನ ತ್ಯಾಗ, ಪ್ರೇಮ, ಔದಾರ್ಯ, ಉದಾತ್ತ ಭಾವನೆ, ಸ್ತ್ರೀಪರ ಚಿಂತನೆ, ದೈವಭಕ್ತಿ, ಕರ್ತವ್ಯ, ನಿಷ್ಠೆ, ದೇಶಪ್ರೇಮ, ಸ್ತ್ರೀ ಶಿಕ್ಷಣ ಮುಂತಾದ ಹತ್ತಾರು ವಿಷಯಗಳು ಕನ್ನಡ ಸಾಹಿತ್ಯ ಜಗತ್ತಿಗೆ ಪರಿಚಯವಾಗಿವೆ. ಅವರ 'ರಜನೀ', 'ವಿಷವೃಕ್ಷ'ದಂತಹ ಸಾಮಾಜಿಕ ಕಾದಂಬರಿಗಳಲ್ಲಿ ಹಿಂದೂ ಸಾಮಾಜಿಕ, ಸಾಂಸ್ಕೃತಿಕ ವಿವರಗಳು, ಕೌಟುಂಬಿಕ ಸಮಸ್ಯೆಗಳು, ಮಾನವ ಸಂಬಂಧಗಳು ಕಾಣಿಸಿಕೊಂಡಿವೆ. ಅವರ 'ವಿಷವೃಕ್ಷ' ಈ ದೃಷ್ಟಿಯಿಂದ ಒಂದು ಪೂರ್ಣ ಪ್ರಮಾಣದ ಸಾಮಾಜಿಕ ಕಾದಂಬರಿಯಾಗಿದೆ.

ಬಂಕಿಮಚಂದ್ರರದು ದೈತ್ಯ ಪ್ರತಿಭೆ. ಹಾಗಾಗಿ ಅವರ ಪ್ರತಿಭೆಯಿಂದ ಅನೇಕ ಕೃತಿಗಳು ಹೊರಬಂದಿವೆ. ಬಂಗಾಳದ ಕಾದಂಬರಿ ಸಾಮ್ರಾಟ ಅವರು. ಆ ಕೃತಿಗಳು ಭಾರತೀಯ ಸಾಹಿತ್ಯ ಲೋಕದಲ್ಲಿ ಉಂಟುಮಾಡಿದ ಸಂಚಲನ, ಅನನ್ಯವಾದುದು. ಬಾಲ್ಯವಿವಾಹ, ಬಹುಪತ್ನಿತ್ವ, ವಿಧವಾವಿವಾಹ, ಕ್ಷಾತ್ರತೇಜ, ಅದ್ಭುತ ರಮ್ಯ ನಿಸರ್ಗ ವರ್ಣನೆ, ಓದುಗರನ್ನು ಸೆರೆ ಹಿಡಿಯುವ ಅವರ ಕಥನಶೈಲಿ–ಇವೆಲ್ಲವೂ ಬಂಕಿಮಚಂದ್ರರ ಕಾದಂಬರಿಯಲ್ಲಿ ವಿಶೇಷ ಅಂಶಗಳಾಗಿವೆ. ಬಂಕಿಮಚಂದ್ರರೇ ವೆಂಕಟಾಚಾರ್ಯರ ಅನುವಾದಗಳಿಗೆ ಮನಸೋತು ತಮ್ಮೆಲ್ಲಾ ಕೃತಿಗಳನ್ನು ಕನ್ನಡಕ್ಕೆ ಅನುವಾದಿಸಲು ಅವರಿಗೆ ಒಪ್ಪಿಗೆ ನೀಡಿದ್ದುಂಟು. ಕನ್ನಡ ಕಾದಂಬರಿಯ ಬೆಳವಣಿಗೆಯಲ್ಲಿ ಬಂಕಿಮಚಂದ್ರರದೂ, ವೆಂಕಟಾಚಾರ್ಯರದೂ ಅನನ್ಯ ಕೊಡುಗೆಯಾಗಿದೆ.

ಸಂಸ್ಕೃತ ಭಾಷೆಯೇ ಭೂಯಿಷ್ಠವಾಗಿದ್ದ ಕಾಲದ ಸಂದರ್ಭದಲ್ಲಿ ವೆಂಕಟಾಚಾರ್ಯರು ಬಂಕಿಮಚಂದ್ರರ ಕಾದಂಬರಿಗಳನ್ನು ಸಮರ್ಪಕವಾದ ತಮ್ಮ ಭಾಷೆಯಲ್ಲಿ ಸಮರ್ಥವಾಗಿ ಅನುವಾದಿಸಿದ್ದಾರೆ. ವೆಂಕಟಾಚಾರ್ಯರ ಭಾಷಾ ಪ್ರತಿಭೆ, ಅನುವಾದದ ನಿಷ್ಠೆಯನ್ನು ಕಂಡು ಸ್ವತಃ ಬಂಕಿಮರೇ ಆಶ್ಚರ್ಯಪಟ್ಟಿದ್ದುಂಟಂತೆ.

ಚಾರಿತ್ರಿಕ ಮತ್ತು ಸಾಮಾಜಿಕ ಕಾದಂಬರಿಗಳನ್ನು ಬರೆಯುವವರಿಗೆ ಭಾಷೆ ಮತ್ತು ಸಿದ್ಧಾಂತಗಳ ಬಗ್ಗೆ ವಿಶಿಷ್ಟವಾದ ಆಯ್ಕೆಗಳಿರುತ್ತವೆ. ಚಾರಿತ್ರಿಕ ಕಾದಂಬರಿಗಳಲ್ಲಿ ಉಪದೇಶಾತ್ಮಕ ಉದ್ದೇಶಗಳಿರುತ್ತವೆ. ರಾಜರ ಮತ್ತು ರಾಜ್ಯಗಳ ಅವನತಿಗೆ ಪ್ರೇಮವೋ, ಅನ್ಯೆತಿಕತೆಯೋ ಕಾರಣವಾಗಿ ಅಂತಿಮವಾಗಿ ಯುದ್ಧ ನಡೆದು ಅವನತಿಯ ಹಾದಿಯನ್ನು ಹಿಡಿಯುತ್ತದೆ ಎಂದು ಅನೇಕರು ವಾದಿಸುತ್ತಾರೆ. ಇದರಿಂದಾಗಿ ಚಾರಿತ್ರಿಕ ಕಾದಂಬರಿಗಳಲ್ಲಿ ಕಪ್ಪು–ಬಿಳುಪಿನ ಪಾತ್ರಗಳು, ನೀತಿ–ಅನೀತಿ ಪಾತ್ರಗಳು ಮೂಲ ವ್ಯಕ್ತಿಗಳಾಗುತ್ತಾರೆ. ಆದರೆ ೧೯ನೆಯ ಶತಮಾನದ ಕೊನೆಯ ಹೊತ್ತಿಗೆ ಬಂಕಿಮಚಂದ್ರರಂತಹ ಕಾದಂಬರಿಕಾರರಲ್ಲಿ ಇದೆಲ್ಲವನ್ನೂ ಮೀರಿದ ಪೂರ್ಣದೃಷ್ಟಿಯ ಪ್ರಜ್ಞೆ ಕಾಣಿಸಿಕೊಳ್ಳುತ್ತದೆ. ಇವರದು ಬರೀ ಧಾರ್ಮಿಕ ಅಥವಾ ಸಾಮಾಜಿಕ ಸುಧಾರಣೆ ಮಾತ್ರವಾಗಿರಲಿಲ್ಲ. ಬದಲಾಗಿ ಸಮಾಜದಲ್ಲಿ

ಶಾಂತಿ, ಸಹಿಷ್ಣುತೆ, ಸಾಮರಸ್ಯ ಮತ್ತು ಬೌದ್ಧಿಕ ಸಮಾಜದ ನಿರ್ಮಾಣ ಇವರ ಗುರಿಯಾಗಿತ್ತು. ಚಾರಿತ್ರಿಕ ಕಾದಂಬರಿಕಾರರು ಬಳಸಿದ ಸಂಸ್ಕೃತ ಭೂಯಿಷ್ಠ ನುಡಿಗಟ್ಟಿನ ಮತ್ತು ಅವರ ಪ್ರಚಾರ ಉದ್ದೇಶಗಳು ಅತಿಯಾಗಿದ್ದ ಕಾಲದಲ್ಲಿ ಮತ್ತು ಕಾದಂಬರಿ ಎನ್ನುವುದು ಒಂದು ಸಾಹಿತ್ಯ ಪ್ರಕಾರ ಎಂಬ ತಿಳುವಳಿಕೆ ಇಲ್ಲದ ಕಾಲದಲ್ಲಿ ಈ ಬಗೆಯ ಚಾರಿತ್ರಿಕ ಕಾದಂಬರಿಗಳು ಯಶಸ್ವಿಯಾಗಲಿಲ್ಲ. ಆದರೆ ನಂತರ ಭಾಷೆಯನ್ನು ಕ್ರಿಯಾತ್ಮಕವಾಗಿ ಮತ್ತು ಸೃಜನಾತ್ಮಕವಾಗಿ ಉಪಯೋಗಿಸಿ ಸಮಕಾಲೀನ ಅನುಭವವನ್ನು ಒಳಗು ಮಾಡಿಕೊಂಡಾಗ ದೇಶಿ ಭಾಷೆಗಳಲ್ಲಿ 'ದುರ್ಗೇಶನಂದಿನಿ'ಯಂತಹ ಮಹತ್ವದ ಐತಿಹಾಸಿಕ ಕಾದಂಬರಿ ಸೃಷ್ಟಿಯಾಯಿತು. ಆದರೆ ಸಾಮಾಜಿಕ ಕಾದಂಬರಿಕಾರರು ತಮ್ಮದೇ ಸಿದ್ಧಾಂತ, ನಂಬಿಕೆ, ಮನೋಧರ್ಮ, ಸಂವೇದನಾಶೀಲತೆಗಳು ವ್ಯಕ್ತಿನಿಷ್ಠವೆನ್ನಿಸಿದರೂ ಅವುಗಳಲ್ಲಿನ ಸಾಮಾನ್ಯ ಅಂಶಗಳಿಂದಾಗಿ ಸಾರ್ವಕಾಲಿಕತೆಯ ಕಡೆ ಒತ್ತು ನೀಡಿದರು. ಬಂಕಿಮಚಂದ್ರರು ಸಹ ತಮ್ಮ ಸಾಮಾಜಿಕ ಕಾದಂಬರಿಗಳಲ್ಲಿ ತಮ್ಮ ವ್ಯಕ್ತಿನಿಷ್ಠ ನೆಲೆಯಲ್ಲಿ ಸಾಮಾಜಿಕ ನೆಲೆಯ ವಿವಿಧ ಸ್ತರಗಳನ್ನು ತಮ್ಮ ಕೃತಿಗಳಲ್ಲಿ ತರುವುದರ ಮೂಲಕ ಬರೀ ಬಂಗಾಳಿ ಕಾದಂಬರಿಕಾರರಾಗಿ ಮಾತ್ರ ಉಳಿಯದೆ, ಭಾರತೀಯ ಪ್ರಮುಖ ಕಾದಂಬರಿಕಾರರಾಗಿ ನಿಂತಿದ್ದಾರೆ. ತಮ್ಮ ಕೃತಿಗಳಲ್ಲಿ 'ಬಂಕಿಮತ್ವ'ದ ಅನನ್ಯತೆಯನ್ನು ಢಾಳಾಗಿ ಮೂಡಿಸಿದ್ದಾರೆ.

## ೪.೨. ವಿಷವೃಕ್ಷ: ಸಾಮಾಜಿಕತೆ

ಮನುಷ್ಯನ ನಿಯಂತ್ರಣಕ್ಕೆ ಬಾರದ ಅರಿಷಡ್ವರ್ಗಗಳನ್ನು ಸಾಂಕೇತಿಕವಾಗಿ ಬಂಕಿಮಚಂದ್ರರು 'ವಿಷವೃಕ್ಷ'ವೆಂದು ಸಂಕೇತ ಸೂಚಕವನ್ನಾಗಿ ಹೇಳಿ ಕಾದಂಬರಿಗೆ ವಿಷವೃಕ್ಷವೆಂದು ಶೀರ್ಷಿಕೆಯನ್ನಿಟ್ಟು ಕ್ರಿ.ಶ.1873ರಲ್ಲಿ ಪ್ರಕಟಿಸಿದರು. 'ವಿಷವೃಕ್ಷ' ಬಂಕಿಮರ ಮೊಟ್ಟಮೊದಲ ಸಾಂಸಾರಿಕ ವಸ್ತುವುಳ್ಳ ಸಾಮಾಜಿಕ ಕಾದಂಬರಿಯಾಗಿದೆ. ಬಂಗಾಳಿ ಭಾಷೆಯಲ್ಲಿ ರಚನೆಗೊಂಡ ಈ ಕಾದಂಬರಿ ಬಂಗಾಳೀಯರು ಪ್ರತಿಷ್ಠೆಯೆಂಬಂತೆ ತಂತಮ್ಮ ದಿವಾನಖಾನೆಯಲ್ಲಿ ಇರಿಸಿಕೊಳ್ಳುತ್ತಿದ್ದರು. ಅರಿಷಡ್ವರ್ಗಗಳ ನಿಯಂತ್ರಣದಿಂದ ಮನುಷ್ಯರ ಸುಖ ಬದುಕು ಸಾಧ್ಯವೆಂದೂ, ಜಟಿಲತೆಯಿಂದ ಮುಕ್ತವಾಗಿ ಸರಳ ಸುಂದರ ಬದುಕು ತಮ್ಮದಾಗುತ್ತದೆಂಬ ಧ್ಯೇಯಾದರ್ಶ ವಿಷವೃಕ್ಷ ಕಾದಂಬರಿಯ ಆಶಯವಾಗಿದೆ. ಅರಿಷಡ್ವರ್ಗಗಳ ವಿಚಾರದಲ್ಲಿ ಸಂಯಮವಿಲ್ಲದ ಬದುಕು ಬಿರುಗಾಳಿಗೆ ಸಿಕ್ಕ ಹಾಯಿದೋಣಿಯಂತೆ ದುರಂತದತ್ತ ನಡೆಯುತ್ತದೆಂಬ ಕಥಾವಸ್ತು 'ವಿಷವೃಕ್ಷ' ಕಾದಂಬರಿಯಲ್ಲಿದೆ. ಕಾದಂಬರಿಯಲ್ಲಿ ಉದ್ದಿಶ್ಯಾರ್ಥವೆನಿಸುವಂತಹ ಪಾತ್ರಗಳನ್ನು ಸೃಷ್ಟಿಸಿ ಕರತಲ ರಂಗಕೃತಿಯಂತಹ ಕಾದಂಬರಿಯನ್ನು ಬಂಕಿಮರು ರಚಿಸಿದ್ದಾರೆ. ಕಾದಂಬರಿಯ ತುಂಬಾ ನಾಟಕೀಯ ಸಂಘರ್ಷಗಳು ಮತ್ತು ಕುತೂಹಲ ಕೆರಳಿಸುವ ಘಟನೆಗಳು ಆವರಿಸಿಕೊಂಡಿವೆ.

"ಅತ್ತ ಸೂರ್ಯಮುಖಿಯು ಅನ್ನವಿಲ್ಲದೆ ನೀರಿಲ್ಲದೆ ಊರೂರು ಅಲೆಯುತ್ತ ನಾನಾ ಕಷ್ಟಗಳಿಗೀಡಾಗಿ ಕೊನೆಗೆ ಮಧುಪುರದ ಹತ್ತಿರ ಸಾಯುತ್ತ ಬಿದ್ದಿದ್ದಳು. ಅವಳನ್ನು ಒಬ್ಬ ಬ್ರಹ್ಮಚಾರಿಯು ಎತ್ತಿಕೊಂಡು ಹೋಗಿ ಆ ಊರಿನ ಹರಮಣಿ ಎಂಬವಳ ಮನೆಯಲ್ಲಿ ಬಿಟ್ಟ.

ಆ ಊರಿನ ವೈದ್ಯ ರಾಮಕೃಷ್ಣರಾಯನು ಔಷಧ ಕೊಟ್ಟನು. ಅವಳಿಂದ ತಕ್ಕಷ್ಟು ವಿಷಯಗಳನ್ನು ತಿಳಿದುಕೊಂಡು ಬ್ರಹ್ಮಚಾರಿಯು ನಗೇಂದ್ರನಿಗೆ ಬರುವಂತೆ ಕಾಗದ ಬರೆದನು. ಆದರೆ ಅವನು ಊರಲ್ಲಿರಲಿಲ್ಲವಾಗಿ ಅದು ಅವನಿಗೆ ಆಗಲೇ ತಲುಪಲಿಲ್ಲ. ಕಾಶಿಯಲ್ಲಿದ್ದಾಗ ಮಿಕ್ಕ ಕಾಗದಗಳೊಡನೆ ಬಂತು. ಕೂಡಲೇ ಮಧುಪುರಕ್ಕೆ ಹೋಗಲು, ಹರಮಣಿಯಿದ್ದ ಮನೆ ಸುಟ್ಟುಹೋಯಿತೆಂದೂ ಅವಳು ಓಡಿಹೋದಳೆಂದೂ ಅವಳ ಮನೆಯಲ್ಲಿದ್ದ ಸೂರ್ಯಮುಖಿಯೂ ಸುಟ್ಟು ಹೋದಳೆಂದೂ ರಾಮಕೃಷ್ಣರಾಯನು ಹೇಳಿದನು".[೧]

ಸುಖ ಬದುಕನ್ನು ವಿವೇಚನೆಯಿಂದ ನಡೆಸಿಕೊಳ್ಳಲು ಅಸಮರ್ಥರಾದ ನಗೇಂದ್ರ, ದೇವೇಂದ್ರ, ಹೀರೆ ಇತ್ಯಾದಿ ಪಾತ್ರಗಳು, ಸಂಯಮ ಮೀರಿದ ಪ್ರಜ್ಞೆಯಿಂದ ಬದುಕನ್ನು ದುರಂತಮಯ ಮಾಡಿಕೊಳ್ಳುತ್ತಾರೆ. ಕಾಮ–ಕ್ರೋಧ, ಲೋಭ, ಮೋಹ, ಮದ, ಮಾತ್ಸರ್ಯಾದಿ ಗುಣಗಳನ್ನಷ್ಟೇ ನಿಯಂತ್ರಿಸುವುದರಿಂದ ಬದುಕು ದುಃಖರಹಿತವಾಗುತ್ತದೆಂಬ ಕಲ್ಪನೆ ಬಂಗಾಳದ ಕವಿ–ಕಾದಂಬರಿಕಾರ ಬಂಕಿಮಚಂದ್ರರಿಗಿದ್ದಂತೆ ತೋರುತ್ತದೆ.

ವಿಷವೃಕ್ಷ ಕಾದಂಬರಿಯಲ್ಲಿ ಗುಣವುಳ್ಳ ಸ್ತ್ರೀಪುರುಷ ಪಾತ್ರಗಳು ಗುಣಹೀನ ಪಾತ್ರಗಳ ತೌಲನಿಕ ವಿಶ್ಲೇಷಣೆಯನ್ನು ಕಾಣಬಹುದಾಗಿದೆ.

ಬಂಗಾಳದ ಹರಿಹರಮರ ಜಿಲ್ಲೆಯ ಗೋವಿಂದಪುರ ಗ್ರಾಮದ ಸಿರಿವಂತ ಜಮೀನ್ದಾರ 'ನಗೇಂದ್ರ' ಆತನ ಧರ್ಮಪತ್ನಿ ಸೂರ್ಯಮುಖಿ. ಭಾರತೀಯ ಸಂಸ್ಕೃತಿಯಲ್ಲಿ ಆದರ್ಶ ಸ್ತ್ರೀ ರೂಪದಲ್ಲಿ ಕಾಣಿಸುವಂತಹ ಪರಿಪೂರ್ಣ ಸ್ವಭಾವ ಗುಣದ ಸ್ತ್ರೀಪಾತ್ರ. ರೂಪ, ಗುಣ, ಸ್ವಭಾವಗಳಲ್ಲಿ ಪುರಾಣಗಳಲ್ಲಿ ಕಾಣಸಿಗುವ ಸೀತೆ, ಸಾವಿತ್ರಿಯಂಥವರನ್ನು ನೆನಪಿಗೆ ತರುವಂತಹ ಪಾತ್ರ ಸೂರ್ಯಮುಖಿಯದು.

ನಗೇಂದ್ರ ಆಗರ್ಭ ಶ್ರೀಮಂತ, ಅಷ್ಟೇ ವಿನಯ ಸಂಪನ್ನನಾಗಿರುತ್ತಾನೆ. ಕಲಾರಸಿಕ, ಸ್ವಭಾವತಃ ಸುಗುಣವನಾದರೂ ಸಂದರ್ಭವಶಾತ್ ಕಾಮ–ಮೋಹಕ್ಕೆ ಒಳಗಾಗುವ ದುರ್ಬಲ ಮನಸ್ಸಿನ ವ್ಯಕ್ತಿ ನಗೇಂದ್ರ. ನಗೇಂದ್ರನು ತಾನಾಗಿ ತಂದುಕೊಳ್ಳುವ ವಿಪತ್ತುಗಳು, ವಿಪತ್ತಿನಿಂದಾದ ವೇದನೆ ಇತ್ಯಾದಿ ಸಂಗತಿಗಳು 'ವಿಷವೃಕ್ಷ' ಕಾದಂಬರಿಯಲ್ಲಿ ಓದುಗರ ಮನಸ್ಸಿಗೆ ಲಗ್ಗೆ ಹಾಕುತ್ತವೆ.

'ವಿಷವೃಕ್ಷ' ಕಾದಂಬರಿಯಲ್ಲಿ ಬರುವ 'ಕುಂದನಂದಿನಿ'ಯೇ ನಾಯಕಿ, ನಗೇಂದ್ರನೇ ನಾಯಕ. ನಾಯಕಿ ಕುಂದನಂದಿನಿ ನಗೇಂದ್ರನಿಗೆ ಪರಿಚಯವಾದ ಕ್ಷಣದಿಂದ ಕಾದಂಬರಿಯ ಕಥೆ ಪ್ರಾರಂಭವಾಗುತ್ತದೆ. ಕುದನಂದಿನಿ ಅನನ್ಯ ರೂಪವತಿ, ತನ್ನ ಸೌಂದರ್ಯದ ಬಗ್ಗೆ ತನಗೆ ಅರಿವಿಲ್ಲದಷ್ಟು ಮುಗ್ಧೆ. ಬದುಕಿನಲ್ಲಿ ಬಂದೆರಗುವ ಸಂಕಟಗಳಿಗೆ ಸಾವು ಒಂದೇ ಪರಿಹಾರವೆಂದು ತಿಳಿಯುವ ಅನಾಥೆ. ಬಂಕಿಮಚಂದ್ರರು ತಮ್ಮ ಪ್ರಪ್ರಥಮ ಸಾಮಾಜಿಕ ಕಾದಂಬರಿಯಲ್ಲಿ

---

೧. ಬಿ.ವೆಂಕಟಾಚಾರ್ಯ, 'ವಿಷವೃಕ್ಷ', ಸಾಹಿತ್ಯಮಂದಿರ, ಹನುಮಂತನಗರ, ಬೆಂಗಳೂರು–೧೯, ಪುಟ–೫೩, ೧೯೬೩.

ಸಾಂಸಾರಿಕ ವಸ್ತುವುಳ್ಳ ಅನಾಥ ಸ್ತ್ರೀಯ ತಲ್ಲಣ, ತಳಮಳ, ಮೂಕವೇದನೆ ಇತ್ಯಾದಿ ಗುಣಗಳನ್ನು ಕುಂದನಂದಿನಿಯ ಮೂಲಕ ಅರ್ಥಪೂರ್ಣವಾಗಿ ವಿಶ್ಲೇಷಿಸುತ್ತಾ ಹೋಗುತ್ತಾರೆ. ಕುಂದನಂದಿನಿಯ ಬಗ್ಗೆ, ಕಥಾನಾಯಕ ನಗೇಂದ್ರನು ಪ್ರಾರಂಭದಲ್ಲಿ ಹೊಂದುವ ಅನುಕಂಪೆ, ದಿನದಿಂದ ದಿನಕ್ಕೆ ಅನುರಾಗವಾಗಿ ಮಾರ್ಪಡುವ ಸನ್ನಿವೇಶಗಳನ್ನು ಬಂಕಿಮಚಂದ್ರರು ಗೊಂದಲಕ್ಕೆಡೆಗೊಡದೆ ಚಿತ್ರಿಸುತ್ತಾ ಹೋಗುತ್ತಾರೆ. ಕಾದಂಬರಿಯ ಉಳಿದೆಲ್ಲ ಪಾತ್ರಗಳೂ ಕಾದಂಬರಿಯ ನಾಯಕ-ನಾಯಕಿಯರ ಸುಖ ಮತ್ತು ಉದ್ವಿಗ್ನ ಸ್ಥಿತಿಗಳಿಗೆ ಪೂರಕವಾಗಿ ಬರುವ ಪೋಷಕ ಪಾತ್ರಗಳಾಗಿ ನಿಲ್ಲುತ್ತವೆ.

ನಗೇಂದ್ರನಲ್ಲಿ ಕಂಡು ಬರುವ ಅನುಕಂಪವು ಒಂದು ಗುಣವಾಗಿದ್ದರೂ ಅದು ತೀಕ್ಷ್ಣವಾದ ಪರಿಣಾಮವುಂಟು ಮಾಡುತ್ತಾ ಬೆಳೆಯುತ್ತದೆ. ಕುಂದನಂದಿನಿ ಅನಾಥೆ. ವಯಸ್ಸಾದ ತಂದೆ ಮಾರಣಾಂತಿಕ ಕಾಯಿಲೆಯಿಂದ ನರಳುತ್ತಿರುವಾಗ ಹಗಲು-ರಾತ್ರಿ ನಿದ್ರೆಯಿಲ್ಲದೆ ಕುಂದನಂದಿನಿ ತಂದೆಯನ್ನು ಉಪಚರಿಸುತ್ತಿರುತ್ತಾಳೆ. ತಂದೆಯ ಪ್ರಾಣ ಪಕ್ಷಿಹಾರಿ ಹೋದಾಗ ನಿತ್ರಾಣದಿಂದ ಈಕೆಗೆ ನಿದ್ದೆ ಹತ್ತಿ ಒಂದು ಕನಸು ಬೀಳುತ್ತದೆ. ಕನಸಿನಲ್ಲಿ ಸತ್ತ ತನ್ನ ತಾಯಿ ಕಾಣಿಸಿಕೊಂಡು ವಿಷವೃಕ್ಷದ ನೆರಳಲ್ಲಿ ಸೇರಿ ಸಂಕಟಕ್ಕೀಡಾಗಬೇಡ, ತನ್ನ ಜೊತೆ ಬಂದು ಸೇರೆಂದು ಆಹ್ವಾನಿಸುತ್ತಾಳೆ. ಆಗ ಅನಾಥ ಕಿಶೋರಿ ಕುಂದನಂದಿನಿಯ ವಯಸ್ಸು ಹದಿಮೂರು ವರ್ಷ.

ನಗೇಂದ್ರನ ಪತ್ನಿ ಸೂರ್ಯಮುಖಿ. ಸಿರಿತನದ ಬೆಡಗಿ, ಚೆಲುವು ಸಾಧಾರಣವಾಗಿರಲಿಲ್ಲ. ಸ್ವಭಾವತಃ ಪ್ರೇಮಮಯಿಯಾಗಿದ್ದ ಸೂರ್ಯಮುಖಿ ಪತಿಯನ್ನೇ ಪರಮೇಶ್ವರನೆಂದು ಆರಾಧಿಸುವ ಶ್ರದ್ಧಾಭಕ್ತಿಯುಳ್ಳ ಹೆಂಡತಿಯಾಗಿದ್ದಳು. ಅಂತಹ ರೂಪ ಮತ್ತು ಗುಣವುಳ್ಳ ಸೂರ್ಯಮುಖಿಯನ್ನೇ ಮರೆಸುವಷ್ಟರ ಮಟ್ಟಿಗೆ ಕುಂದನಂದಿನಿಯ ಚೆಲುವು ನಗೇಂದ್ರನ ಮನಸ್ಸನ್ನು ದಾಂಪತ್ಯ ಬದುಕನ್ನು ಛಿದ್ರಗೊಳಿಸುತ್ತದೆ.

ಕಾದಂಬರಿಕಾರರು ಅನ್ಯೋನ್ಯ ದಾಂಪತ್ಯದ ಸುಖೀಸಂಸಾರವನ್ನು ಓದುಗರಿಗೆ ಮಾದರಿ ರೂಪವಾಗಿ ಕೊಡುತ್ತಾರೆ. ಶ್ರೀಶ ಮತ್ತವನ ಪತ್ನಿ ಕಮಲಮಣಿ ಇವರ ಪ್ರೇಮಕಲಹ, ಅನುರಾಗ, ಕುಟುಂಬ ನಿರ್ವಹಣೆ ಮುಂತಾದವನ್ನು ಹೇಳಿ ನಗೇಂದ್ರನು ನಡೆಯುವ ಪತಿತ ಮಾರ್ಗವನ್ನು ವಿಡಂಬಿಸಿ ಹೇಳುತ್ತಾರೆ. ನಗೇಂದ್ರನು ಪತ್ನಿ ಸೂರ್ಯಮುಖಿಯಿದ್ದರೂ, ಕುಂದನಂದಿನಿಯ ವ್ಯಾಮೋಹವನ್ನು ಮರೆಯಲು ಸೆರೆ ಕುಡುಕನಾಗುತ್ತಾನೆ. ಕಾಮದ ಸೆಳೆತಕ್ಕೆ ಸಿಲುಕಿ ತಂತಾನೇ ಖಿನ್ನತೆಯನ್ನು ಅನುಭವಿಸುತ್ತಾನೆ.

ಕಾದಂಬರಿಯ ನಗೇಂದ್ರ – ದೇವೇಂದ್ರರು ಬಂಗಾಳದಲ್ಲಿ ಹೊಸತಾಗಿ ಪ್ರಾರಂಭವಾಗುತ್ತಿದ್ದ ಆರ್ಯ ಸಮಾಜದ ಸಾಮಾಜಿಕ ಕಾರ್ಯಚಟುವಟಿಕೆಗಳನ್ನು ತಮ್ಮ ಪ್ರವೃತ್ತಿಗಳ ಸಮರ್ಥನೆಗೆ ಬಳಸಿಕೊಳ್ಳುತ್ತಾರೆ. ಧರ್ಮದ ಕಂದಾಚಾರದ ನಿರಾಕರಣ ಮಾಡಿ ವಿಧವಾ ವಿವಾಹದಂತಹ ವಿಚಾರಗಳಲ್ಲಿ ಉದಾರತೆಯ ಮನಃಸ್ಥಿತಿಯನ್ನು ಹೊಂದಿರುತ್ತಾರೆ. ನಗೇಂದ್ರ – ದೇವೇಂದ್ರ

ಹಾಗೂ ಹೀರೆಯರ ಅಂತರಂಗದಲ್ಲಿ ವಿಷವೃಕ್ಷ ಬೆಳೆದು, ಅನರ್ಥಕಾರಿ ನೆರಳನ್ನು ವ್ಯಾಪಿಸಿಕೊಂಡಿರುತ್ತದೆ. 'ವಿಷವೃಕ್ಷ'ದ ನೆರಳೂ ವಿಷಮಯವೆಂದೇ ಕಾದಂಬರಿಯ ಸಂದೇಶವಾಗಿರುತ್ತದೆ. 'ವಿಷವೃಕ್ಷ'ವನ್ನು ಕುರಿತು ಎ.ಆರ್.ಕೃಷ್ಣಶಾಸ್ತ್ರಿಗಳು ನಡೆಸಿರುವ ವಿಶ್ಲೇಷಣೆ ಕಾದಂಬರಿಯ ಅರ್ಥವ್ಯಾಪ್ತಿಯನ್ನು ಹೆಚ್ಚಿಸುತ್ತದೆ.

ವಿಷವೃಕ್ಷ ಸೆಳೆತಕ್ಕೆ ವಿಮುಖವಾಗುವ ಏಕೈಕ ಮಾರ್ಗವೆಂದರೆ ಶಿಕ್ಷಣ ಹಾಗೂ ಲೋಕಾನುಭವ, ಬಂಕಿಮರು ಲೋಕಾನುಭವವನ್ನು ಲೋಕಶಿಕ್ಷಣ ಎಂದೇ ವ್ಯಾಖ್ಯಾನಿಸುತ್ತಾರೆ. ಕಾಮ, ಕ್ರೋಧಾದಿ ಅರಿಷಡ್ವರ್ಗಗಳಿಗೆ ಪ್ರತೀಕವಾಗಿ ಕಾದಂಬರಿಕಾರರು 'ಹೀರೆ'ಯ ಪಾತ್ರವನ್ನು ಚಿತ್ರಿಸಿದ್ದಾರೆ. ಈ ವಿವರಣೆಯನ್ನು ಎ.ಆರ್.ಕೃಷ್ಣಶಾಸ್ತ್ರೀಗಳು ಹೀಗೆ ವ್ಯಾಖ್ಯಾನಿಸುತ್ತಾರೆ.

"ಹೀರೆಯು ತರುಣ ವಯಸ್ಸಿನ ಹೆಂಗಸಾದರೂ (ವಯಸ್ಸು ೨೦) ವಿಧವೆಯಾದರೂ ಅವಳು ವಿಷವೃಕ್ಷದ ಬೆಳವಣಿಗೆಗೆ ಹದವಾದ ಕ್ಷೇತ್ರವಾಗಿದ್ದಳು. ಬಡವಳಾದರೂ ಜನ್ಮತಃ ಅವಳು ರಸಿಕಳು – ಉಡುಗೆ ತೊಡುಗೆಗಳಲ್ಲಿ ಆಸೆ, ವಿನೋದಪರತೆ, ಚೆಲ್ಲಾಟ, ಚೇಷ್ಟೆ, ಅತ್ತರು ಪನ್ನೀರುಗಳ ಮೇಲೆ ಚಪಲ, ಸಂಗೀತದಲ್ಲಿ ಪ್ರೇಮ, ಹೆಂಚಿನ ಸಣ್ಣ ಮನೆಯಾದರೂ ಮುಂದೆ ಗುಲಾಬಿ ಮಲ್ಲಿಗೆ ಗಿಡಗಳು, ಆಟಕ್ಕೆ ಜಿಂಕೆಯ ಮರಿ, ಮಾಲಿಯೊಡನೆ ಸರಸ, ರಾತ್ರಿ ಪೊಲೀಸನ ಪರಿಚಯ, ಇವು ಅದನ್ನು ತಿಳಿಸುತ್ತವೆ. ಆದರೆ ಅವಳ ರಸಿಕತೆಗೆ ತಕ್ಕಷ್ಟು ಗ್ರಾಸವಿರಲಿಲ್ಲ. ಅವಳು ವಿದ್ಯಾವಂತಳಲ್ಲ; ಆದರೆ ಅವಳಿಗೆ ಲೋಕಶಿಕ್ಷಣ ಬೇಕಾದಷ್ಟಿತ್ತು. ಆದ್ದರಿಂದ ಮನವಾಗಿ ಗದ್ದಲಕ್ಕೆ ಅವಕಾಶ ಕೊಡದೆ ಬಾಳಿಕೊಂಡಿದ್ದಳು. ಪ್ರವೃತ್ತಿ ಸಾಮರ್ಥ್ಯಗಳೆರಡೂ ತಕ್ಕಮಟ್ಟಿಗಿದ್ದುವು. ದೇವೇಂದ್ರನಂಥ ಸುಂದರನೂ ಸುಲಭನೂ ಆದ ಗಂಡಸನ್ನು ಕಂಡರೂ ಅವನು "ಅಂಕಾಗತನಾಗಿ ಬಂದಿದ್ದರೂ" ಅವಳು ಅಪೂರ್ವ ಸಂಯಮದಿಂದ ಅವನನ್ನು ಓಡಿಸಿದಳು, ಏಟು ಬಿಗಿಸಿದಳು. ಆದರೆ ಒಳಗೇ ಅವಳ ಮನಸ್ಸು ಬಾಗುತ್ತಿತ್ತು. ಅದು ದೇವೇಂದ್ರನಂಥ ಕದೀಮನ ಮುಂದೆ ಎಷ್ಟು ಕಾಲ ಸೆಡೆತು ನಿಂತೀತು? ಅವನ ಕಾಮ ಕೌಶಲ್ಯಗಳಿಗೆ ಅಥವಾ ಸೇಡು ಕೋಪಗಳಿಗೆ, ಬಲಿಯಾಗಬೇಕಾಯಿತು. ದೇವೇಂದ್ರನ ಮಾಯೆಗೆ ಮರುಳಾಗಿ ಚಿತ್ತ ಸಂಯಮದಲ್ಲಿ ಪ್ರವೃತ್ತಿಯೇ, ಇಲ್ಲದೆ, ಆದ್ದರಿಂದ ಸಾಮರ್ಥ್ಯವಿದ್ದರೂ ಉಪಯೋಗವಾಗದೆ, ವಿಷವೃಕ್ಷದ ಫಲವನ್ನು ಪಡೆದಳು".[೨]

ಬಂಕಿಮಚಂದ್ರರು ಸೃಜಿಸಿರುವ ದೇವೇಂದ್ರನ ಪಾತ್ರ ಮೇಲುನೋಟಕ್ಕೆ 'ಖಳ' ಪಾತ್ರದಂತೆ ಕಂಡರೂ, ಓದುಗರು, ಕಾದಂಬರಿಯನ್ನು ಓದಿ ಮುಗಿಸಿದ ನಂತರ ಆತನ ಬಗ್ಗೆ ಅನುಕಂಪ ಹೊಂದುವುದು, ಗಮನಾರ್ಹವಾದ ಸಂಗತಿ. ದೇವೇಂದ್ರ ನಗೇಂದ್ರನಿಗೆ ದಾಯಾದಿಯಾಗಬೇಕು, ನಗೇಂದ್ರನಿಗಿದ್ದಷ್ಟೇ ಆಸ್ತಿ–ಪಾಸ್ತಿಗಳು ದೇವೇಂದ್ರನಿಗೂ ಇರುತ್ತಿದ್ದವು. ದಾಯಾದಿ ವೈಷಮ್ಯಕ್ಕೆ ಬಲಿಯಾದ ಈ ಎರಡು ಮನೆತನಗಳ ನಡುವೆ ನ್ಯಾಯಾಲಯದ ಕಟ್ಟಳೆ ಜರುಗಿ, ದೇವೇಂದ್ರನ ತಂದೆ ನ್ಯಾಯಾಲಯದಲ್ಲಿ ಸೋಲನ್ನು ಹೊಂದಿ ಬಡತನ ಪ್ರಾಪ್ತವಾಗುತ್ತದೆ. ದೇವೇಂದ್ರ –

---

೨. ಬಿ.ವೆಂಕಟಾಚಾರ್ಯ, ವಿಷವೃಕ್ಷ, ಸಾಹಿತ್ಯಮಂದಿರ, ಹನುಮಂತನಗರ, ಬೆಂಗಳೂರು–೧೯, ೧೯೬೩, ಪುಟ–೬೮.

ನಗೇಂದ್ರನಂತೆಯೇ ಸ್ಫುರದ್ರೂಪಿ ಮತ್ತು ಸುಶ್ರಾವ್ಯವಾದ ಕಂಠವನ್ನು ಹೊಂದಿದ್ದ. ಸಂಗೀತ ಆತನಿಗೆ ಗೊತ್ತಿತ್ತು. ಬಾಯಿತೆರೆದು ರಾಗಬದ್ಧವಾಗಿ ಮಧುರವಾದ ಹಾಡುಗಳನ್ನು ಹಾಡಿದನೆಂದರೆ ಕೇಳುವ ಜನ ಸಮ್ಮೋಹಿತರಾಗುತ್ತಿದ್ದರು. ದೇವೇಂದ್ರನಿಗೆ ಸ್ತ್ರೀಕಂಠವೂ, ಪುರುಷಕಂಠವೂ ಇತ್ತು, ಅಗತ್ಯವೆನಿಸಿದಾಗ ಸ್ತ್ರೀಯ ಕಂಠದಿಂದ ಹಾಡಬಲ್ಲವನಾಗಿದ್ದ. ಸ್ತ್ರೀ ವೇಷಧಾರಿಯಾಗಿ ಅದೇ ಮಧುರ ಕಂಠದಲ್ಲಿ ಹಾಡಿದನೆಂದರೆ ಆತ ಪುರುಷನೆಂದು ಯಾರಿಗೂ ಗೊತ್ತಾಗುತ್ತಿರಲಿಲ್ಲ. ಇಂತಹ ಪ್ರತಿಭಾಶಕ್ತಿ ಆತನಿಗೆ ಪ್ರಕೃತಿದತ್ತವಾದ ಕೊಡುಗೆಯೇ ಆಗಿತ್ತು. ದೇವೇಂದ್ರನ ಅದೃಷ್ಟ ಚೆನ್ನಾಗಿದ್ದಿದ್ದರೆ, ಆತ ನಗೇಂದ್ರನಿಗಿಂತ ಯಾವ ವಿಷಯದಲ್ಲಿಯೂ ಕಡಿಮೆಯಾಗುತ್ತಿರಲಿಲ್ಲ. ಒಂದೇ ವಂಶಕ್ಕೆ ಸೇರಿದ ಎರಡು ಮನೆತನದವರಿಗೆ ತಲೆಮಾರುಗಳಿಂದ ಜಗಳವಾಗಿ ನಗೇಂದ್ರನ ತಾತಂದಿರ ಕಾಲದಲ್ಲಿ ಜಮೀನ್ದಾರಿಕೆ ಪೂರ್ಣವಾಗಿ ನಗೇಂದ್ರನ ಮನೆತನಕ್ಕೆ ಬಂದು ದೇವೇಂದ್ರನ ಕುಟುಂಬವು ಬಡವರಾಗಿಬಿಟ್ಟಿದ್ದಿತು. ದೇವೇಂದ್ರನ ತಂದೆ ಬಂದ ಬಡತನವನ್ನು ಕಳೆದುಕೊಳ್ಳುವ ಮಹತ್ವಾಕಾಂಕ್ಷೆಯಿಂದ 'ಹೈಮವತಿ'ಯೆಂಬ ಸಿರಿವಂತ ಜಮೀನ್ದಾರನ ಮಗಳನ್ನು ದೇವೇಂದ್ರನಿಗೆ ಮದುವೆ ಮಾಡಿದನು. ಹೈಮವತಿ ಲಕ್ಷಣವಿಲ್ಲದ ಕುರೂಪಿ, ಕುರೂಪಕ್ಕಿಂತ ವಿಕಾರವಾದ ಕುತ್ಸಿತ ಬುದ್ಧಿಯವಳಾಗಿದ್ದಳು. ಸದಾ ಕೊಂಕು ನುಡಿಯುವ 'ಹೈಮವತಿ'ಯ ಮೇಲೆ ನಿರಾಸಕ್ತಿ ಹುಟ್ಟಿ, ಸಂಸಾರ ಸುಖದಿಂದ ವಂಚಿತನಾದನು. ಸಾಂಸಾರಿಕ ಬದುಕಿನ ಬಗೆಗೆ ಜಿಗುಪ್ಸೆ ಹುಟ್ಟಿ ಮನೆಯನ್ನು ಬಿಟ್ಟು ಕಲ್ಕತ್ತೆಗೆ ಹೋಗಿ ಅಲ್ಲಿನ ಪಾಪಪ್ರಪಂಚದಲ್ಲಿ ಮುಳುಗಿದನು. ತನಗಾದ ಅನ್ಯಾಯವನ್ನು ಮರೆಯಲು ಪ್ರಾರಂಭಿಸಿದ ಮಧ್ಯಪಾನ ಕೊನೆಗೆ ಚಟವಾಗಿ ಹೋಯಿತು. ಕಲ್ಕತದಲ್ಲಿ ಬಾಬಾಗಿರಿಯಲ್ಲಿ ಅಭ್ಯಾಸ ಮಾಡಿ ಊರಿಗೆ ಮರಳಿ ಬಂದು ಸಮಾಜ ಸುಧಾರಣೆ ಎಂಬ ಸೋಗಿನಲ್ಲಿ ಇಂದ್ರಿಯ ಚಾಪಲ್ಯಗಳನ್ನು ಪೂರೈಸಿಕೊಂಡು ಬದುಕು ನಡೆಸಿದನು. ದೇವೇಂದ್ರನಿಗೆ ರೂಪ, ಹರೆಯ, ಲೋಕಜ್ಞಾನ, ಸಂಗೀತ ಪರಿಜ್ಞಾನ ಎಲ್ಲವೂ ಇತ್ತು, ಆದರೆ ನಗೇಂದ್ರನಿಗೆ ದೊರೆತಂಥ ಪತ್ನಿ ದೊರಕಲಿಲ್ಲ. ಸಂಸಾರದ ಸುಖದಿಂಥ ವಂಚಿತನಾದ ದೇವೇಂದ್ರನು ಆ ಕೊರತೆಯನ್ನು ಮನಸ್ಸಿಗೆ ತಂದುಕೊಂಡು ವಿಷಯಾಸಕ್ತಿಯ ವಿಷವೃಕ್ಷವನ್ನು ಬೆಳೆಯಲು ಅವಕಾಶ ಕೊಟ್ಟನು. ವಿಷಯಾಸಕ್ತಿಗಳೇ ಬದುಕಿನ ಸರ್ವಸ್ವವೆಂದು ತಿಳಿಯುವ ಮಟ್ಟಿಗೆ ದುರ್ಬಲ ಮನಸ್ಸುಳ್ಳವನಾದನು. ಪರಸ್ತ್ರೀ ವ್ಯಾಮೋಹ ಆತನಿಗೆ ಅನೀತಿಯೆನಿಸಲಿಲ್ಲ. ಪರಸ್ತ್ರೀ ಸಂಗ ಅತ್ಯಾಚಾರವೆನಿಸಲಿಲ್ಲ. ಇಂತಹ ಸಂದರ್ಭದಲ್ಲಿ ದೇವೇಂದ್ರನಿಗೆ 'ಹೀರೆ' ದೊರೆತಳು. ಕುಂದನಂದಿನಿ ಕಣ್ಸೆಳೆದಳು. ವಿಷವೃಕ್ಷದ ಕಹಿಫಲದ ಪರಿಣಾಮದಿಂದ ಕುಂದನಂದಿನಿ ಸತ್ತು ಬದುಕಿದಳು. ದೇವೇಂದ್ರ ಮತ್ತು ಹೀರೆಯರು ದುಸ್ಸಹವಾದ ರೋಗಗಳಿಗೆ ಬಲಿಯಾದರು.

ಬಂಕಿಮಚಂದ್ರರು ಅರಿಷಡ್ವರ್ಗಗಳ ಪರಿವಿಡಿಯಲ್ಲಿ 'ಕಾಮ'ವನ್ನು ತುಂಬಾ ಕಠಿಣವಾದ ರೀತಿಯಲ್ಲಿ ಬಣ್ಣಿಸುತ್ತಾರೆ. ಶೃಂಗಾರದ ಪರಿಧಿಯಾಚೆಗಿನ ವಿಷಯಾಸಕ್ತಿ ಹೇಯವೆಂಬ ವಾದವನ್ನು ಕಾದಂಬರಿಯುದ್ದಕ್ಕೂ ವಿಶ್ಲೇಷಿಸುತ್ತಾರೆ. ನಿರ್ವ್ಯಾಜ ಪ್ರೇಮ, ಒಲುಮೆ, ಶೃಂಗಾರ, ಕಾದಂಬರಿಯ ಪಾತ್ರಗಳ ವರ್ತನೆಯಲ್ಲಿ ಕಾಣಿಸುವುದೇ ಇಲ್ಲ. ನಗೇಂದ್ರನು ದೋಣಿ ಪ್ರಯಾಣದ ಸಂದರ್ಭದಲ್ಲಿ ಹಳ್ಳಿಯೊಂದರ ಅನಾಥ ಕನ್ಯೆ ಕುಂದನಂದಿನಿಯ ನೆರವಿಗೆ ಬರುವುದು ಮೊದಮೊದಲು

ನಗೇಂದ್ರನ ಹೃದಯ ವೈಶಾಲ್ಯವನ್ನು ಪರಿಚಯದಂತೆ ಕಂಡರೂ ದಿನದಿಂದ ದಿನಕ್ಕೆ ಕುಂದನಂದಿನಿಯ ರೂಪಕ್ಕೆ ಮಾರುಹೋಗಿ ಅನುಕಂಪವಾಗಿ ಬೆಳೆದ ಮನೋಭಾವ, ಅನುರಾಗಕ್ಕೆ ತಿರುಗುತ್ತದೆ. ನಗೇಂದ್ರನಿಗೆ ಸೂರ್ಯಮುಖಿಯಂಥ ರೂಪಸಿ ಹೆಂಡತಿಯಿದ್ದಳು. ಇಡೀ ಕಾದಂಬರಿಯಲ್ಲಿ ಸೂರ್ಯಮುಖಿ ಒಂದು ಸುಸಂಸ್ಕೃತ ಪಾತ್ರವಾಗಿ ನಿರೂಪಿತವಾಗಿದೆ. ಅಂತಹ ಪತಿಭಕ್ತಿ ಹೆಂಡತಿಗೆ ಅನ್ಯಾಯವೆಸಗುವಂತೆ ನಗೇಂದ್ರ ಹಾಗೂ ಕುಂದೆಯರ ವಿವಾಹ ನಡೆದುಹೋಗುತ್ತದೆ. ತಾನು ಮಾಡಿದ ವಿಪರೀತ ವರ್ತನೆಯ ಸಮರ್ಥನೆಗಾಗಿ ನಗೇಂದ್ರ ಆರ್ಯ ಸಮಾಜದ ತತ್ವಾದರ್ಶಗಳನ್ನು ಬಳಸಿಕೊಳ್ಳುತ್ತಾನೆ. ಆರ್ಯಸಮಾಜದ ಕ್ರಾಂತಿಕಾರೀ ಧೋರಣೆಗಳು ವಿಧವಾವಿವಾಹವನ್ನು ಬೆಂಬಲಿಸಿದರೂ, ಸುಶೀಲೆ, ಪತಿಭಕ್ತಿ ಸಾಧ್ವಿ ಸೂರ್ಯಮುಖಿಯಂತಹ ಸ್ತ್ರೀಯರ ಸ್ವಭಾವಾದಿ ಗುಣಗಳನ್ನು ಅಲಕ್ಷಿಸಿದಂತೆ ಭಾಸವಾಗುವ ಪರಿಸ್ಥಿತಿಯ ಸಮರ್ಥನೆಗೆ ಆರ್ಯಸಮಾಜದ ಧ್ಯೇಯಾದರ್ಶಗಳು ನೆರವಾಗುವುದಿಲ್ಲ.

ಸೂರ್ಯಮುಖಿ, ಪತಿಭಕ್ತಿಯಲ್ಲಿ ಶ್ರದ್ಧೆಯುಳ್ಳ ಸಾಧ್ವಿ ಶಿರೋಮಣಿ. ಭಾರತೀಯ ದಾಂಪತ್ಯದ ತಿರುಳಾದ ಪ್ರೇಮಾನುರಾಗವುಳ್ಳವಳು. ಯಾವುದೇ ಸಂದರ್ಭದಲ್ಲೂ ಪತಿಯಿಂದ ದೂರವಿರಲು ಅವಳಿಗೆ ಇಷ್ಟವಾಗುವುದಿಲ್ಲ. ಪತಿಯ ಇಷ್ಟಕ್ಕೆ ಅಡಚಣೆಯಾಗಬಾರದೆಂದು ಪತಿಯಿಂದ ದೂರವಾಗಿರುವ ಪ್ರಯತ್ನದಲ್ಲಿ ಆಕೆ ಸೋತು ಹಿಂದಿರುಗುತ್ತಾಳೆ. ಸೂರ್ಯಮುಖಿಯ ಸದ್ಗುಣಗಳ ರಾಶಿಯಲ್ಲಿ ಸಾಸುವೆಯಷ್ಟು ಕಳಂಕ ಹುಡುಕುವುದು ಕಷ್ಟವಾಗಬಹುದು. ಸ್ತ್ರೀ ಸಹಜವಾದ ಅಲ್ಪಮಾತ್ಸರ್ಯ ಆಕೆಯಲ್ಲಿ ಇದ್ದಿರಲೂಬಹುದು. ಕುಂದೆಯ ಪ್ರೇಮಪಾಶಕ್ಕೆ ಸಿಲುಕಿದ ನಗೇಂದ್ರ ಕಲ್ಕತ್ತೆಯಲ್ಲಿ ಉಳಿದನೆಂದು ಭ್ರಮಿಸಿ ಕುಂದೆಯನ್ನು ತಾನು ನೋಡದೆಯೂ ಆಕೆಯ ಬಗ್ಗೆ ಮಾತ್ಸರ್ಯ ಪಡುವುದು ಅಂತಹ ಕಳಂಕವೆನಿಸುವುದಿಲ್ಲ. ತನ್ನ ಪತಿ ಕುಂದೆಯ ಪಾಲಾದೆನೆಂಬ ಈರ್ಷೆ – ಹತಾಶೆಯಾಗಿ ಮಾರ್ಪಟ್ಟಾಗ ವಿಶಾಲಹೃದಯ ಹೊಂದಿ ಕುಂದೆಯನ್ನು ನಗೇಂದ್ರನಿಗೆ ತಂದುಕೊಂಡು ವಿವಾಹ ಮಾಡಿಸುತ್ತಾಳೆ. ವಿಧವೆಯಾದ ಕುಂದೆಯ ವಿವಾಹದ ಸಂದರ್ಭದಲ್ಲಿ ಆರ್ಯಸಮಾಜದ ತತ್ವಾದರ್ಶಗಳು ಪ್ರಕಟವಾಗುತ್ತವೆ. ನಗೇಂದ್ರ ಕುಂದೆಯನ್ನು ಮದುವೆಯಾಗಲು ಸೂರ್ಯಮುಖಿಗೆ ಸಂತಾನವಿಲ್ಲದಿರುವುದು ಒಂದು ಕಾರಣವಾಗುತ್ತದೆ.

### ೪.೩. ವಿಷವೃಕ್ಷವನ್ನು ನಿರಾಕರಣ ಮಾಡಿದವರು

ವಿಷವೃಕ್ಷವನ್ನು ಮನದಂಗಳದಲ್ಲಿ ಬೆಳೆಯಲು ಅವಕಾಶ ಕೊಡದವರೆಂದರೆ ಕಮಲಮಣಿ ಮತ್ತು ಶ್ರೀಶ ದಂಪತಿಗಳು. ಬಂಕಿಮಚಂದ್ರರು ಕಮಲಮಣಿಯ ಪಾತ್ರವನ್ನು ಭಾರತೀಯ ಸಂಸ್ಕೃತಿಯ ಆವರಣದಲ್ಲಿರಿಸಿಕೊಂಡು ಸ್ತ್ರೀ ಪಾತ್ರಗಳನ್ನು ವಿಶ್ಲೇಷಿಸಿದಂತೆ ಕಾಣುತ್ತದೆ. ಕಮಲಮಣಿ ಬಂಕಿಮಚಂದ್ರರು ಸೃಷ್ಟಿಸಿದ ಉದಾತ್ತ ಪಾತ್ರ. ಭಾರತೀಯ ಪುರಾಣಗಳಲ್ಲಿ ಬರುವ ಸೀತೆ, ಸಾವಿತ್ರಿ, ಅನಸೂಯೆ ಇತ್ಯಾದಿ ಆದರ್ಶ ಸತಿಯರ ದಾಂಪತ್ಯ ಸೂತ್ರಕ್ಕೆ ಹೊಂದಿಕೊಳ್ಳಬಹುದಾದ ಪಾತ್ರವಿದು. ಕಮಲಮಣಿ ನಗೇಂದ್ರನ ಸೋದರಿ, ಆಕೆಗೆ ತನ್ನ ಅಣ್ಣ ನಗೇಂದ್ರನ ಜೊತೆಯಲ್ಲಿಯೇ ಶಿಕ್ಷಣ ದೊರೆತಿತ್ತು.

ಸಾಮಾನ್ಯವಾಗಿ ತಾರುಣ್ಯದಲ್ಲಿ ಸ್ತ್ರೀ–ಪುರುಷರ ನಡುವೆ ಹುಟ್ಟುವ ಆಕರ್ಷಣೆಯ ಮನಃಸ್ಥಿತಿಯನ್ನು 'ಪ್ರಣಯ'ವೆಂದು ಕಾದಂಬರಿಯಲ್ಲಿ ಹೇಳುತ್ತಾ ಬರಲಾಗಿದೆ. 'ಪ್ರಣಯ' ಒಟ್ಟರ್ಥದಲ್ಲಿ ಸ್ತ್ರೀ–ಪುರುಷರ ನಡುವಿನ ಲೈಂಗಿಕ ಸ್ವಾದದ ಮನಃಸ್ಥಿತಿಯಾಗಿದ್ದರೂ, ಅದನ್ನು ಬಂಕಿಮರು 'ಪ್ರೀತಿ'ಯೆಂಬ ಉದಾತ್ತ ಮನೋಭಾವವನ್ನು ಪ್ರಣಯ ಮತ್ತು ಮೋಹಗಳಿಂದ ಬೇರ್ಪಡಿಸುತ್ತಾರೆ. 'ಪ್ರೀತಿ'ಗೆ ಕಮಲಮಣಿ – ಶ್ರೀಶರ ಸಂಸಾರವನ್ನು ಹೋಲಿಸಿದರೆ, ಪ್ರಣಯಕ್ಕೆ ಕುಂದೆ ಮತ್ತು ನಾಗೇಂದ್ರರ ಪ್ರೇಮವನ್ನು ಹೋಲಿಸುತ್ತಾರೆ. ಇನ್ನು ಮೋಹಕ್ಕೆ ಹೀರೆ ಹಾಗೂ ದೇವೇಂದ್ರರ ನಡುವಣ ಆಕರ್ಷಣೆಯನ್ನು ಉದಾಹರಿಸುತ್ತಾರೆ. ದಾಂಪತ್ಯದಲ್ಲಿ ಸತಿ–ಪತಿಯರ ನಡುವೆ ಪರಸ್ಪರ 'ತ್ಯಾಗ' ಭಾವದ ಬದುಕು ಕಂಡರೆ ಅದನ್ನು ಪ್ರೀತಿಯೆಂದು ಕರೆಯುತ್ತಾರೆ. ಹಸಿದು ಅನ್ನವುಣ್ಣುವವನ ಸ್ಥಿತಿಗೆ ಪ್ರಣಯ – ಮೋಹ ಎನ್ನುವ ಅಂಕಿತದಲ್ಲಿ ನೋಡಬಹುದಾಗಿದೆ. ಕಾಮವೆನ್ನುವುದು ಒಂದು ಹಸಿವು. ಉಂಡಲ್ಲದೆ ಹಸಿವು ತೀರದೆಂಬ ಉಕ್ತಿಗೆ ಭೋಗಾಸಕ್ತಿ ಸಮವಾಗಿ ಬಿಡುತ್ತದೆ.

ರೂಪವೇ ಸ್ತ್ರೀ ಪುರುಷರ ನಡುವಿನ–ಮೋಹ–ವ್ಯಾಮೋಹಗಳ ಆಕರ್ಷಣೆಗೆ ಕಾರಣವಾಗಿದೆ. ಮೋಹ–ವ್ಯಾಮೋಹ–ಪ್ರಣಯಾಸಕ್ತಿಗಳು ಮೂಡಿದಾಗ ಯಾರಿಗೂ ಅದು ಏನೆಂದು ಅರ್ಥವಾಗುವುದಿಲ್ಲ. ಯಾವುದು ಪ್ರೀತಿ, ಯಾವುದು ಪ್ರೇಮ, ಯಾವುದು ಮೋಹ–ಮತ್ತ್ಯಾವುದು ಪ್ರಣಯ ಇವುಗಳನ್ನು ಅರ್ಥೈಸಿಕೊಳ್ಳುವುದು ಸುಲಭ ಸಾಧ್ಯವಲ್ಲ. ಎ.ಆರ್.ಕೃಷ್ಣಶಾಸ್ತ್ರಿಗಳು ಈ ವಿಚಾರವನ್ನು ಹೇಳಿದ ಮೇಲೆ ಪ್ರೀತಿಯ ಬಗೆಯನ್ನು ಈ ರೀತಿ ವಿವರಿಸಿದ್ದಾರೆ.

"ನಿಜವಾದ ಪ್ರೀತಿಯೊಂದರಿಂದಲೇ ಮನುಷ್ಯನಿಗೆ ನಿರ್ಮಲವಾದ ಅವಿನಶ್ವರವಾದ ಸುಖ; ಪ್ರೀತಿಯೇ ಮನುಷ್ಯ ಜಾತಿಯ ಉನ್ನತಿಗೆ ಕಡೆಯ ಸಾಧನ ರೂಪವಾದದ್ದು. ಮನುಷ್ಯರು ಒಬ್ಬರನ್ನೊಬ್ಬರು ಪ್ರೀತಿಸಿದರೆ, ಮನುಷ್ಯಕೃತ ಅನಿಷ್ಟವು ಭೂಲೋಕದಲ್ಲಿರುವುದಿಲ್ಲ."[೩]

ಬಂಕಿಮಚಂದ್ರರು ಪ್ರೀತಿ ಹಾಗೂ ವ್ಯಾಮೋಹಗಳ ವಿವರಣೆ ಎರಡು ಸ್ತ್ರೀ–ಪಾತ್ರಗಳನ್ನು ಸೃಷ್ಟಿಸಿಕೊಂಡಿದ್ದಾರೆ. ಸೂರ್ಯಮುಖಿಯನ್ನು ಪ್ರೀತಿಗೂ, ಕುಂದೆಯನ್ನು ವ್ಯಾಮೋಹಕ್ಕೂ ಉದಾಹರಿಸುತ್ತಾರೆ. ಈ ಸ್ತ್ರೀಯರ ನಡುವೆ ನಗೇಂದ್ರ ಪ್ರೀತಿ–ವ್ಯಾಮೋಹಗಳ ತಾಕಲಾಟಕ್ಕೆ ಸಿಲುಕಿ ಗೊಂದಲಗೊಳ್ಳುತ್ತಾನೆ. ಹೀರೆಯ ಬಗೆಗೆ ದೇವೇಂದ್ರನು ತಾಳುವ ಮನಃಸ್ಥಿತಿಯನ್ನು 'ಕಾಮ'ವೆನ್ನಬಹುದು.

### ೪.೪. ಕನ್ನಡ ಲೇಖಕರ ಮೇಲೆ ವಿಷವೃಕ್ಷ ಕಾದಂಬರಿಯ ಪ್ರಭಾವ

ರಾಷ್ಟ್ರಕವಿ ಕುವೆಂಪು ಅವರು ತಮ್ಮ ಮೇರು ಕಾದಂಬರಿ 'ಕಾನೂರು ಹೆಗ್ಗಡಿತಿ'ಯಲ್ಲಿ ಬಂಕಿಮಚಂದ್ರರ 'ವಿಷವೃಕ್ಷ' ಕಾದಂಬರಿಯ ಪ್ರಸ್ತಾಪವನ್ನು ಸಂದರ್ಭವೊಂದರಲ್ಲಿ ಮೊದಲಿಗೆ

೩. ಎ.ಆರ್.ಕೃಷ್ಣಶಾಸ್ತ್ರೀ, 'ಬಂಕಿಮಚಂದ್ರ', ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ, ೧೯೮೫, ಪು.೬೧.

ಉಲ್ಲೇಖ ಮಾಡಿದ್ದಾರೆ; ಸೀತೆ – ಹೂವಯ್ಯ ಎಂಬ ಅಧ್ಯಾಯದ ನೂರೈವತ್ತೆಂಟನೆಯ ಪುಟದಲ್ಲಿ ಈ ಪ್ರಸಂಗ ಬರುತ್ತದೆ.

"ಹೂವಯ್ಯ ಪ್ರಯತ್ನಪೂರ್ವಕವಾದ ಸರಸವಾಣಿಯಿಂದ ಸೀತೆ, ನೀನು ಯಾವಾಗಲೂ ಅತ್ತುದಿಲ್ಲವೆ?" ಎಂದು ಕೇಳಿದನು.

"ಅತ್ತಿದ್ದೆ."

"ಯಾವಾಗ?"

"ಯಾರಾದರೂ ಬೈದಾಗ, ಅವ್ವ ಹೊಡೆದಾಗ, ಬಿದ್ದು ನೋವಾದಾಗ" ಸೀತೆ ತನ್ನ ಮಾತಿಗೆ ತಾನೆ ಮುಗುಳು ನಗುತ್ತಿದ್ದಳು.

"ಮತ್ತೆ ಯಾವಾಗಲೂ ಕಣ್ಣೀರು ಸುರಿಸಿಲ್ಲವೇ?"

ಸೀತೆ ಅಪ್ರತಿಭಳಾಗಿ ಸ್ವಲ್ಪ ಹೊತ್ತು ಸುಮ್ಮನಿದ್ದಳು.

"ಅತ್ತೆಮ್ಮ ನಿನ್ನ ಬಿಟ್ಟು ನೆಂಟರ ಮನೆಗೆ ಹೋದಾಗ?"

"ಹೌದು, ಅತ್ತಿದ್ದೆ!"

"ಕಥೆ ಕೇಳುತ್ತಿದ್ದಾಗ ಅಥವಾ ಓದುತ್ತಿದ್ದಾಗ ಯಾವಾಗಲಾದರೂ ಅತ್ತಿದ್ದೀಯೇನು?"

ಸೀತೆ ಆಲೋಚಿಸಿದಳು. ಕಾದಂಬರಿಗಳನ್ನು ಓದುತ್ತಿದ್ದಾಗ ಗುಟ್ಟಾಗಿ ಕಣ್ಣೀರು ಕರೆದಿದ್ದುದು ಅವಳ ನೆನಪಿಗೆ ಬಂದಿತು. ಹಿಂದೆ ಒಂದು ಸಾರಿ ಹೂವಯ್ಯನು ಕಾನೂರಿನಲ್ಲಿ ನಾಗಮ್ಮ, ಗೌರಮ್ಮ, ಸೀತೆ, ವಾಸು ಇವರಿಗೆ 'ವಿಷವೃಕ್ಷ'ವನ್ನು ಓದಿ ಹೇಳುತ್ತಿದ್ದಾಗ ಸೀತೆ ಅಳುವನ್ನು ತಡೆಯಲಾರದೆ ತಾಯಿಯ ಮರೆಯಲ್ಲಿ ಅವಿತು ಸೆರಗಿನಿಂದ ಕಣ್ಣೀರು ಒರಸಿಕೊಂಡಿದ್ದಳು."[೪]

ಕುವೆಂಪು ಅವರು ಪ್ರಕೃತಿಯ ಸಂಧ್ಯಾ ಸೌಂದರ್ಯವನ್ನು ನೋಡಿ ತಮ್ಮ ಸಹಜ ಕವಿಭಾವದಿಂದ ಭಾವಸಮಾಧಿಗೆ ಹೋಗಿ ಕಂಬನಿಗರೆಯುತ್ತಿದ್ದುದರ ಪ್ರಸಂಗ ಪ್ರಸ್ತಾಪಕ್ಕೆ ಮುಂಚೆಯೇ ಕಾನೂರಿನಲ್ಲಿ ಮನೆಯ ಸದಸ್ಯರ ಮುಂದೆ ಬಂಕಿಮಚಂದ್ರರ ಹೆಸರಾಂತ ಕಾದಂಬರಿ 'ವಿಷವೃಕ್ಷ'ವನ್ನು ಓದಿ ಹೇಳಿದ್ದರು.

ಸೀತೆ, ನಾಗಮ್ಮ – ಗೌರಮ್ಮ – ವಾಸು, ಇವರ ಜೊತೆ ಶ್ರೋತೃವಾಗಿ ಆಲಿಸಿ ಆಸ್ವಾದಿಸಿದ್ದು, ಕಾದಂಬರಿಯ ದುಃಖ ವಿದ್ರಾವಕ ಸಂದರ್ಭ ಬಂದಾಗ ಸೀತೆ ದುಃಖ ತಡೆಯಲಾರದೆ ತಾಯಿಯ ಸೆರಗಿನ ಮರೆಯಲ್ಲಿ ದುಃಖಿಸಿದ್ದನ್ನು ಸೀತೆ ಸ್ಮರಣೆಗೆ ತಂದುಕೊಳ್ಳುತ್ತಾಳೆ. ಕವಿ ಕುವೆಂಪು ಅವರು ಪ್ರೌಢಶಾಲೆಯುಲ್ಲಿ ಓದುತ್ತಿದ್ದ ಕಾಲಕ್ಕೆ ಬಿ.ವೆಂಕಟಾಚಾರ್ಯರು ಬಂಗಾಳಿಯಿಂದ

---

೪. ಕುವೆಂಪು, 'ಕಾನೂರು ಹೆಗ್ಗಡಿತಿ', ಉದಯರವಿ ಪ್ರಕಾಶನ, ೧೯೩೬, ಪು.೧೫೮

ಕೆಲವು ಕಾದಂಬರಿಗಳನ್ನು ಕನ್ನಡಕ್ಕೆ ಅನುವಾದ ಮಾಡಿದರು. ಈ ಅನುವಾದಿತ ಕಾದಂಬರಿಗಳನ್ನು ಓದುವ ಹವ್ಯಾಸ ಬೆಳೆಸಿಕೊಂಡಿದ್ದರು. ಸಾಮಾಜಿಕ-ಕೌಟುಂಬಿಕ-ವಿಷಯ ವಸ್ತುವುಳ್ಳ ಬಂಗಾಳೀ ಕಾದಂಬರಿಗಳು ನಮ್ಮ ಲೇಖಕರಿಗೆ ಕಾದಂಬರಿ ಬರೆಯಲು ಪ್ರೇರಣೆ ನೀಡಿದ್ದವು. ಕಾದಂಬರಿ ಪ್ರಕಾರ ಜನಪ್ರಿಯತೆ ಗಳಿಸುವತ್ತ ಅಂಬೆಗಾಲು ಇಡುತ್ತಿದ್ದ ಸಂದರ್ಭದಲ್ಲಿ ರಾಷ್ಟ್ರಕವಿ ಕುವೆಂಪು ಅವರು ಬಂಕಿಮಚಂದ್ರರ 'ವಿಷವೃಕ್ಷ' ಕಾದಂಬರಿಯನ್ನು ಓದಿ ಅದರ ಪ್ರಸ್ತಾಪವನ್ನು 'ಕಾನೂರು ಹೆಗ್ಗಡತಿ' ಕಾದಂಬರಿಯಲ್ಲಿ ತರುತ್ತಾರೆ. 'ವಿಷವೃಕ್ಷ' ಕಾದಂಬರಿಯ ಕುಂದನಂದಿನಿಯ ಬವಣೆ, ಸೂರ್ಯಮುಖಿಯ ಪತಿನಿಷ್ಠೆ ಇವೆರಡರಲ್ಲಿ ಯಾವುದೋ ಒಂದು ಪಾತ್ರದ ಶೋಕದ ಸಂದರ್ಭ 'ಕಾನೂರು ಹೆಗ್ಗಡಿತಿ'ಯಲ್ಲಿ ಬರುವ ಮುಗ್ಧಳಾದ 'ಸೀತೆ'ಯ ಕಂಬನಿಗೆ ಕಾರಣವಾಗಿರಬಹುದು. ಸ್ವಭಾವತಃ ಭಾವಜೀವಿಯಾದ ಕುವೆಂಪು 'ವಿಷವೃಕ್ಷ'ವನ್ನು ಓದುವಾಗ ಭಾವತೀವ್ರತೆಯಿಂದ ಕಂಬನಿಗರೆದಿದ್ದರೆಂದು ಕಾಣುತ್ತದೆ. ಈ ಸ್ಮರಣೆಯನ್ನು ತಮ್ಮ ಕಾದಂಬರಿಯ ಅಧ್ಯಾಯದಲ್ಲಿ ದಾಖಲಿಸಿದ್ದಾರೆ. ಹೀಗೆ ಕನ್ನಡದ ಮಹಾಕವಿ ಕುವೆಂಪು ಅವರ ಮೇಲೆ 'ವಿಷವೃಕ್ಷ' ಕಾದಂಬರಿಯು ಪ್ರಭಾವಿಸಿರುವುದನ್ನು ಕಾಣಬಹುದಾಗಿದೆ.



### ೪.೫. ಬಹುಪತ್ನಿತ್ವ ನಿರಾಕರಣ

ಬಂಕಿಮಚಂದ್ರರು ಭಾರತೀಯ ಕುಟುಂಬವ್ಯವಸ್ಥೆಯಲ್ಲಿ ಬಳಕೆಯಲ್ಲಿದ್ದ ಬಹುಪತ್ನಿತ್ವವನ್ನು ಪರೋಕ್ಷವಾಗಿ ನಿರಾಕರಣ ಮಾಡಿದ್ದಾರೆ. ನಗೇಂದ್ರನು ಸೂರ್ಯಮುಖಿಯಂತಹ ಸತಿಯಿದ್ದರೂ, ಆದರ್ಶ, ಅನುಕಂಪೆ ಇತ್ಯಾದಿ ಸೋಗುಗಳನ್ನು ಹಾಕಿ ಕುಂದೆಯನ್ನು ವಿವಾಹವಾಗುವುದನ್ನು ನಿರಾಕರಣದ ಮನಃಸ್ಥಿತಿಯಿಂದಲೇ ವರ್ಣಿಸಿದ್ದಾರೆ. ಬಹುಪತ್ನಿತ್ವದಿಂದ ಉಂಟಾಗುವ ಅನರ್ಥಗಳನ್ನು ಘಟನಾವಳಿಗಳ ಮೂಲಕವೇ ವರ್ಣಿಸುತ್ತಾ ಹೋಗುತ್ತಾರೆ. ಕಾದಂಬರಿಯ ಮತ್ತೊಂದು ಮುಖವಾದ ದೇವೇಂದ್ರ ಮತ್ತು ಹೀರೆಯರ ಸಂಗತಿಗಳನ್ನು ನಗೇಂದ್ರ ಮತ್ತು ಸೂರ್ಯಮುಖಿಯರ ಸಾಂಸಾರಿಕ ಬದುಕಿಗೆ ತೌಲನಿಕವಾಗಿ ಎದುರುಗೊಳಿಸುತ್ತಾರೆ. ದೇವೇಂದ್ರ ಮತ್ತು ನಗೇಂದ್ರರಿಗೆ ಅಷ್ಟೇನೂ ವ್ಯತ್ಯಾಸವಿಲ್ಲದಂತಹ ಹೋಲಿಕೆಗಳಿವೆ. ನಗೇಂದ್ರ ಸಾಧ್ವಿ ಪತ್ನಿಯನ್ನು ಪಡೆದ ಸೌಭಾಗ್ಯಶಾಲಿಯೆಂದರೆ, ಪತ್ನಿಯೆಂಬ ಅರ್ಥಕ್ಕೆ ವಿರುದ್ಧವಾದ ಗುಣಸ್ವಭಾವದ ಹೆಂಡತಿ ದೊರಕಿರುತ್ತಾಳೆ ದೇವೇಂದ್ರನಿಗೆ. ಸೂರ್ಯಮುಖಿಯಂತಹ ಆದರ್ಶ ಪತ್ನಿ ಲಭ್ಯವಾಗಿದ್ದರೆ ದೇವೇಂದ್ರನ ಬದುಕಿನ ಮೌಲ್ಯಗಳೇ ಬದಲಾಗುತ್ತಿದ್ದವು.

ಒಂದಾನೊಂದು ಕಾಲದಲ್ಲಿ ಬಹುಪತ್ನಿತ್ವ ಸಿರಿವಂತರ ಪ್ರತಿಷ್ಠೆಯ ಸಂಗತಿಯಾಗಿತ್ತು. ಈಗ ಅಂತಹ ಸಂದರ್ಭವಿಲ್ಲ. ಮಾನವನ ಬದುಕು ಈ ನೆಲದ ಮೇಲೆ ಸುಖದಿಂದ ಇರಬೇಕಾದರೆ ಧರ್ಮ ನಿರಪೇಕ್ಷವಾದ ಯಾವುದಾದರೊಂದು ಮಾರ್ಗವಿರಲೇಬೇಕೆಂಬ ಚಿಂತನೆ ಬಂಕಿಮಚಂದ್ರರಲ್ಲಿ ಕಂಡು ಬರುತ್ತದೆನ್ನಬಹುದು. ಬಂಕಿಮಚಂದ್ರರು ಐಹಿಕ ಬದುಕಿನ ಸಮಸ್ಯೆಗಳತ್ತ ಆಲೋಚನಾ ಪರತೆಯಿಂದ ಕಾದಂಬರಿಗಳನ್ನು ರಚಿಸಿದಂತೆ ಕಾಣುತ್ತದೆ. ಸ್ವಾರ್ಥರಹಿತವಾದ

'ಪ್ರೀತಿ' ಅವರೆಲ್ಲ ಕಾದಂಬರಿಗಳಲ್ಲಿ ಚರ್ಚಿತವಾಗಿದೆ. ಮನುಷ್ಯ ಈ ಭೂಲೋಕಕ್ಕೆ ಸೇರಿದವನು, ಈ ಭೂಮಿಯಲ್ಲಿ ಜೀವಿಸಲು ಅರ್ಹನಾದವನು ಎಂಬ ಆಶಯದಿಂದ ಕಾದಂಬರಿಗಳ ಪಾತ್ರಗಳನ್ನು ಹಾಗೂ ವಸ್ತುವನ್ನು ಬಳಕೆ ಮಾಡಿಕೊಂಡಿದ್ದಾರೆ. ಮಾನವನು ಸ್ವಭಾವತಃ ಪ್ರಾಣಿಯಾದ್ದರಿಂದ ಕೂಡು ಬದುಕಿನಲ್ಲಿ ತಾನು ಮೇಲಾಗಬೇಕೆಂಬ ಗರ್ವಕ್ಕೆ ಗುರಿಯಾಗಿ ಬಿಡುತ್ತಾನೆ. ಈ ಸ್ವಾರ್ಥ ಗರ್ವವನ್ನು ತಹಬಂದಿಗೆ ತಾರದಿದ್ದರೆ ಬದುಕು ದುಸ್ಸರವಾಗಿ ಬಿಡುತ್ತದೆ. ಸ್ವಾರ್ಥ ಗರ್ವಕ್ಕೆ ಪರಿಣಾಮಕಾರೀ ಪರಿಹಾರವೆಂದರೆ 'ತ್ಯಾಗ' ಮಯವಾದ ಪ್ರೀತಿ. ಪ್ರೀತಿಯೆಂಬ ಮಧುರಭಾವಕ್ಕೆ ಇರುವಷ್ಟು ಶಕ್ತಿ – ದ್ವೇಷಕ್ಕಿರುವುದಿಲ್ಲ. ದ್ವೇಷದಿಂದ ವೈರಿಗಳೆನಿಸಿದ ಕೆಲವರನ್ನು ಮಾತ್ರವೇ ಗೆಲ್ಲಬಹುದು, ಆದರೆ ಪ್ರೀತಿಯೆಂಬ ಮಧುರಭಾವದಿಂದ ಮನುಕುಲವಂತಿರಲಿ ಜೀವಜಗತ್ತನ್ನೇ ಗೆಲ್ಲಬಹುದು.

ಬಂಕಿಮಚಂದ್ರರು ವಿಷವೃಕ್ಷ ಕಾದಂಬರಿಯಲ್ಲಿ ಬಳಸಿಕೊಂಡಿರುವ ಪಾತ್ರಗಳು ಆಯಾ ಪಾತ್ರಗಳ ಹೆಸರಿಗೆ ತಕ್ಕಂತಹ ಗುಣಸ್ವಭಾವಗಳನ್ನು ಹೊಂದಿವೆ. 'ನಗೇಂದ್ರ' ಎಂದರೆ ಪರ್ವತರಾಜ, ಅಚಲಗುಣ ಸ್ವಭಾವದವನು. 'ದೇವೇಂದ್ರ' ಗುಣದಲ್ಲಿ ಸುರರ ಪ್ರಮುಖನಂತೆ ಸ್ತ್ರೀಲೋಲುಪ, ನಡತೆ ಶುದ್ಧವಿಲ್ಲದವನು. ಹೀರೆ ಎಂದರೆ ವಜ್ರ. ಕಠಿಣವಾದವಳು ಮತ್ತು ಪ್ರಾಣವನ್ನು ತೆಗೆಯುವವಳೂ ಹೌದು. ಕಮಲಮಣಿ ಎಂದರೆ ಲಕ್ಷ್ಮೀ, ರೂಪದಲ್ಲಿ ಗುಣದಲ್ಲಿ ಲಕ್ಷ್ಮೀಯೇ ಹೌದು. ಶ್ರೀಶ ಎಂದರೆ ಲಕ್ಷ್ಮಿಯ ಪತಿ. ಸೂರ್ಯಮುಖಿ ಎಂದರೆ ಸದಾ ನಗುಮುಖದಲ್ಲಿರುವವಳು. ಹೀಗೆ ಬಂಕಿಮರು ಗುಣಸ್ವಭಾವಗಳಿಗೆ ತಕ್ಕಂತಹ ಹೆಸರನ್ನು ಪಾತ್ರಗಳಿಗೆ ನೀಡಿದ್ದಾರೆ.

ಅಧ್ಯಾಯ – ಐದು

# ರವೀಂದ್ರನಾಥ ಠಾಕೂರರ ಬಹುಮುಖ ವ್ಯಕ್ತಿತ್ವ

೫.೧. ಪೀಠಿಕೆ

೫.೨. ರವೀಂದ್ರನಾಥ ಠಾಕೂರರ ಬಾಲ್ಯ ಜೀವನ

೫.೩. ರವೀಂದ್ರನಾಥ ಠಾಕೂರರ ಸಾಮಾಜಿಕ ಹೋರಾಟ

೫.೪. ರವೀಂದ್ರನಾಥ ಠಾಕೂರರ ವ್ಯಕ್ತಿತ್ವ

೫.೫. ರವೀಂದ್ರನಾಥ ಠಾಕೂರರ ಬಹುಮುಖ ಪ್ರತಿಭೆ

೫.೬. ಪಾಶ್ಚಾತ್ಯ ಶಿಕ್ಷಣದ ಸಂಪರ್ಕ ಮತ್ತು ವೈಚಾರಿಕತೆ

೫.೭. ಸಾಮಾಜಿಕ ಹೋರಾಟ

೫.೮. ಕನ್ನಡದಲ್ಲಿ ರವೀಂದ್ರ ಸಾಹಿತ್ಯದ ಔಚಿತ್ಯ ಮತ್ತು ಕರ್ನಾಟಕದ ಒಡನಾಟ

ಅಧ್ಯಾಯ - ಐದು

# ರವೀಂದ್ರನಾಥ ಠಾಕೂರರ ಬಹುಮುಖ ವ್ಯಕ್ತಿತ್ವ

## ೫.೧. ಪೀಠಿಕೆ

ರವೀಂದ್ರನಾಥ ಠಾಕೂರರ (೧೮೬೧-೧೯೪೧) ಬದುಕು ಅಗಾಧವಾದದ್ದು. ಅವರ ಜೀವನ ಒಂದು ಅನಂತಯಾತ್ರೆ, ವಿಶ್ವಮಾನವರಾಗಿ, ಸಾಹಿತಿಯಾಗಿ, ಶಿಕ್ಷಣತಜ್ಞರಾಗಿ, ಯೋಗಿಯಾಗಿ, ತತ್ತ್ವಜ್ಞಾನಿಯಾಗಿ, ಕಲಾವಿದರಾಗಿ, ಅರ್ಥಪೂರ್ಣ ಬದುಕನ್ನು ತುಂಬಿಸಿದವರು.

ಘನತೆವೆತ್ತ ಪ್ರತಿಭಾವಂಥರ ಹಿರಿಯ ಮನೆತನವಾಗಿದ್ದ ರವೀಂದ್ರನಾಥ ಠಾಕೂರರ ಕೌಟುಂಬಿಕ ಪರಿಸರ, ಸಮಕಾಲೀನ ಸಂಕ್ರಮಣಾವಸ್ಥೆಯ ಸಂದರ್ಭ, ವಿಶಿಷ್ಟ ಸಾಂಸ್ಕೃತಿಕ ಹಿನ್ನೆಲೆ ಹಾಗೂ ಕ್ರಾಂತಿಕಾರರ ಬೀಡಾದ ಬಂಗಾಳ ರವೀಂದ್ರನಾಥ ಠಾಕೂರರ ಜನ್ಮಭೂಮಿ. ಈ ಎಲ್ಲಾ ಪ್ರಭಾವ ಪ್ರೇರಣೆಯ ಹಿನ್ನೆಲೆಯಲ್ಲಿ ರವೀಂದ್ರನಾಥ ಠಾಕೂರರ ವ್ಯಕ್ತಿತ್ವ ರೂಪಿತವಾಯಿತು. ಹಾ.ಮಾ.ನಾಯಕರು ಹೇಳುವಂತೆ "ತುಂಬಿದ ಮನೆ, ತುಂಬಿದ ಗೆಲುವು, ರವೀಂದ್ರರ ಬದುಕನ್ನು ತುಂಬಿದವು".[೧] ಅವರ ಬದುಕು ಇಂದಿಗೂ ಅಕ್ಷಯಗಣಿಯಾಗಿ ಉಪಯುಕ್ತವಾಗಿದೆ. ಮಾಸ್ತಿ ಅವರ ಮಾತುಗಳಲ್ಲಿ ಹೇಳುವುದಾದರೆ, "ರವೀಂದ್ರನಾಥರು ನವೀನ ಕಾಲದ ಯುಗಪುರುಷ".[೨] ರವೀಂದ್ರರರು ಜ್ಞಾನ-ಪ್ರೇಮ-ದುಡಿಮೆಯನ್ನು ತಮ್ಮ ಬದುಕಿನಲ್ಲಿ ತುಂಬಿಕೊಂಡರು. ಗ್ರೀಸ್ ಕವಿ ಸೊಫೊಕ್ಲಿಸ್‌ನನ್ನು ಕುರಿತು ಆಂಗ್ಲ ವಿಮರ್ಶಕನೊಬ್ಬನ, "ಆತನು ಜೀವನವನ್ನು ಸುಸ್ಥಿರವಾಗಿಯೂ-ಸಮಗ್ರವಾಗಿಯೂ ಕಂಡನು"[೩] ಎಂಬ ಮಾತು ರವೀಂದ್ರರಿಗೆ ಹೆಚ್ಚು ಅರ್ಥಪೂರ್ಣವಾಗಿ ಒಪ್ಪುತ್ತದೆ. ಎಂಬತ್ತು ವರ್ಷಗಳ ಅವರ ತುಂಬಿದ ಜೀವನ ಮೌಲ್ಯಗಳಿಗೆ, ಸಾಧನೆಗೆ, ಸೃಜನೆಗೆ, ಭಾರತೀಯತೆಗೆ ಮಾದರಿಯಾಗಿದೆ.

## ೫.೨. ರವೀಂದ್ರನಾಥ ಠಾಕೂರರ ಬಾಲ್ಯ ಜೀವನ

ಬಂಗಾಳದ ಇತಿಹಾಸದಲ್ಲಿ ರವೀಂದ್ರನಾಥರ 'ಠಾಕೂರ್' ಮನೆತನ ಸುದೀರ್ಘ ಪರಂಪರೆಯನ್ನು ಹೊಂದಿದೆ. ಈ ಮನೆತನಕ್ಕೆ ಮೊದಲು 'ಕುಸರಿ' ಅಥವಾ 'ಕುಶಾರಿ' ಮನೆತನವೆಂದು

೧. ರವೀಂದ್ರನಾಥ ಠಾಕೂರ್, ಹಾ.ಮಾ. ನಾಯಕ, ಪು. ೭೩
೨. ರವೀಂದ್ರನಾಥ ಠಾಕೂರ್, ಮಾಸ್ತಿ (ಪ್ರಸ್ತಾವನೆಯಲ್ಲಿ), ಪು. ೧
೩. ರವೀಂದ್ರನಾಥ ಠಾಕೂರ್, ಅನು : ಸುಬ್ರಾಯ ಭಟ್, ಪು. ೬೧

ಹೆಸರಿತ್ತಂತೆ."[೪] ಇವರು ಮೂಲತಃ ಬಂಗಾಳದ ಶಾಂಡಿಲ್ಯಗೋತ್ರದ ಬ್ರಾಹ್ಮಣರಲ್ಲಿ 'ರಾಢ್ರಿ' ಉಪಪಂಗಡಕ್ಕೆ ಸೇರಿದವರು. ಮುಸಲ್ಮಾನರ ಆಕ್ರಮಣಕ್ಕೆ ಬಂಗಾಳದ ಸಾಂಸ್ಕೃತಿಕ ಬದುಕು ಗುರಿಯಾಗಿತ್ತು. ಇವರ ಬ್ರಾಹ್ಮಣಕುಲ ಅಂದಿನ ಮುಸ್ಲಿಂ ರಾಜಮನೆತನದಲ್ಲಿ ಅಧಿಕಾರಶಾಹಿವರ್ಗವಾಗಿದ್ದ 'ಪಿರಾಲಿ' ಮುಸ್ಲಿಂರೊಡನೆ ರಕ್ತಸಂಬಂಧ ಬೆಳೆದು ಜಾತಿಸಂಕರಕ್ಕೆ ಒಳಗಾಯಿತು. ಈ ಜಾತಿಭ್ರಷ್ಟತೆಯ ಕಳಂಕವನ್ನು ತೊಡೆದುಹಾಕಲು ಈ ಪಿರಾಲಿ ಬ್ರಾಹ್ಮಣರನ್ನು ಉಖದೇವ ಅವರು ಕಲ್ಕತ್ತೆಗೆ ಕರೆತಂದು ಬೆಸ್ತರೋಣಿಯಲ್ಲಿ ನೆಲೆಸುವಂತೆ ಮಾಡಿದನು. ಇವರು ಇಂಗ್ಲಿಷರ ಒಡನಾಟದಿಂದ ಅಪಾರ ಭೂಮಿ, ವಿದ್ಯೆ, ಅಧಿಕಾರ, ಅಂತಸ್ತು ಹಾಗೂ ಸಾಮಾಜಿಕವಾಗಿ ಸ್ಥಾನಮಾನ ಪಡೆದರು.

ಪಂಚಾನನ ಬಾಬುಗಳೇ ಠಾಕೂರ್ ಮನೆತನದ ಮೊದಲ ವ್ಯಕ್ತಿ. ೧೬೯೦ರಲ್ಲಿ ಕಲ್ಕತ್ತೆಗೆ ಇವರು ಬಂದು 'ಜೆಸ್ಸೂರ' ಎಂಬಲ್ಲಿ ನೆಲೆಸಿದರು. ವರ್ತಕರಾಗಿ ಶ್ರೀಮಂತರಾಗಿದ್ದವರು, ಗುಣದಲ್ಲಿ ಸೌಮ್ಯಶೀಲ ಸಾಧುವಾಗಿದ್ದರು. ಜನರು ಇವರನ್ನು 'ಠಾಕೂರ್ ಮಹಾಶಯ' ಎಂದು ಗೌರವಿಸುತ್ತಿದ್ದರು. ರೂಢಿಗತವಾಗಿ ಇವರ ಮನೆತನಕ್ಕೆ 'ಠಾಕೂರ್'[೫] (ಪೂಜಯ) ಎಂಬುದು ಹೆಸರಾಯ್ತು. ಈ ಮನೆತನದ ರವೀಂದ್ರರ ಅಜ್ಜ ದ್ವಾರಕನಾಥ ಠಾಕೂರರು (೧೭೯೪–೧೮೪೬); ರಾಜಾರಾಮ ಮೋಹನರಾಯರ ಪರಮ ಮಿತ್ರರಾಗಿದ್ದವರು. ದೊಡ್ಡ ಜಮೀನ್ದಾರರು, ಪ್ರಭಾವಿ ರಾಜಕಾರಣಿಯಾಗಿದ್ದ ಇವರು ಅಂದಿನ ಧಾರ್ಮಿಕ ಮುಖಂಡರೂ ಆಗಿದ್ದರು. ಇಂಗ್ಲೆಂಡಿನ ಮಹಾರಾಣಿ ಇವರನ್ನು ಆಮಂತ್ರಿಸಿ 'ರಾಜಕುಮಾರ' (The Prince) ಎಂಬ ಬಿರುದಿತ್ತು ಗೌರವಿಸಿದ್ದಳು. ಇಷ್ಟು ಕೀರ್ತಿವಂತರಾದ ಇವರ ನಿವಾಸದ ಕಲ್ಕತ್ತೆಯ ಬೀದಿಯನ್ನು ದ್ವಾರಕನಾಥ ಠಾಕೂರ್ ಓಣಿ' ಎಂದು ಇವರು ಹೆಸರಿಟ್ಟು ಕರೆವುದು ರೂಢಿ. ಹಿಂದೂ ಕಾಲೇಜು, ಮೆಡಿಕಲ್ ಕಾಲೇಜು, 'ಬ್ಯಾಂಕು'ಗಳನ್ನು ತೆರೆದು, ಸ್ವಂತ ಬಂಡವಾಳದಿಂದ ನಡೆಸಿದರು. ಕೊನೆಗೆ ಸಾಲಗಾರರೂ ಆದರು. ಮಗ ದೇವೇಂದ್ರನಾಥರು ತಂದೆ ಮಾಡಿದ ಸಾಲವನ್ನು ತೀರಿಸಿದರು. ಈ ದೇವೇಂದ್ರನಾಥರೇ ರವೀಂದ್ರನಾಥರ ತಂದೆ. ಆಧ್ಯಾತ್ಮಿಕ ಯೋಗಿಯಾಗಿದ್ದ ಇವರು 'ಮಹರ್ಷಿ' ಎನಿಸಿದ್ದರು. ತಾತ ಲೌಕಿಕ ರಾಜವೈಭೋಗಿಯಾದರೆ, ತಂದೆ ತಾಪಸಿಕ ಯೋಗಿಯಾಗಿದ್ದರು. ವೇದ ಉಪನಿಷತ್ತುಗಳನ್ನು ಆಳವಾಗಿ ಅಧ್ಯಯನ ಮಾಡಿದ್ದರು. ರಾಜರಾಮ ಮೋಹನರಾಯರ ಒಡನಾಡಿಯಾಗಿ ಅವರ ಪ್ರಭಾವಕ್ಕೆ ಒಳಗಾಗಿದ್ದರು. ಆನಂತರದಲ್ಲಿ ರಾಯರು ಸ್ಥಾಪಿಸಿದ 'ಬ್ರಹ್ಮಸಮಾಜ' ಧಾರ್ಮಿಕ ಸಂಸ್ಥೆಯ ನೇತಾರರಾಗಿ ಮುನ್ನಡೆಸಿದರು.

ದೇವೇಂದ್ರನಾಥರಿಗೆ ಜನಿಸಿದ ೧೫ ಮಕ್ಕಳಲ್ಲಿ ಹದಿನಾಲ್ಕನೆಯವರೇ ರವೀಂದ್ರನಾಥರು. ೧೮೬೧ರ ಮೇ 7ರಂದು ಇವರು ಜನಿಸಿದರು.

ಅಂದಿನ ಶ್ರೀಮಂತ ಕುಂಟುಂಬಗಳಿಗೆ ಸಹಜವಾದಂತೆ ಮಕ್ಕಳ ಜವಾಬ್ದಾರಿ ಮನೆಯ ಆಳುಗಳ ಉಸ್ತುವಾರಿಯಲ್ಲಿತ್ತು; ಅಂತೆಯೇ ರವೀಂದ್ರನಾಥರೂ ಈ ತೆರನಾದ ನೌಕರರ ಹಿಡಿತದಲ್ಲಿ

---

೪. 'ಬಂಧೋಪಾಧ್ಯಾಯ', ಮನೆತನದವರೆಂಬ ವಾದವೂ ಇದೆ.
೫. ಕನ್ನಡದ ಸಂದರ್ಭದಲ್ಲಿ ಟಾಗೋರ್, ಠಾಕೂರ್ ಇತ್ಯಾದಿಯಾಗಿ ಬಳಕೆಯಲ್ಲಿದೆ.

ಬೆಳೆದು ಬಂದ ಬಗೆಯನ್ನು ಅವರು ತಮ್ಮ 'ಜೀವನ ಸ್ಮೃತಿ'ಯಲ್ಲಿ ಉಲ್ಲೇಖಿಸಿದ್ದಾರೆ. ಕಟ್ಟಾಜ್ಞೆಯಲ್ಲಿ, ಬಂಧನದಲ್ಲಿ ರವೀಂದ್ರನಾಥರು ಬೆಳೆದರೂ ಅವರ ಕಲ್ಪನಾಶಕ್ತಿ ಸುತ್ತಲ ಪರಿಸರಲೋಕದತ್ತ ಕುತೂಹಲದಿಂದ ಸ್ಪಂದಿಸುತ್ತಿತ್ತು. ರವೀಂದ್ರನಾಥರೇ ಹೇಳುತ್ತಾರೆ: "ಆಗಿನ ಕಾಲದಲ್ಲಿ ಈ ಪ್ರಪಂಚ ಎಂಬ ವಸ್ತುವಿನ ರಸ ಅದೆಷ್ಟು ನಿಬಿಡವಾಗಿತ್ತು ಎಂಬ ಅಂಶವೇ ನೆನಪಾಗುತ್ತೆ, ನೆಲವೇನು, ನೀರೇನು, ಗಿಡಮರಗಳು ತಾನೆ ಏನು, ಆಕಾಶವೇನು ಎಲ್ಲವೂ ಆಗ ಮಾತನಾಡುತ್ತಿದ್ದವು"[೬] ಎಂದು ಹೇಳಿಕೊಂಡಿದ್ದಾರೆ.

ಬಾಲಕ ರವೀಂದ್ರನಾಥ ಠಾಕೂರರಿಗೆ ಮನೆಯಲ್ಲೇ ಅಕ್ಷರಭ್ಯಾಸ ಆರಂಭವಾಯಿತು. ರವೀಂದ್ರರಿಗೆ ಮನೆಪಾಠ ಹೇಳುತ್ತಿದ್ದ ಉಪಾಧ್ಯಾಯರೊಬ್ಬರು "ಪಾಠಶಾಲೆಗೆ ಹೋಗಲು ಅಳುತ್ತಿದ್ದೀಯೆ; ಮುಂದೆ ಅಲ್ಲಿಂದ ಬಿಡುಗಡೆಯಾದರೆ ಸಾಕೆಂದು ಅಳುತ್ತೀಯೆ"[೭] ಎಂದರಂತೆ. 'ಮನೆಯೇ ಮೊದಲ ಪಾಠಶಾಲೆ; ತಾಯಿಯೇ ಮೊದಲ ಗುರು' ಎಂಬ ನಾಣ್ಣುಡಿಯು ಪರಿಪೂರ್ಣವಾಗಿ ರವೀಂದ್ರನಾಥರಿಗೆ ಅನ್ವಯಿಸುತ್ತದೆ. ಏಕೆಂದರೆ ರವೀಂದ್ರನಾಥರ ಮನೆಯವರೆಲ್ಲರೂ ವಿದ್ಯಾವಂತರು, ಪಂಡಿತರು. ಮೇಧಾವಿಗಳೂ, ಪಂಡಿತರೂ ಬಂದು ಅವರ ಮನೆಯಲ್ಲಿ ಉಪನ್ಯಾಸ, ಚರ್ಚೆಯಲ್ಲಿ ತೊಡಗುತ್ತಿದ್ದರು. ಆದ್ದರಿಂದ ರವೀಂದ್ರನಾಥರು ಅವರು ಶಾಲೆಗಿಂತ ಮನೆಯಲ್ಲೇ ಕಲಿತದ್ದು ಹೆಚ್ಚು.

ರವೀಂದ್ರನಾಥರು 1869ರಲ್ಲಿ "ಓರಿಯಂಟಲ್ ಸೆಮಿನರಿ' ಶಾಲೆ ಸೇರಿದರು. ಗುರುಗಳ ಭವಿಷ್ಯವಾಣಿಯಂತೆಯೇ ಶಾಲೆ ಅವರಂದುಕೊಂಡ ಶಾಲೆಯಂತಿರದೆ ಕಾರಾಗೃಹದಂತೆ ಬಂಧನವೆನಿಸಿತು. ಅಲ್ಲಿಯ ಕೃತಕವಾದ ಕಟ್ಟುನಿಟ್ಟಿನ ನಿಯಮಗಳು, ಇಂಗ್ಲಿಷ್ ಹೇರಿಕೆ, ಕಠಿಣ ಶಿಕ್ಷೆಯಿಂದ ಬೇಸತ್ತರು. ಅದನ್ನು ಬಿಟ್ಟು ನಾರ್ಮಲ್ ಸ್ಕೂಲ್ ಸೇರಿದರೆ ಅಲ್ಲಿಯೂ ಅದೇ ಸ್ಥಿತಿ ಇತ್ತು. ಅಲ್ಲಿಯ ಅಧ್ಯಾಪಕರು, ವಿದ್ಯಾರ್ಥಿಗಳ ರೀತಿ–ನೀತಿ, ವರ್ತನೆಗಳು ಠಾಕೂರರಿಗೆ ಹಿಡಿಸಲಿಲ್ಲ. ಅವರನ್ನು 1871ರಲ್ಲಿ ಮತ್ತೊಂದು ಶಾಲೆ 'ಬೆಂಗಾಲ್ ಅಕಾಡೆಮಿ'ಗೆ ಸೇರಿಸಲಾಯಿತು. ಅಲ್ಲಿ ಸಾಕಷ್ಟು ಸ್ವಾತಂತ್ರ್ಯವಿತ್ತು. ಶಿಕ್ಷೆ ಇರಲಿಲ್ಲ. ಆದರೆ ಅದು ಅತಿಯಾದ ಸ್ವಾತಂತ್ರ್ಯವಾಗಿದ್ದರಿಂದ ಅಲ್ಲಿ ಶಿಸ್ತು–ಸೌಂದರ್ಯವನ್ನು ಕಾಪಾಡಿಕೊಂಡಿರಲಿಲ್ಲ. ಅಲ್ಲಿಯ ಸಹವಾಸ ಇವರಿಗೆ ಹಿಡಿಸಲಿಲ್ಲ. ಮತ್ತೆ ಅಲ್ಲಿಂದ 'ಸೇಂಟ್ ಕ್ಸೇವಿಯರ್' ಶಾಲೆ ಸೇರಿಕೊಂಡರು. ಅಲ್ಲಿಯ ಉಪಾಧ್ಯಾಯರು ಒಳ್ಳೆಯವರು; ಅವರಲ್ಲೊಬ್ಬರು ರವೀಂದ್ರನಾಥರಿಗೆ 'ಮ್ಯಾಕ್‌ಬೆತ್' ನಾಟಕವನ್ನು ಬಂಗಾಳಕ್ಕೆ ಅನುವಾದಿಸುವಂಥೆ ಪ್ರೇರಣೆ ನೀಡಿದರು.

ಮನೆಯವರೆಲ್ಲರಿಗೂ ರವೀಂದ್ರನಾಥ ಠಾಕೂರರು ಪ್ರೀತಿಯ ಕಣ್ಮಣಿಯಾಗಿದ್ದರು. ಅವರು ಋಷಿ ವರ್ಚಸ್ಸಿನ ತಂದೆಯವರೊಂದಿಗೆ ಅಷ್ಟಾಗಿ ಸಲಿಗೆಯರಲಿಲ್ಲ. ಅವರ ಬಗೆಗೆ ಒಂದು ರೀತಿಯ ಭಯವೇ ಕಾಡುತ್ತಿತ್ತು. ಉಪನಯನವಾದ ರವೀಂದ್ರನಾಥರನ್ನು ತಂದೆಯೇ

---

೬. 'ಬಾಳನೆನಪು', ಅನು : ಸ್ವಾಮಿಶಂಕರಾನಂದ ಸರಸ್ವತಿ, ಪು. ೯೦.
೭. ಹಾ.ಮಾ. ನಾಯಕ, ರವೀಂದ್ರನಾಥ ಠಾಕೂರ್, ಪು. ೫೬

'ಹಿಮಾಲಯಕ್ಕೆ ಬರುವೆಯಾ?' ಎಂದಾಗ ಹುಡುಗನಿಗೆ ಎಲ್ಲಿಲ್ಲದ ಸಂಭ್ರಮ. ತಂದೆಯ ಮೇಲೆ ಪ್ರೀತಿ ಹೆಚ್ಚಾಯಿತು. ರವೀಂದ್ರನಾಥ ಠಾಕೂರರ ಕಣ್ಣಿನಲ್ಲಿ ತಂದೆ ಉದಾರ, ಸೌಮ್ಯಶೀಲ, ಮಾನವೀಯ ವ್ಯಕ್ತಿಯಾಗಿ ಕಂಡರು.

ರವೀಂದ್ರನಾಥರಿಗೆ ಹಿಮಾಲಯದ ಬೆಟ್ಟಗಳ ಪಂಕ್ತಿ, ಕಣಿವೆ, ಝುರಿ, ತಂಪಾದ ಹಿತಕರ ಹವೆ ನೋಡಿ, ಸವಿದು, ಸುತ್ತಾಡಿ ಕಣ್ಮನ ತಣಿಸಿದರು. ಹಿಮಾಲಯದ ದಿವ್ಯ-ಭವ್ಯ ನೋಟದಲ್ಲಿ ಬಾಲಕ ರವೀಂದ್ರನಾಥರ ಅಂತರಂಗದಲ್ಲಿದ್ದ ಕವಿ ಮನಸ್ಸು ಅಂಕುರಿಸಿತು.

ರವೀಂದ್ರನಾಥರು ಹಿಮಾಲಯ ದರ್ಶನದ ಸ್ಫೂರ್ತಿಯಿಂದ 'ಪೃಥ್ವಿರಾಜ' ನಾಟಕ ರಚನೆ ಮಾಡಿ, ಮ್ಯಾಕ್‌ಬೆತ್ ನಾಟಕವನ್ನು ಅನುವಾದಿಸಿ ತಮ್ಮ ಸೃಜನಶೀಲ ಪ್ರತಿಭೆಯನ್ನು ಮೆರೆದರು. ೧೮೭೫ ಮಾರ್ಚ್ ೮ರಂದು ರವೀಂದ್ರನಾಥ ಠಾಕೂರರ ತಾಯಿ ತೀರಿಕೊಂಡರು. ಈ ಬಾಲಕನಿಗೆ ತನ್ನ ತಾಯಿಯ ಸಾವಿನ ಕರಾಳ ನೋವು ತಾಕಲೇ ಇಲ್ಲ. ಈ ವಿಚಿತ್ರ ಅಪೂರ್ವ ಸಂವೇದನಾಶೀಲತೆಯಲ್ಲಿ ರವೀಂದ್ರನಾಥ ಠಾಕೂರರೇ ಸೂಕ್ಷ್ಮವಾಗಿ ಹೇಳಿಕೊಳ್ಳುತ್ತಾ; "ಆ ಮುಂಜಾನೆ ನಾನು ಕಂಡ ಸಾವಿನ ಮುಖ, ಸುಖ ನಿದ್ದೆಯ ನಿಶ್ಚಲತೆ ಸೊಗಸಿನಂತೆ ತೋರಿತು. ಸಾವು-ಜೀವನದ ನಡುವೆ ಅಂತರವೇ ತೋರಲಿಲ್ಲ"[೮] ಎಂದಿದ್ದಾರೆ.

ಆದರೂ ರವೀಂದ್ರನಾಥರ ಬರವಣಿಗೆ ಸಾಂಗವಾಗಿ ಮುನ್ನಡೆಯಲಾರಂಭಿಸಿತು. ೧೮೭೫ರಲ್ಲೇ 'ಹಿಂದೂಮೇಳ' ಸಭೆಯಲ್ಲಿ ಕವಿತೆ ವಾಚಿಸುತ್ತಾ ಜನತೆಯಲ್ಲಿ ರಾಷ್ಟ್ರೀಯ ಜಾಗೃತಿ ಮೂಡಿಸಲು ಅನುವಾದರು. ಎರಡನೆಯ ಹಿಮಾಲಯ ಯಾತ್ರೆಗೆ ತಂದೆಯೊಡನೆ ಹೊರಟು ಕುಮಾರ ಸಂಭವ, ಶಾಕುಂತಲಾ ಕೃತಿಗಳನ್ನು ಖಾಸಗಿ ಶಿಕ್ಷಕರಿಂದ ಅಭ್ಯಾಸ ಮಾಡಿದರು. ೧೮೭೭ರಲ್ಲಿ 'ಭಾನುಸಿಂಹ' ಎಂಬ ಬಾಲಕಾವ್ಯನಾಮದಲ್ಲಿ ಕವಿತೆಗಳನ್ನು ಬರೆದರು. ಆ ಚಿಕ್ಕ ವಯಸ್ಸಿನಲ್ಲೇ ರವೀಂದ್ರನಾಥರು ವೈಚಾರಿಕವಾಗಿ ಆಲೋಚಿಸುತ್ತಿದ್ದರು. ಅನೇಕ ವಿಷಯಗಳ ಬಗೆಗೆ ವಿಚಾರಪೂರ್ಣ ಪ್ರಬಂಧಗಳನ್ನು ಬರೆದರು. ಅಣ್ಣ ಸತ್ಯೇಂದ್ರನಾಥರೊಡನೆ ಅಹಮದಾಬಾದ್‌ನಲ್ಲಿದ್ದಾಗ 'ಹಸಿದ ಕಲ್ಲುಗಳು' ಎಂಬ ಪ್ರಸಿದ್ಧ ಕತೆಯನ್ನು ರಚಿಸಿದರು.

ತಂದೆ ರವೀಂದ್ರನಾಥರು ಒಳ್ಳೆಯ ಬ್ಯಾರಿಸ್ಟರಾಗಲಿ ಎಂದು ಹೆಲೆನ್ ವಿದ್ಯಾಭ್ಯಾಸಕ್ಕಾಗಿ ೧೮೭೮ರಲ್ಲಿ ಇಂಗ್ಲೆಂಡಿಗೆ ಮೊದಲ ವಿದೇಶ ಪ್ರವಾಸಕ್ಕೆ ಕಳುಹಿಸಿಕೊಟ್ಟರು. ಅಣ್ಣ ಸತ್ಯೇಂದ್ರರ ಮನೆಯಲ್ಲಿದ್ದುಕೊಂಡು ಓದನ್ನು ಆರಂಭಿಸಿದರು. ಓದಿನ ಜೊತೆಗೆ ಅಲ್ಲಿಯ ಸಮಾಜ, ಜನಜೀವನ, ಸಂಸ್ಕೃತಿ, ಇಂಗ್ಲಿಷ್ ಸಾಹಿತ್ಯ, ಪಾಶ್ಚಾತ್ಯ ಸಂಗೀತವನ್ನು ಆಳವಾಗಿ ಅಧ್ಯಯನ ಮಾಡಿದರು. ವಿದೇಶಿ ಯಾತ್ರೆಯ ಅನುಭವಗಳನ್ನು ಅವರ 'ಯುರೋಪ್ ಪ್ರವಾಸದ ಪತ್ರಗಳು' ಸಂಕಲನದಲ್ಲಿ ಕಾಣಬಹುದು.

---

೮. 'ಬಾಳನೆನಹು', ಅನು: ಸ್ವಾಮಿಶಂಕರಾನಂದ ಸರಸ್ವತಿ, ಪು. ೩೧.

ರವೀಂದ್ರನಾಥರಿಗೆ ತಮ್ಮ ೨೨ನೆಯ ವಯಸ್ಸಿನಲ್ಲಿ ಮೃಣಾಲಿನಿ ದೇವಿಯೊಡನೆ ೧೮೮೩ ಡಿಸೆಂಬರ್ ೯ಕ್ಕೆ ಮದುವೆಯಾಯಿತು. ರವೀಂದ್ರನಾಥರು ತಮ್ಮ ಅತ್ತಿಗೆ ತೀರಿಕೊಂಡಾಗ ತುಂಬಾ ದುಃಖಕ್ಕೆ ಒಳಗಾದರು. ಸಾವನ್ನಪ್ಪಿದ ಮೊದಲನೆಯ ಗಾಢ ದುಃಖ 'ಇದು ನನ್ನ ಜೀವಮಾನದ ಮೊದಲ ದೊಡ್ಡ ದುಃಖ'ವೆಂದು ರವೀಂದ್ರನಾಥರೇ ತಮ್ಮ ಆತ್ಮಚರಿತ್ರೆಯಲ್ಲಿ ಹೇಳಿಕೊಂಡಿದ್ದಾರೆ.

ತಂದೆ ವಯಸ್ಸಿಗೆ ಬಂದ ಮಗನಿಗೆ ಮದುವೆ ಮಾಡಿ ೧೮೯೦ರಲ್ಲಿ ಶೆಲೈಡಾದ ದೊಡ್ಡ ಆಸ್ತಿಯ ಉಸ್ತುವಾರಿಯನ್ನು ರವೀಂದ್ರನಾಥ ಠಾಕೂರರಿಗೆ ವಹಿಸಿದರು. ಆಗ ಈ ಕವಿಗೆ ಗ್ರಾಮೀಣ ಬದುಕಿನ ಕಠೋರ ವಾಸ್ತವದ ಅನುಭವ ಪ್ರತ್ಯಕ್ಷ ಒಡನಾಟದಿಂದ ದೊರಕಿತು. ಹಾಗೆಯೇ ಅಲ್ಲಿಯ ಪದ್ಮಾನದಿಯ ಸರಹದ್ದಿನಲ್ಲಿ ಹಬ್ಬಿ-ತುಂಬಿಕೊಂಡಿರುವ ಹಸಿರು ರಾಶಿಯ ಪ್ರಕೃತಿಯ ಸೌಂದರ್ಯ ಅವರನ್ನು ಆಕರ್ಷಿಸಿತು. ರವೀಂದ್ರನಾಥರ ಸಾಹಿತ್ಯಿಕ ಹಾಗೂ ಇನ್ನಿತರ ಕಲಾತ್ಮಕ ಸೃಜನೆಗೆ ಬೇಕಾದ ಅಗತ್ಯ ಅನುಭವಸಾಮಗ್ರಿ ಅಲ್ಲಿ ಅಪಾರವಾಗಿ ದೊರೆತವು.

ಶೆಲೈಡಾದ ಜಮೀನ್ದಾರಿಯ ಜವಾಬ್ದಾರಿಯ ಕಾರ್ಯವನ್ನು ಯಶಸ್ವಿಯಾಗಿ ನಿಭಾಯಿಸಿದರು. ಕಾರ್ಯಕ್ಷಮತೆಯಲ್ಲಿ ಪಳಗಿದರು. ಬಡರೈತನ ಸುಧಾರಣೆಯ ದನಿ ಎತ್ತಿದರು. ಜನಪರ ಹೋರಾಟದ ಮುಂದಾಳಾದರು. ಇದಕ್ಕಾಗಿ 'ಶ್ರೀನಿಕೇತನ' ನಿರ್ಮಾಣ ಮಾಡಿ ಗ್ರಾಮೀಣರ ಪುನರುಜ್ಜೀವನಕ್ಕೆ ಶ್ರಮಿಸಿದರು. ರಾಜಕೀಯ ಹೋರಾಟಕ್ಕಿಳಿದರು. ಶೆಲೈಡಾದಲ್ಲಿ ತಂದೆ ದೇವೇಂದ್ರರು ಧ್ಯಾನ ಮಂದಿರವನ್ನು ಕಟ್ಟಿಸಿದ್ದರು. ಇದನ್ನೇ ಶಾಲೆಯಾಗಿ, ಅಂತರರಾಷ್ಟ್ರೀಯ ವಿದ್ಯಾಲಯವಾಗಿ ಮುಂದೆ ರವೀಂದ್ರನಾಥ ಠಾಕೂರರು ಬೆಳೆಸಿದರು.

### ೫.೩. ರವೀಂದ್ರನಾಥ ಠಾಕೂರರ ಸಾಮಾಜಿಕ ಹೋರಾಟ

ರವೀಂದ್ರರನಾಥ ಸೃಜನಶೀಲ ಪ್ರಕ್ರಿಯೆ ತೀವ್ರಗೊಂಡಿತು; ತಮ್ಮ ಕುಟುಂಬದವರೇ ನಡೆಸುತ್ತಿದ್ದ 'ಸಾಧನಾ', 'ಭಾರತಿ' ಪತ್ರಿಕೆಗಳಿಗೆ ನಿರಂತರವಾಗಿ ಬರೆವುದೂ ಸಾಗಿತು. ಕಲೆಗಳಿಗೆ ಸಂಬಂಧಿಸಿದಂತೆ ವಿಚಾರಪೂರ್ಣ ಲೇಖನಗಳನ್ನು ಬರೆದು ಪತ್ರಿಕೆಗಳಲ್ಲಿ ಪ್ರಕಟಿಸುತ್ತಿದ್ದರು. ಈ ಕಾಲಘಟ್ಟದಲ್ಲಿ ರವೀಂದ್ರನಾಥರ ಸಾಹಿತ್ಯಿಕ ಸೃಜನಶೀಲತೆಯ ಜೊತೆಗೆ ಪ್ರಧಾನವಾಗಿ ಸಾಮಾಜಿಕ ಹೋರಾಟವೂ ಕಾಣಿಸತೊಡಗಿತು.

ರವೀಂದ್ರನಾಥರು ಆರಂಭದಿಂದಲೂ ಸಾಮಾಜಿಕ ಕಾಳಜಿಯನ್ನು ವ್ಯಕ್ತಪಡಿಸುತ್ತಾ, ರಾಷ್ಟ್ರೀಯತೆಯನ್ನು ಜಾಗೃತಗೊಳಿಸುತ್ತಾ, ಸಾಮಾಜಿಕ ಅಭಿವೃದ್ಧಿಯನ್ನು ಸೈದ್ಧಾಂತಿಕವಾಗಿ ಪ್ರತಿಪಾದಿಸುತ್ತಾ ಬಂದರು. ಸ್ವದೇಶಿ ಚಳವಳಿಗೆ ತಮ್ಮದೇ ವಿಶಾಲ ಅರ್ಥ ಕೊಟ್ಟುಕೊಂಡು ಅದರ ಯಶಸ್ಸಿಗೆ ಕಲ್ಕತ್ತೆಯಲ್ಲಿ ಪಾಲುದಾರಿಕೆಯಲ್ಲಿ ಜೂಟ್ ಪ್ರೆಸ್ಸಿಂಗ್ ಕಾರ್ಖಾನೆಯೊಂದನ್ನು ಸ್ಥಾಪಿಸಿ ಸಾಲವನ್ನೂ ಹೇರಿಕೊಂಡರು.

೧೮೯೮ರಲ್ಲಿ ತಾವೇ 'ಭಾರತಿ' ಪತ್ರಿಕೆಯ ಸಂಪಾದಕತ್ವ ವಹಿಸಿಕೊಂಡು, ಅದರ ಜೊತೆ ಜೊತೆಗೆ ಅಪಾರ ಸಾಹಿತ್ಯ ಕೃತಿಗಳನ್ನು ರಚಿಸಿದರು. ತಮ್ಮ ಸಮಕಾಲೀನ ರಾಜಕೀಯ ಸಂಘರ್ಷ

ಎದುರಾದಾಗ ಒಬ್ಬ ಜವಾಬ್ದಾರಿಯುತ ನಾಗರಿಕನಾಗಿ ರಾಜಕೀಯ ಹೋರಾಟಕ್ಕೂ ಇಳಿದರು. ಆಗಿನ ಪ್ರಮುಖ ರಾಜಕೀಯ ಹೋರಾಟದ ನೇತಾರರಾಗಿದ್ದ ಲೋಕಮಾನ್ಯ ಬಾಲಗಂಗಾಧರ ತಿಲಕರ ಬಂಧನವನ್ನು ವಿರೋಧಿಸಿ ಸರಕಾರದ ದಬ್ಬಾಳಿಕೆಯನ್ನು ಉಗ್ರವಾಗಿ ಖಂಡಿಸಿದರು. ೧೯೦೨ರಲ್ಲಿ ಲಾರ್ಡ್ ಕರ್ಜನ್ ಕಲ್ಕತ್ತಾದ ಘಟಿಕೋತ್ಸವದಲ್ಲಿ ಪೌರ್ವಾತ್ಯ ಜನರು ಸುಳ್ಳುಗಾರರೆಂಬರ್ಥದ ಹೇಳಿಕೆ ನೀಡಿದಾಗ ರವೀಂದ್ರನಾಥ ಠಾಕೂರರು ಉಗ್ರವಾಗಿ ಪ್ರತಿಭಟಿಸಿದರು. ಕಲ್ಕತ್ತೆಯಲ್ಲಿ ಕಾಯಿಲೆಗಳಿಂದ ರೋಗಪೀಡಿತರಾದವರನ್ನು ಸೇವೆ ಮಾಡಿದರು.

೧೯೦೧ರ ಡಿಸೆಂಬರ್ ೨೨ರಂದು 'ಬ್ರಹ್ಮಚರ್ಯಾಶ್ರಮ'ವೆಂಬ ಶಾಲೆ ಶಾಂತಿನಿಕೇತನದಲ್ಲಿ ಆರಂಭವಾಯಿತು. ಅಂದಿನಿಂದ ಕವಿಯೂ ಅಲ್ಲೇ ಮಕ್ಕಳುಗಳೊಡನೆ ವಾಸ ಮಾಡಲಾರಂಭಿಸಿದರು. ಇದೇ ಸಂದರ್ಭದಲ್ಲಿ ೧೯೦೧ರಿಂದ ೫ ವರ್ಷಗಳವರೆಗೆ ಬಂಕಿಮಚಂದ್ರರ 'ವಂಗದರ್ಶನ' ಪತ್ರಿಕೆಯ ಸಂಪಾದಕತ್ವದ ಹೊಣೆ ಹೊತ್ತು ನಡೆಸಿದರು. ಹೆಂಡತಿ ಹಾಗೂ ಮಗಳು ರೇಣುಕಾ ಅವರುಗಳು ಅಸ್ವಸ್ಥರಾಗಲು ಕವಿ ಅವರಿಗೆ ಆರೈಕೆ ಮಾಡುತ್ತಾ, ಈ ಸತ್ವಪರೀಕ್ಷೆಯ ಸಂದರ್ಭದಲ್ಲಿಯೂ ತಮ್ಮ ಬರವಣಿಗೆಯ ಕೆಲಸವನ್ನು ಅವಿರತವಾಗಿ ನಡೆಸುತ್ತಲೇ ಇದ್ದರು. ಅವರು ತೀರಿಹೋಗಲು, ಹೆಂಡತಿಯ ಸ್ವರಣಾರ್ಥ 'ಸ್ಮರಣ' ಕೃತಿ ಬರೆದು ಅರ್ಪಿಸುವ ಮೂಲಕ ಆತ್ಮಶಾಂತಿ ಕೋರಿದರು. ತಂದೆ ಮಹರ್ಷಿ ದೇವೇಂದ್ರನಾಥರೂ ೧೯೦೫ ಜನವರಿ ೧೯ರಂದು ದಿವಂಗತರಾದರು. ರವೀಂದ್ರನಾಥ ಠಾಕೂರರು ಸಮಸ್ಯೆಗಳನ್ನು ಸಮಾಜಮುಖೀ ನೆಲೆಯಲ್ಲಿ ವಿಚಾರ ಮಾಡುತ್ತಿದ್ದರು. ಬ್ರಿಟಿಷರ ಸಾಮ್ರಾಜ್ಯವಾದವನ್ನು ಖಂಡಿಸಿದರು. ಲಾರ್ಡ್ ಕರ್ಜನ್‌ನ 'ಬಂಗಾಳಿ ವಿಭಜನೆ'ಯ ವಿರುದ್ಧ 'ವಿಧಾಯಕ ಅಸಹಕಾರ' ಚಳುವಳಿಯನ್ನು ತೀವ್ರಗೊಳಿಸಿದರು..

'ರಾಖೀ ಬಂಧನ'ವನ್ನು ರಾಷ್ಟ್ರೀಯತೆಯ ಹಬ್ಬದ ಸಂಕೇತವೆಂಬಂತೆ ನಾಡಿನಲ್ಲೆಲ್ಲಾ ಆಚರಿಸುವಂತೆ ನೋಡಿಕೊಂಡರು. ರಾಷ್ಟ್ರೀಯ ನಿಧಿಯೊಂದನ್ನು ಈ ಚಳವಳಿಗಾಗಿ ಸಂಗ್ರಹಿಸಿದರು. ಬಿಪಿನ್ ಚಂದ್ರಪಾಲರು, ಅರವಿಂದಘೋಷರು ಈ ಪ್ರಯತ್ನಕ್ಕೆ ನೆರವಾದರು. ಆಂಗ್ಲ ಸರಕಾರದ ನಿಷೇಧಾಜ್ಞೆಯನ್ನು ಪ್ರತಿಭಟಿಸಿ, ಸಾರ್ವಜನಿಕ ಸಭೆ-ಸಮಾರಂಭಗಳ ಮೂಲಕ ವಿದ್ಯಾರ್ಥಿಗಳಿಗೆ ಹೋರಾಡುವಂತೆ ಉತ್ತೇಜಿಸಿದರು.

ಅಂದಿನ ಉಗ್ರ ದೇಶಾಭಿಮಾನಿ ಭಾರತೀಯರಿಗೆ ರವೀಂದ್ರನಾಥರ ಉದಾತ್ತ ಹಾಗೂ ವೈಚಾರಿಕವಾದ ರಾಜಕೀಯ ಚಿಂತನೆಗಳು-ಧೋರಣೆಗಗಳು ರುಚಿಸಲಿಲ್ಲ. ೧೯೦೭ರ ಹೊತ್ತಿಗೆ ನಾಡಿನ ರಾಜಕಾರಣವು ಉಗ್ರ ರಾಷ್ಟ್ರೀಯತೆಯ ಹೆಸರಿನಲ್ಲಿ ಸಂಕುಚಿತ ಮಟ್ಟಕ್ಕೆ ಇಳಿದುದರಿಂದ ತಮ್ಮ ರಾಜಕೀಯ ಹೋರಾಟವನ್ನು ಬಿಟ್ಟು ತಮ್ಮ ಆಶ್ರಮದ ಚಟುವಟಿಕೆ ಮತ್ತು ಸಾಹಿತ್ಯ ಸೃಷ್ಟಿಯಲ್ಲಿ ಪೂರ್ಣವಾಗಿ ತೊಡಗಿಸಿಕೊಂಡರು.

ರವೀಂದ್ರನಾಥ ಠಾಕೂರರು ಮತ್ತೆ ಏಕಾಂತದಲ್ಲುಳಿಯಲು ಆರಂಭಿಸಿದರು. ವೈಯಕ್ತಿಕ ಸಮಸ್ಯೆಗಳ ಸುಳಿಗೆ ಸಿಲುಕಿದರು. ಮಗ ರತೀಂದ್ರ ವಿಜ್ಞಾನ ಮತ್ತು ಗ್ರಾಮೀಣ ಅಭಿವೃದ್ಧಿ ಶಿಕ್ಷಣ

ಪಡೆಯಲು ಅಮೆರಿಕಕ್ಕೆ ಹೋದನು. ಚಿಕ್ಕಮಗಳ ಮದುವೆಯ ಏರ್ಪಾಡು ನಡೆಯುತ್ತಿತ್ತು. ಈ ನಡುವೆಯೇ ರವೀಂದ್ರರ ಕೊನೆಯ ಮಗ 'ಸಮೀಂದ್ರ'ನ ಮರಣ ಸಂಭವಿಸಿತು. ಇದಾವುದಕ್ಕೂ ಅವರು ಎದೆಗುಂದದೆ ಕರನಿರಾಕರಣೆ ಸತ್ಯಾಗ್ರಹದ ಆಶೋತ್ತರಗಳನ್ನು 'ಪ್ರಾಯಶ್ಚಿತ್ತ' (೧೯೦೯) ನಾಟಕ ಬರೆದು ಬ್ರಿಟಿಷ್ ಸರಕಾರವನ್ನು ಎಚ್ಚರಿಸಿದರು, ಪ್ರತಿಯಾಗಿ ಬ್ರಿಟಿಷ್ ಸರಕಾರ, ಸರಕಾರಿ ಅಧಿಕಾರಿಗಳು ಶಾಂತಿನಿಕೇತನಕ್ಕೆ ತಮ್ಮ ಮಕ್ಕಳನ್ನು ಕಳುಹಿಸಬಾರದೆಂದು ಗುಪ್ತ ಆಜ್ಞೆ ನೀಡಿದುದನ್ನು ರವೀಂದ್ರನಾಥರು ಬಯಲಿಗೆಳೆದು ಖಂಡಿಸಿದರು.

ರವೀಂದ್ರನಾಥರು ೧೯೧೦ರ ಸುಮಾರಿಗೇ ವಂಗ ಗೀತಾಂಜಲಿಯ ಕವನಗಳೆಲ್ಲ ರಚನೆಯಾಗಿ, ಪ್ರಕಟಣೆಗೊಂಡು ಬಂಗಾಳ ನಾಡಿನಲ್ಲೆಲ್ಲ ಪ್ರಸಿದ್ಧಿ ಹೊಂದಿದರು. ಕೆಲವು ಆಯ್ದ ಕವನಗಳನ್ನು ಆಂಗ್ಲಭಾಷೆಗೆ ಅನುವಾದಿಸಿ 'ಆಂಗ್ಲ ಗೀತಾಂಜಲಿ'ಯ ಅವತರಣಿಕೆಯನ್ನು ಹೊರತಂದರು. ಯಾಂತ್ರಿಕವಾದ ಬದುಕು, ಯುದ್ಧದ ಕರಾಳ ರಾತ್ರಿ ಕವಿದಿದ್ದ ಪಾಶ್ಚಾತ್ಯರಿಗೆ ರವೀಂದ್ರನಾಥರ ಗೀತಾಂಜಲಿಯ ವಿಶ್ವಶ್ರೇಯಸ್ಸು ಸಾರುವ ಗೀತೆಗಳು ವರಪ್ರಸಾದವೆನಿಸಿದವು. ಅವರ ಮನಸ್ಸಿಗೆ ನೆಮ್ಮದಿಯನ್ನು ತಂದವು. ರಾತೆನ್‌ಸ್ಟನ್, ಯೇಟ್ಸ್, ಆಂಡ್ರೂಜ, ಸಿಂಕ್ಲೇರ್ ಮುಂತಾದ ಅಲ್ಲಿಯ ಮಹಾ ಸಾಹಿತಿಗಳೂ ರವೀಂದ್ರನಾಥ ಠಾಕೂರರ ಕೃತಿಯಲ್ಲಿನ ವಿಶ್ವಪ್ರೇಮ, ವಿಶ್ವಶಾಂತಿ, ವಿಶ್ವಕಲ್ಯಾಣ ಸಂದೇಶವನ್ನು ಸಹೃದಯರಿಗೆ ಪರಿಚಯಿಸಿ, ರವೀಂದ್ರನಾಥರನ್ನು 'ವಿಶ್ವಕವಿ', 'ವಿಶ್ವಗುರುವರ್ಯ', 'ಮಹಾಮಾನವತಾವಾದಿ' ಎಂದು ಬಣ್ಣಿಸಿದರು. 'ಇಂಡಿಯಾ ಸೊಸೈಟಿ' 'ಮ್ಯಾಕ್‌ಮಿಲನ್ ಕಂಪನಿ'ಗಳು ರವೀಂದ್ರನಾಥರ ಆಂಗ್ಲ ಗೀತಾಂಜಲಿಯನ್ನು ಪ್ರಕಟಿಸಿದರು. ೧೯೧೩ರಲ್ಲಿ ಈ ಕೃತಿಗೆ ನೋಬೆಲ್ ಪಾರಿತೋಷಕ ಲಭಿಸಲು ಒಮ್ಮೆಲೇ ರವೀಂದ್ರನಾಥ ಠಾಕೂರರು ವಿಶ್ವಪ್ರಸಿದ್ಧಿಗೇರಿಬಿಟ್ಟರು.

ಬ್ರಿಟೀಷರು 'ಹೋಂ ರೂಲ್' ಚಳುವಳಿ ಹೂಡಿದ ಆನಿಬೆಸೆಂಟರನ್ನು ಸೆರೆಯಲ್ಲಿಟ್ಟಿದ್ದುದರ ವಿರುದ್ಧ ರವೀಂದ್ರನಾಥರು ಸಾರ್ವಜನಿಕವಾಗಿ ಪ್ರತಿಭಟಿಸಿದರು. ೧೯೧೮ರಲ್ಲಿ ಅಂದಿನ ಬ್ರಿಟೀಷ್ ಮಂತ್ರಿ ಮಾಂಟೆಗ್ಯೂ ಅವರಿಗೆ ಶೈಕ್ಷಣಿಕ ಸುಧಾರಣೆಗಾಗಿ ಮನವಿ ಮಾಡಿದರು. ಶಿಕ್ಷಣ ಭಾಷೆ ದೇಶೀಯದ್ದಾಗಿರಬೇಕೆಂದು ಪ್ರತಿಪಾದಿಸಿದರು. ೧೯೧೯ರಲ್ಲಿ ದಕ್ಷಿಣ ಭಾರತ ಪ್ರವಾಸ ಕೈಗೊಂಡು ಕರ್ನಾಟಕದ ಬೆಂಗಳೂರು, ಮೈಸೂರುಗಳಿಗೂ ಭೇಟಿಯಿತ್ತು ದ್ರಾವಿಡ ಸಂಸ್ಕೃತಿಯನ್ನು ಅಧ್ಯಯನ ಮಾಡಿದರು. ಇದೇ ಏಪ್ರಿಲ್‌ನಲ್ಲಿ ನಡೆದ 'ಜಲಿಯನ್ ವಾಲಾಬಾಗ್' ಹತ್ಯಾಕಾಂಡಕ್ಕೆ ಕಾರಣವಾದ ಆಂಗ್ಲರ ಹಿಂಸಾತ್ಮಕ ಮತ್ತು ದಬ್ಬಾಳಿಕೆ ನೀತಿಯನ್ನು ಉಗ್ರವಾಗಿ ಖಂಡಿಸಿದರು. ಪ್ರತಿಭಟನೆಯ ಸೂಚನೆಯಾಗಿ ಬ್ರಿಟಿಷ್ ಸರಕಾರ ತಮಗಿತ್ತ 'ಸರ್ ನೈಟ್‌ಹುಡ್' ಪ್ರಶಸ್ತಿಯನ್ನು ವೈಸ್‌ರಾಯ್‌ಗೆ ಹಿಂದಿರುಗಿಸಿದರು.

೧೯೨೦-೧೯೨೨ರ ಅವಧಿಯಲ್ಲಿ ೫ನೆಯ ಬಾರಿ ವಿದೇಶ ಯಾತ್ರೆ ಹೊರಟು. ಆಗ ಅಮೆರಿಕ ಮತ್ತು ಯುರೋಪ್ ರಾಷ್ಟ್ರಗಳ ವಿದ್ವಾಂಸರಿಗೆ ತಮ್ಮ 'ವಿಶ್ವಭಾರತಿ'ಯನ್ನು ಪರಿಚಯ ಮಾಡಿದರು. ಈ ಮೂಲಕ ಪೂರ್ವ-ಪಶ್ಚಿಮವನ್ನು ವಿಶ್ವಸಾಮರಸ್ಯದಲ್ಲಿ ಒಗ್ಗೂಡಿಸುವುದು ಅವರ ಮುಖ್ಯ ಧ್ಯೇಯವಾಗಿತ್ತು.

ಗಾಂಧೀಜಿ ಮತ್ತು ರವೀಂದ್ರನಾಥ ಠಾಕೂರರ ನಡುವೆ ಪರಸ್ಪರ ಗೌರವ-ಸೌಜನ್ಯ ಇತ್ತು. ರಾಷ್ಟ್ರವು ವಿಶ್ವಕ್ಷೇಮದ ಧ್ಯೇಯವನ್ನು ಕಡೆಗಣಿಸಬಾರದೆಂದರು. ಗಾಂಧೀಜಿಯವರ ಅಹಿಂಸಾತ್ಮಕ ಅಸಹಕಾರ ಚಳವಳಿಯಲ್ಲಿನ ದೋಷಗಳನ್ನು ಮನವರಿಕೆ ಮಾಡಿಕೊಟ್ಟರು. ಗಾಂಧೀಜಿಯವರು ರವೀಂದ್ರನಾಥರ ಹಿರಿಗುಣವನ್ನು ಗೌರವಿಸಿ, 'ಹಿರಿ ಕಾವಲುಗಾರ' (The Great Sentinel) ಎಂದು ಸಂಬೋಧಿಸಿ; ಸಾತ್ವಿಕ ಅಸಹಕಾರದಿಂದ ಸ್ವಾತಂತ್ರ್ಯ ಪಡೆಯುವುದು ಮಾನವ ಕಲ್ಯಾಣಕ್ಕಾಗಿ ಎಂದು ಸಮರ್ಥಿಸಿದರು.

### ೫.೪. ರವೀಂದ್ರನಾಥ ಠಾಕೂರರ ವ್ಯಕ್ತಿತ್ವ

ರವೀಂದ್ರನಾಥ ಠಾಕೂರರದ್ದು ಸುಸಂಸ್ಕೃತವಾಗಿದ್ದ ತೇಜಸ್ವಿ ವ್ಯಕ್ತಿತ್ವವಾಗಿತ್ತು. ದೊಡ್ಡ ವ್ಯಕ್ತಿತ್ವ ಅವರದ್ದಾಗಿತ್ತು. ರಾಮಕೃಷ್ಣ ಪರಮಹಂಸ, ಸ್ವಾಮಿ ವಿವೇಕಾನಂದ, ಭಗವಾನ್ ಬುದ್ಧ ಅವರನ್ನು ನೆನಪಿಗೆ ತರುವಂತೆ ರವೀಂದ್ರನಾಥ ಠಾಕೂರರು ಕಾಣುತ್ತಿದ್ದರು. ಅವರ ಉಡುಪು-ವರ್ತನೆ-ಮಾತುಗಳಲ್ಲಿ ಒಂದು ಕಲಾವಂತಿಕೆಯನ್ನು ಕಾಣಬಹುದಾಗಿತ್ತು. ಅವರು ವಿಶ್ವವಿಚಾರಗಳಿಗೆ ತಮ್ಮನ್ನು ಮುಕ್ತವಾಗಿ ಉದಾತ್ತವಾಗಿ ತೆರೆದುಕೊಂಡಿದ್ದರು. ಅವರ ಸಂಸ್ಕಾರ, ರೂಪು ಮಾತ್ರ ಅಪ್ಪಟ ಭಾರತೀಯ ಸಂಸ್ಕೃತಿಯ ಪ್ರತೀಕವಾಗಿತ್ತು.

ತಮ್ಮ ಜೀವನಾನುಭವಗಳಿಂದ ಕಲಿತ ಪಾಠದಿಂದಾಗಿ ವಿಶ್ವದೃಷ್ಟಿ, ಕಾಯಕನಿಷ್ಠೆ, ಪ್ರೇಮಯೋಗ, ಮಹಾಮಾನವೀಯತೆ, ಮನುಕುಲ ಕಲ್ಯಾಣಗಳಂತಹ ಮೌಲ್ಯಗಳನ್ನು ಅಳವಡಿಸಿಕೊಂಡು ತಮ್ಮ ವ್ಯಕ್ತಿತ್ವವನ್ನು ರೂಪಿಸಿಕೊಂಡರು. ರವೀಂದ್ರನಾಥರ ಬಹುಮುಖ ಪ್ರತಿಭೆಯ ಬೀಜಗಳು ಮೊಳಕೆಯೊಡೆದವು.

ರವೀಂದ್ರನಾಥರು ಜೀವನದ ಶೋಧನೆಗಾಗಿಯೇ ತಮ್ಮ ಬದುಕನ್ನು ಪ್ರಾಯೋಗಿಕ ಪರಿಶೋಧನೆಗೆ ಒಳಪಡಿಸಿದರು. ರವೀಂದ್ರನಾಥರ ಬದುಕು ಮತ್ತು ಬರಹವು ಇಷ್ಟೊಂದು ವಿಸ್ತಾರವನ್ನು ಪಡೆಯಲು ಪ್ರಗತಿ ಮತ್ತು ಸಾಧನೆಯ ತುತ್ತತುದಿ ತರಲು ಅವರ ಪ್ರವೃತ್ತಿಗಳು ಮುಖ್ಯ ಕಾರಣಗಳೆನ್ನಬಹುದು. ಜಾತಿ-ಮತ, ಸಂಪ್ರದಾಯ, ಕುರುಡುನಂಬಿಕೆಗಳಿಗೆ ಬಲಿಯಾಗದೆ, ಪ್ರಜ್ಞಾವಂತ ಅನ್ವೇಷಕರಾಗಿ ಗಾಢಚಿಂತನೆ, ಧ್ಯಾನ, ಆಧ್ಯಾತ್ಮಿಕ ಪರಾಮರ್ಶೆಯಲ್ಲಿ ಸಮಷ್ಟಿ ಸತ್ಯವನ್ನು ಕಂಡುಕೊಳ್ಳಲು ಹುಡುಕಾಟ ನಡೆಸಿದರು.

ರವೀಂದ್ರನಾಥ ಠಾಕೂರರಿಗೆ ವೃತ್ತಿ ಪ್ರವೃತ್ತಿ-ಮೌಲ್ಯ ಎಲ್ಲವೂ ಆದ ನಂತರ ತತ್ತ್ವಗಳು. ಠಾಕೂರರು ರಚನಾತ್ಮಕವಾದ ಹಾಗೂ ಸೃಜನಾತ್ಮಕವಾದ ಚಟುವಟಿಕೆಯಲ್ಲಿ ಕಾಯಕತಪಸ್ವಿಯಂತೆ ತೊಡಗಿಕೊಂಡರು. ತಮ್ಮ ಚಿಂತನೆಯಲ್ಲಿ ಹೊಸ ಸಿದ್ಧಾಂತವನ್ನೇ ಕಂಡುಕೊಂಡರು.

ಮಿಥ್ಯದಿಂದ-ಸತ್ಯದೆಡೆಗೆ ಸಾಗುವ ವಿಕಾಸದ ಸಂವೇದನೆಯಲ್ಲಿ ಬ್ರಹ್ಮಾನಂದವನ್ನು ಅನುಭವಿಸಬೇಕು ಎಂದರು ರವೀಂದ್ರನಾಥ ಠಾಕೂರರು. ತಾವು ಕಂಡುಕೊಂಡ ಬ್ರಹ್ಮಾನಂದಕ್ಕೆ ಕಲಾಭಿವ್ಯಕ್ತಿ ನೀಡಿ, ಅದರ ಪ್ರತಿಬಿಂಬದಲ್ಲಿ ತಮ್ಮನ್ನು ತಾವು ಕಂಡುಕೊಂಡರು.

ಆರಂಭದಲ್ಲಿ ಭಾವನಾತ್ಮಕ ಪರವಶತೆ ಅವರ ಕಾವ್ಯದಲ್ಲಿ ಕಾಣಿಸಿಕೊಂಡಿವೆ. ಇವು ಜೀವನಪ್ರೀತಿಯನ್ನು ಹೆಚ್ಚಿಸುತ್ತವೆ. ರವೀಂದ್ರನಾಥ ಠಾಕೂರರ ವಿನೂತನ ಸೌಂದರ್ಯ ಪರಿಕಲ್ಪನೆಗೆ ಅವರ 'ಊರ್ವಶಿ' ಕೃತಿಯನ್ನು ನೋಡಬಹುದು. ಇಲ್ಲಿ ಲೌಕಿಕವಾದ ಪ್ರೀತಿ, ಪ್ರಣಯದಲ್ಲಿ ಸೌಂದರ್ಯ ಪ್ರಧಾನವಾಗಿ ಕಾಣಿಸುತ್ತದೆ. ಮಿಗಿಲಾಗಿ ಆಧ್ಯಾತ್ಮಿಕ ಸಂಯಮದಿಂದ ಮಾನಸಿಕ ದೂರದಲ್ಲಿ ನಿಂತು ಕಾಣುವ ಸಮಷ್ಟಿ ಸೌಂದರ್ಯವಿದೆ. 'ಸೂರ್ಯ ಮುಳುಗಿತೆಂದು ಪರಿತಪಿಸುತ್ತಾ ಕೂತರೆ ನಕ್ಷತ್ರ ನೋಡುವ ಭಾಗ್ಯವು ತಪ್ಪೀತು' ಎಂಬ ರವೀಂದ್ರನಾಥ ಠಾಕೂರರ ಮಾತು ಅವರ ಆಶಾದಾಯಕವಾದ ಪ್ರಜ್ಞೆಗೆ ಸಾಕ್ಷಿ.

## ೫.೫. ರವೀಂದ್ರನಾಥ ಠಾಕೂರರ ಬಹುಮುಖ ಪ್ರತಿಭೆ

ರವೀಂದ್ರನಾಥ ಠಾಕೂರರು ಮೂಲತಃ ಕವಿ, ಆಧ್ಯಾತ್ಮಿ, ದಾರ್ಶನಿಕ, ಶಿಕ್ಷಣತಜ್ಞ, ಮಾನವತಾವಾದಿ, ಸಂಗೀತಜ್ಞ, ಕಲಾವಿದ. ರವೀಂದ್ರನಾಥ ಠಾಕೂರರು ಬಹುಮುಖ ವ್ಯಕ್ತಿತ್ವವುಳ್ಳವರು. ಸಾಹಿತ್ಯ, ಚಿತ್ರಕಲೆ, ಶಿಕ್ಷಣ, ಸಂಗೀತ ಮುಂತಾದ ರಂಗಗಳಲ್ಲಿ ಅಗ್ರಮಾನ್ಯರಾಗಿ ಬೆಳೆದು ಈ ವಿವಿಧ ಕ್ಷೇತ್ರಗಳಲ್ಲಿ ಒಂದು ಭವ್ಯ ಪರಂಪರೆಯನ್ನು ಸೃಷ್ಟಿಸಿದರು.

ಅವರ ಪ್ರತಿಭಾವಂತಿಕೆ ಕವಿತೆ, ಕಥೆ, ನಾಟಕ, ಕಾದಂಬರಿ, ಪ್ರಬಂಧಗಳಲ್ಲೂ ಅವರ ಸೃಜನೆಯ ಕೌಶಲ, ಅಮೂಲ್ಯವಾದ ವಿಚಾರ-ಚಿಂತನೆಗಳಲ್ಲಿ ವ್ಯಾಪಿಸಿಕೊಂಡಿವೆ. ಇವರೊಬ್ಬ ವಿಶ್ವಮಾನ್ಯ ಸಾಹಿತಿ. ಬಿ.ಎಂ. ಶ್ರೀ. ಅವರ ಮಾತಿನಲ್ಲಿ ಹೇಳುವುದಾದರೆ, "ಶ್ರೀ ರವೀಂದ್ರರು ಭರತಭೂಮಿಗೇ ಅಲ್ಲದೆ ಇಡಿಯ ವಿಶ್ವಕ್ಕೇ ಅಲಂಕಾರ ಪ್ರಾಯರು."[೯]

ರವೀಂದ್ರನಾಥರು ಒಂದು ವ್ಯವಸ್ಥಿತ, ಮುಕ್ತ, ಹಾಗೂ ವೈಜಾನಿಕವಾದ ಶಿಕ್ಷಣಪದ್ಧತಿಯನ್ನು, ಈ ಬಗೆಗೆ ಪರಿಶೋಧನೆಯನ್ನು ಶಾಲಾ ಬಾಲಕನಾಗಿರುವಾಗಲೇ ರೂಪಿಸಲಾರಂಭಿಸಿದರು. ಅದರ ಫಲವೇ 'ಶಾಂತಿನಿಕೇತನ' ಹೆಸರಿನ ಆದರ್ಶ ಶಾಲೆ. "ಮಕ್ಕಳ ಶಿಕ್ಷಣದ ಬಗ್ಗೆ ನನ್ನದು ಒಂದು ಹೊಸ ತತ್ತ್ವವೇನೂ ಇಲ್ಲ; ಅದು ನನ್ನ ಬಾಲ್ಯದ ಶಿಕ್ಷಣದ ಅನುಭವ ಸಾರ"[೧೦] ಎಂಬ ಅವರ ಮಾತಿನಲ್ಲೇ ರವೀಂದ್ರರ ಶೈಕ್ಷಣಿಕ ಮೂಲ ಸೆಲೆ. ಪ್ರಾಚೀನ ಭಾರತದ ಗುರುಕುಲ ಶಿಕ್ಷಣಪದ್ಧತಿ ಮತ್ತು ವೈಜ್ಞಾನಿಕವಾದ ಆಧುನಿಕ ಶಿಕ್ಷಣ ತತ್ತ್ವಗಳು ಹಾಗೂ ಸಮಕಾಲೀನ ಸಾಮಾಜಿಕ ಸ್ಥಿತಿಗತಿಗನುಗುಣವಾಗಿ ರೂಪಿಸಿದರು. ರವೀಂದ್ರರು ರವೀಂದ್ರರ ಶಿಕ್ಷಣ ಪದ್ಧತಿಯ ವಿಶೇಷತೆಯನ್ನು ಗುರುತಿಸುತ್ತಾ, ಸುನೀಲಚಂದ್ರ ಸರಕಾರ ಅವರು-"ರವೀಂದ್ರರು ಮಾಡಿದ ಈ ಶೈಕ್ಷಣಿಕ ಪ್ರಯೋಗದ ವೈಶಿಷ್ಟ್ಯಪೂರ್ಣ ನವೀನತೆಯೆಂದರೆ-ಶಿಕ್ಷಣದಲ್ಲಿ ಸ್ವಾತಂತ್ರ್ಯ ಹಾಗೂ ಹರ್ಷಮಯ ವಾತಾವರಣದ ಮಹತ್ವವನ್ನು ಗುರುತಿಸಿ, ಆಚರಣೆಯಲ್ಲಿ ತಂದದ್ದು"[೧೧] ಎಂದಿದ್ದಾರೆ.

---

೯. ಪ್ರಬುದ್ಧ ಕರ್ನಾಟಕ (ರವೀಂದ್ರಾಂಕ), ಮೈಸೂರು ವಿಶ್ವವಿದ್ಯಾನಿಲಯ, ೧೯೬೧-೬೨.
೧೦. ರವೀಂದ್ರ ಪ್ರಶಸ್ತಿ, ಸಂ. ಮಾಸ್ತಿ ವೆಂಕಟೇಶ ಅಯ್ಯಂಗಾರ್, ಪುಟ ೧೭೦.
೧೧. ರವೀಂದ್ರ ಪ್ರಶಸ್ತಿ, ಸಂ. ಮಾಸ್ತಿ ವೆಂಕಟೇಶ ಅಯ್ಯಂಗಾರ್, ಪುಟ ೧೭೩.

ಕವಿ, ತತ್ತ್ವಜ್ಞಾನಿ, ಪ್ರಕೃತಿಯ ಆರಾಧಕರಾಗಿದ್ದ ರವೀಂದ್ರನಾಥರು ಶಿಕ್ಷಣವೆಂದರೆ ಮಾನವ-ದೇವರು-ಪ್ರಕೃತಿಯ ಒಡನಾಟ ಮತ್ತು ಅದರೊಂದಿಗಿನ ಸಂಸರ್ಗದಲ್ಲಿ ವಿದ್ಯಾರ್ಥಿಗೆ ದಿವ್ಯಜ್ಞಾನ-ಅನುಭವವನ್ನು ಕಲ್ಪಿಸುವ ಸಮೀಕರಣವೇ ವಿಶ್ವಕಲ್ಯಾಣ ಮತ್ತು ಮಾನವ ಶ್ರೇಯಸ್ಸಿನ ಸಾಧನವೆಂದು ಬೋಧಿಸಿದರು. ರವೀಂದ್ರನಾಥರ ಶೈಕ್ಷಣಿಕ ಸಿದ್ಧಾಂತ ಒಂದು ವ್ಯವಸ್ಥಿತವಾದ ಸ್ಥಳ, ಹಿತಕರವಾದ ಪರಿಸರ, ವಿಶ್ವದೃಷ್ಟಿ, ವಿಶ್ವತತ್ತ್ವಗಳನ್ನೆಲ್ಲಾ ಅರಗಿಸಿಕೊಂಡ ಸಮಗ್ರ ಶೈಕ್ಷಣಿಕ ಯೋಜನೆ. ಇದನ್ನು ಸಾಕಾರಗೊಳಿಸಲು ರವೀಂದ್ರನಾಥ ಠಾಕೂರರು ತಮ್ಮ ಜೀವಮಾನವನ್ನೇ ಮುಡುಪಾಗಿಟ್ಟರು. ಇದರ ಪ್ರತಿಫಲಗಳು ಅವರು ನಿರ್ಮಿಸಿದ 'ಶಾಂತಿನಿಕೇತನ', 'ಶ್ರೀನಿಕೇತನ', ವಿಶ್ವಭಾರತಿ' - ಶಿಕ್ಷಣ ಸಂಸ್ಥೆಗಳು.

'ಶಾಂತಿನಿಕೇತನ' ಆಧುನಿಕ ಶೈಕ್ಷಣಿಕ ತತ್ತ್ವಸಿದ್ಧಾಂತಗಳನ್ನು ವೈಜ್ಞಾನಿಕವಾಗಿ ಅಳವಡಿಸಿಕೊಂಡ ಭಾರತೀಯ ಪ್ರಾಚೀನ ಗುರುಕುಲ ಪದ್ಧತಿಯ ಮಕ್ಕಳ ಶಿಕ್ಷಣ ಸಂಸ್ಥೆ. ಪಶ್ಚಿಮ ಬಂಗಾಳದ ನಿಸರ್ಗರಮಣೀಯವಾದ ಬೋಲ್ಪುರದ ನಿಸರ್ಗ ಪರಿಸರದಲ್ಲಿದ್ದ ರವೀಂದ್ರನಾಥ ಠಾಕೂರರ ತಂದೆಯ ಧ್ಯಾನಮಂದಿರವೇ ರವೀಂದ್ರನಾಥರ ಶಾಲೆಯಾಗಿ ಮಾರ್ಪಟ್ಟಿತು. ವಿದ್ಯಾರ್ಥಿಗಳು ಮುಕ್ತವಾಗಿ ಮರದ ನೆರಳಲ್ಲಿ ನೆಲದ ಮೇಲೆ ಕುಳಿತು, ಋಷಿವರ್ಯರ ಆತ್ಮೀಯ ಒಡನಾಟದಲ್ಲಿ ಮೈ-ಮನಸ್ಸುಗಳನ್ನು ಪ್ರಕೃತಿಯ ಹವೆ-ಬಿಸಿಲಿಗೆ ತೆರೆದುಕೊಂಡು, ಉತ್ಸಾಹದಿಂದ ಕಲಿಕೆಯ ಆಟದಿಂದ ಜ್ಞಾನ ಪಡೆದು ವಿಕಾಸ ಹೊಂದಲು ಅನುವು ಮಾಡಿಕೊಟ್ಟ ಶೈಕ್ಷಣಿಕ ಸಂಸ್ಥೆ.

ಮಕ್ಕಳ ಮನಸ್ಸಿಗೆ ಅನುಗುಣವಾಗಿ ಕಲಿಯುವ ಹುರುಪು ಮೂಡಿಸುವಂತೆ ಶಾಲೆಯ ಶಿಸ್ತು ಮತ್ತು ಬೋಧನ ಕ್ರಮ ರೂಪಿಸಲಾಗಿತ್ತು. ಪ್ರತಿನಿತ್ಯ ಬೆಳಿಗ್ಗೆ ಸ್ನಾನ, ಲಘು ವ್ಯಾಯಾಮ; ಮುಗಿದ ಮೇಲೆ ವೇದಮಂತ್ರ ಪಠಣ, ನಂತರ ರವೀಂದ್ರನಾಥರೇ ರಚಿಸಿದ ಬಂಗಾಳಿ ಶಾಲಾಗೀತೆಯಲ್ಲಿ ಪ್ರಾರ್ಥನೆಯೊಂದಿಗೆ ಶಾಂತಿನಿಕೇತನದ ಶಾಲಾಚಟುವಟಿಕೆಗಳು ಪ್ರಾರಂಭವಾಗುತ್ತಿದ್ದವು. ಉಪಾಹಾರ ಮುಗಿದ ಮೇಲೆ ನಲವತ್ತೈದು ನಿಮಿಷಗಳ ಅವಧಿಯಲ್ಲಿ ಬಂಗಾಳಿ, ಸಂಸ್ಕೃತ, ಇಂಗ್ಲಿಷ್, ಗಣಿತ, ಚರಿತ್ರೆ, ಭೂಗೋಳ, ವಿಜ್ಞಾನ, ನಿಸರ್ಗದ ಅಧ್ಯಯನ, ಸಂಗೀತ ಮತ್ತು ಕಲೆಗಳ ಅಧ್ಯಯನಗಳನ್ನು ಕಲಿಸಲಾಗುತ್ತದೆ. ಹಾಡುಗಾರಿಕೆ, ನಾಟಕ, ನೃತ್ಯಗಳು ಮನರಂಜನ ಚಟುವಟಿಕೆಗಳಾಗಿದ್ದವು. ಸ್ವತಃ ರವೀಂದ್ರನಾಥರೇ ಮಕ್ಕಳಲ್ಲಿ ಸಾಹಿತ್ಯಾಸಕ್ತಿ ಮತ್ತು ಸೃಜನಶೀಲತೆಯನ್ನು ಮೂಡಿಸುತ್ತಿದ್ದರು. ಸಾಹಿತ್ಯ-ಸಂಗೀತ-ಚಿತ್ರಕಲೆ ಪ್ರವೃತ್ತಿಯನ್ನು ಶಿಕ್ಷಣಕ್ಕೆ ಪೂರಕವಾಗಿ ಸಂಯೋಜಿಸಲಾಗಿತ್ತು. ಉತ್ಸವಗಳು, ಹಬ್ಬಗಳನ್ನು ಸಡಗರ-ಸಂಭ್ರಮದಿಂದ ಆಚರಿಸಲಾಗುತ್ತಿತ್ತು.

ಹಳ್ಳಿಗರ ಕಲ್ಯಾಣಕ್ಕಾಗಿ ೧೯೨೨ರಲ್ಲಿ 'ಶ್ರೀನಿಕೇತನ'ವೆಂಬ ಶಿಕ್ಷಣ ಸಂಸ್ಥೆಯನ್ನು ರವೀಂದ್ರನಾಥರು ಆರಂಭಿಸಿದರು. ಸ್ವಿಟ್ಸರ್ಲೆಂಡಿನ 'ಸ್ವಯಂಪೂರ್ಣ ಶಿಕ್ಷಣ ಕಾಲೋನಿ'ಗಳಂತೆ ರೈತರ ಮಕ್ಕಳು ಇಲ್ಲಿ ವ್ಯವಸಾಯ, ಗ್ರಾಮೀಣ ಕೈಗಾರಿಕೆ, ಕರಕುಶಲ ಕಲೆ ಮುಂತಾದವುಗಳ ಬಗೆಗೆ ವೃತ್ತಿಪರವಾದ ಅರಿವು ಮತ್ತು ಅನುಭವವನ್ನು ಪಡೆಯುತ್ತಾ ಕಲಿಯುತ್ತಿದ್ದರು. ಗುಡಿ ಕೈಗಾರಿಕಾ ತರಬೇತಿ

ಶಾಖೆ, 'ಶಿಲ್ಪಭವನ', ಕಾಗದ, ಬುಟ್ಟಿ ತಯಾರಿಕೆ, ನೇಯುವಿಕೆ, ಚಮ್ಮಾರಿಕೆಗೆ 'ಶಿಲ್ಪಸದನ', 'ಕಲಾತ್ಮಕ ತರಬೇತಿಗೆ 'ಶಿಕ್ಷಾಸತ್ರ', ಹಾಗೆಯೇ ರಸಗೊಬ್ಬರ, ಸುಧಾರಿತ ಬೀಜ ತಯಾರಿಕೆ ಕಲಿಸುವುದು, ಪಶುಸಂಗೋಪನೆ, ಕೋಳಿಸಾಕಾಣಿಕೆ, ಆರೋಗ್ಯಶಾಸ್ತ್ರ – ಹೀಗೆ ಹತ್ತಾರು ಶಾಖೆಗಳಲ್ಲಿ ಈ ವಿವಿಧ ತರಬೇತಿ ನೀಡಲಾಗುತ್ತಿತ್ತು. ಅಲ್ಲದೆ ಅಂತರರಾಷ್ಟ್ರೀಯ ವಿದ್ವಾಂಸರು ಅಲ್ಲಿಗೆ ಬಂದು ಹೊಸ ಸಂಶೋಧನೆ ನಡೆಸುತ್ತಿದ್ದರು. ಒಟ್ಟಿನಲ್ಲಿ ಗ್ರಾಮೀಣರು ವೈಜ್ಞಾನಿಕ ಹಾಗೂ ವೃತ್ತಿ ಪರವಾದ ಶಿಕ್ಷಣ ಪಡೆದು ಭಾರತವನ್ನು ಸ್ವಾವಲಂಬಿ-ಸಂವೃದ್ಧವಾದ ದೇಶವಾಗಿ ಅಭಿವೃದ್ಧಿಗೊಳಿಸುವುದು ಠಾಕೂರರು ಕಲ್ಪಿಸಿದ ಶ್ರೀನಿಕೇತನದ ಧ್ಯೇಯವಾಗಿತ್ತು.

ಆಶ್ರಮವನ್ನು ೧೯೨೧ರಲ್ಲಿ 'ವಿಶ್ವಭಾರತಿ' ಅಂತರರಾಷ್ಟ್ರೀಯ ವಿಶ್ವವಿದ್ಯಾಲಯವನ್ನಾಗಿ ಮಾಡಿದರು. ಅದರಿಂದ ಗಾಂಧೀಜಿ, ಠಾಕೂರರಂತಹ ವಿಶ್ವಮಾನವರ ಯುಗ ಆರಂಭವಾಯಿತು. ನಮ್ಮ ನಮ್ಮ ವಿಭಿನ್ನತೆಯ ನಡುವೆಯೂ ಪರಸ್ಪರ ಮಾನವೀಯ ಹಾಗೂ ಪ್ರಜ್ಞಾವಂತ ಐಕ್ಯತೆ-ಅನ್ಯೋನ್ಯತೆಯನ್ನು ಕಾಪಾಡಿಕೊಳ್ಳಬೇಕೆಂಬ ವಿಶ್ವಮಾನವರ ಸಂದೇಶ ಜನ್ಮ ತಾಳಿತು. ಇದರ ಸಾಕಾರರೂಪವೇ 'ವಿಶ್ವಭಾರತಿ'ಯ ಆಶಯ. ಇದೊಂದು ವಿಶ್ವದ ವಿದ್ವನ್ಮಣಿಗಳ ಬೌದ್ಧಿಕ ಕೇಂದ್ರ, ಅಂತರರಾಷ್ಟ್ರೀಯ ಆದರ್ಶ ವಿದ್ಯಾಕೇಂದ್ರ. ವಿಶ್ವದ ಪ್ರತಿಭಾವಂತ ವಿದ್ಯಾರ್ಥಿಗಳೆಲ್ಲ ಇಲ್ಲಿ ವಿಶ್ವಪ್ರೇಮ-ವಿಶ್ವಭ್ರಾತೃತ್ವದ ಅನುಬಂಧದಲ್ಲಿ ಪರಸ್ಪರ ಕೂಡಿ ಅರ್ಥಪೂರ್ಣವೂ ಸದುದ್ದೇಶವೂ ಆದ ಮಾನವ ಶ್ರೇಯೋಭಿವೃದ್ಧಿಯನ್ನು ಸಾಧಿಸುವ ವಿಶ್ವವೇದಿಕೆ ಇದು. 'ಇಂದು ಎದುರಾಗುತ್ತಿರುವ ಅಂತರಾಷ್ಟ್ರೀಯ ಸಮಸ್ಯೆಗಳನ್ನು ಪರಿಹರಿಸಲು ಅಂತರರಾಷ್ಟ್ರೀಯ ಮನೋಭಾವನೆ ಬೇಕಾಗುತ್ತದೆ. ಅಂತಹ ಪ್ರಜ್ಞೆಯನ್ನು ಮೂಡಿಸುವ ಜವಾಬ್ದಾರಿ ಆಧುನಿಕ ಶಿಕ್ಷಕ ಮತ್ತು ಶಿಕ್ಷಣ ಪದ್ಧತಿಯಾಗಿದೆ' ಎಂದು ರವೀಂದ್ರನಾಥರು ಈ ತಮ್ಮ ವಿಶ್ವಭಾರತಿಯ ಧ್ಯೇಯೋದ್ದೇಶವನ್ನು ಪ್ರತಿಪಾದಿಸುತ್ತಾರೆ.

ರವೀಂದ್ರನಾಥ ಠಾಕೂರರು "ವಿಶ್ವವಿದ್ಯಾಲಯ ಒಂದು ಮೆದುಳಿನ ಕೇಂದ್ರದಂತೆ, ದೇಹದ ಸರ್ವಾಂಗಕ್ಕೂ ಅದರ ಜೀವಂತ ಸಂಪರ್ಕ ಏರ್ಪಡಬೇಕು. ಸಮಾಜ ಅಂತಹ ಒಂದು ಅವಯುವ. ಅದರ ಕೇಂದ್ರವೂ ಹೃದ್ಭೂಮಿಯೂ ಆಗುವಂತೆ ಅಲ್ಲಿನ ವಿದ್ಯಾಭ್ಯಾಸ ರಚಿತವಾಗಬೇಕು"[೧೨] ಎಂಬುದಾಗಿ ವಿಶ್ವವಿದ್ಯಾನಿಲಯಗಳ ಪರಿಕಲ್ಪನೆಯ ಬಗ್ಗೆ ಹೇಳಿದ್ದಾರೆ.

ರವೀಂದ್ರರ ವಿಶ್ವಭಾರತೀಯ ಧ್ಯೇಯವಾಕ್ಯ "ಯತ್ರ ವಿಶ್ವಂ ಭವತಿ ಏಕ ನೀಡಂ"-(Where the world meets at one place) ಎಂದು ಪೂರ್ವ-ಪಶ್ಚಿಮಗಳನ್ನು ಒಗ್ಗೂಡಿಸಿ ವಿಶ್ವಶ್ರೇಯಸ್ಸನ್ನು ಸಾಧಿಸಬಯಸಿದರು. ಚೀನಾದ ತಾನ್-ಯುನ್-ಶಾನ್ ವಿಶ್ವಭಾರತಿಯನ್ನು ಕುರಿತು, 'ಇದು ಮಾನವ ಸಂಸ್ಕೃತಿ ಹಾಗೂ ನಾಗರಿಕತೆಗಳ ಕೇಂದ್ರ' ಎಂದರೆ, ಮತ್ತೆ ಕೆಲವರು 'ಇದು ಶಿಕ್ಷಣ, ಕಲೆ, ಸಂಸ್ಕೃತಿಯ ಅಂತರರಾಷ್ಟ್ರೀಯ ಕೇಂದ್ರ' ಎಂದಿದ್ದಾರೆ. ಜವಹರಲಾಲ್ ನೆಹರು ಅವರು "ಉಳಿದ ಎಲ್ಲ ವಿಶ್ವವಿದ್ಯಾಲಯಗಳಿಗೂ ವಿಶ್ವಭಾರತಿಗೂ ಇರುವ ಮುಖ್ಯ

---

೧೨. ರವೀಂದ್ರ ಪ್ರಶಸ್ತಿ, ಸಂ. ಮಾಸ್ತಿ ವೆಂಕಟೇಶ ಅಯ್ಯಂಗಾರ್, ಪುಟ ೧೨೦.

ಅಂತರವೆಂದರೆ, ವಿಶ್ವಭಾರತಿಯ ಹಿಂದೆ ಇರುವ ಅದರ ನಿರ್ಮಾಪಕನಾದ ನಮ್ಮ ಕಾಲದ ಮಾನವ ಜನಾಂಗದಲ್ಲಿಯೇ ಬಹುದೊಡ್ಡ ವ್ಯಕ್ತಿಯ ವ್ಯಕ್ತಿತ್ವ, ಈ ಸಂಸ್ಥೆಯ ಶಿಕ್ಷಣದಲ್ಲಿ ಬಹು ಮಹತ್ವದ ಅಂಶಗಳಾದ ಕಲೆ, ಸಂಗೀತ ಹಾಗೂ ನೃತ್ಯಕ್ಕೆ ಬಹಳ ಹೆಚ್ಚಿನ ಪ್ರಾಶಸ್ತ್ಯವನ್ನೀಯಲಾಗಿದೆ. ಜಗತ್ತಿನ ಯಾವ ಶಿಕ್ಷಣ ಸಂಸ್ಥೆಯೂ ಈ ರೀತಿಯ ಮೇಧಾವಿಗಳನೇಕರ ವ್ಯಕ್ತಿತ್ವದ ವರ್ಚಸ್ಸಿನಿಂದ ರೂಪಿಸಲ್ಪಟ್ಟಿರಕ್ಕಿಲ್ಲ"[೧೩] ಎಂದಿದ್ದಾರೆ.

ಸಾಹಿತ್ಯ, ಸಂಗೀತ, ಚಿತ್ರಕಲೆ ಈ ಮೂರು ರವೀಂದ್ರನಾಥ ಠಾಕೂರರ ಸೃಜನಾಭಿವ್ಯಕ್ತಿಯ ಪ್ರಮುಖ ಕ್ಷೇತ್ರಗಳು, ರವೀಂದ್ರನಾಥ ಠಾಕೂರರ ಬದುಕಿನ ಕಡೆಯಲ್ಲಿ ಅರಳಿದ್ದು ಚಿತ್ರಕಲೆ. ಅವರು ಹದಿನಾರನೇ ವಯಸ್ಸಿನವರಾಗಿರುವಾಗಲೇ ಇಂಗ್ಲೆಂಡ್ ಪ್ರವಾಸ ಸಂದರ್ಭದಲ್ಲಿ ಅಲ್ಲಿಯ ಹೆಸರಾಂತ ಟರ್ನರ್ ಅವರ ಲ್ಯಾಂಡ್‌ಸ್ಕೇಪ್ ಚಿತ್ರಗಳಿಂದ ಪ್ರಭಾವಿತಗೊಂಡಿದ್ದರು; ಪಾಶ್ಚಾತ್ಯ ಚಿತ್ರಕಲಾ ನಿಪುಣ ಮುಕುಲ್ ಡೇ ಅವರ ಚಿತ್ರವಿನ್ಯಾಸಗಳಂತೆ ಕಾಲ-ದೇಶ ಸಮನ್ವಯಿಸುವ ಕಲೆ ಕಲಿತರು.

ರವೀಂದ್ರರ ಸಂಗೀತ, ರವೀಂದ್ರರ ಚಿತ್ರಕಲೆ ಎಂಬ ಪ್ರಕಾರಗಳು ಒಂದು ಹೊಸ ಪರಂಪರೆಯನ್ನೇ ಸೃಷ್ಟಿಸಿತು. ಚಿತ್ರಕಲೆಗೆ ಅನಂತರ ಅಲ್ಲಿಯ ದೊಡ್ಡ ಹೆಸರು ನಂದಲಾಲ್ ಬೋಸ್. ಸಹಜಾಭಿವ್ಯಕ್ತಿ ರವೀಂದ್ರನಾಥರ ಚಿತ್ರಕಲೆಯ ಪ್ರಮುಖ ಲಕ್ಷಣ. ಆಡಂಬರವಿಲ್ಲದೆ ದುಬಾರಿ ಬಣ್ಣದ ಮತ್ತು ಪೆನ್ನಿಗಿಂತ ಸಾಧಾರಣ ಪೆನ್ನು, ಕುಂಚಕ್ಕೆ ಬದಲು ಬಟ್ಟೆ, ಬಣ್ಣಕ್ಕೆ ಬದಲು ಹೂ, ಮರದ ರಸ, ಕೊಬ್ಬರಿ ಎಣ್ಣೆ ಮುಂತಾದ ಸರಳ ಹಾಗೂ ಸಾಮಾನ್ಯವಾದ ಪದಾರ್ಥಗಳನ್ನೇ ಬಳಸಿಕೊಂಡು ಸಹಜ ಸೌಂದರ್ಯದ ಹೊಳಪನ್ನು ಚಿತ್ರಕಲೆಯಲ್ಲಿ ಹೊಮ್ಮಿಸುತ್ತಿದ್ದರು. ಅಲ್ಲದೆ ಸಾಮಾನ್ಯ ಹಳ್ಳಿಗರು, ಪ್ರಾಕೃತಿಕ ವಸ್ತುಗಳೇ ರವೀಂದ್ರನಾಥರ ವಸ್ತು-ವಿಷಯವಾಗುತ್ತಿದ್ದವು. ಅವರು ಕರ್ನಾಟಕದ ಮೈಸೂರು, ಶ್ರವಣಬೆಳಗೊಳ, ಬೇಲೂರು, ಹಳೇಬೀಡುಗಳಂಥ ಕಲಾಸ್ಮಾರಕಗಳನ್ನು, ಚಿತ್ರಗಳನ್ನು ಕೊಂಡಾಡಿದರು. ಕರ್ನಾಟಕದ ಕಲಾವಿದ ವೆಂಕಟಪ್ಪ ತನ್ನ ಪ್ರತಿಭೆಯನ್ನು ಕಂಡುಕೊಂಡದ್ದು ಈ ಚಿತ್ರಶಾಲೆಯಲ್ಲಿಯೇ.

ರವೀಂದ್ರನಾಥ ಠಾಕೂರರು ಒಳ್ಳೆಯ ಹಾಡುಗಾರರೂ ಆಗಿದ್ದರು. ಚಿಕ್ಕಂದಿನಲ್ಲೇ ಸಂಗೀತ ಅವರಿಗೆ ಹವ್ಯಾಸವಾಗಿತ್ತು. ಸಂಗೀತದ ವಿಶೇಷತೆಯ ಬಗೆಗೆ ಠಾಕೂರರು ವಿವರಣೆ ನೀಡುತ್ತ – "ಸಂಗೀತ ಶಾಸ್ತ್ರಕ್ಕೆ ಸ್ವಂತದ್ದೇ ಆದ ಒಂದು ವಿಶೇಷ ಪ್ರಕೃತಿ ಮತ್ತು ವಿಶೇಷ ಕೆಲಸ ಇದೆ. ಹಾಡಿನಲ್ಲಿ ಸಾಹಿತ್ಯವಿರುವಾಗ ಸಾಹಿತ್ಯದ ಔಚಿತ್ಯವಾಗದು....... ಯಾವೆಡೆಯಲ್ಲಿ ಮುಗಿಯುವುದೋ ಅಲ್ಲೇ ಸಂಗೀತ ಆರಂಭ"[೧೪] ಎಂದು ನಿದರ್ಶನಕ್ಕೆ 'ಹಿಂದೂಸ್ತಾನಿ' ಸಂಗೀತವನ್ನು ಸೂಚಿಸುತ್ತಾರೆ. ಆದರೆ ಬಂಗಾಲಿಯ ಪದಾವಲಿ, ಕೀರ್ತನೆಗಳಲ್ಲಿ ಸಾಹಿತ್ಯವೇ ಪ್ರಧಾನವಾಗಿ, ಶುದ್ಧ ಸಂಗೀತದ

---

೧೩. ರವೀಂದ್ರ ಪ್ರಶಸ್ತಿ, ಸಂ. ಮಾಸ್ತಿ ವೆಂಕಟೇಶ ಅಯ್ಯಂಗಾರ್, ಪುಟ ೧೪೨.

೧೪. ಬಾಳ ನೆನಹು, ಅನು : ಸ್ವಾಮಿ ಶಂಕರಾನಂದ ಸರಸ್ವತಿ, ಪುಟ ೨೦೩-೨೦೪.

ಕಲರವ ಕಡಿಮೆ ಎಂಬುದು ರವೀಂದ್ರನಾಥರ ಅಭಿಪ್ರಾಯ. ರವೀಂದ್ರನಾಥರ ಸಂಗೀತದಲ್ಲಿ ಸಂಗೀತ-ಸಾಹಿತ್ಯ ಸಮನ್ವಯ ಸಾಧಿಸಿವೆ.

### ೫.೬. ಪಾಶ್ಚಾತ್ಯ ಶಿಕ್ಷಣದ ಸಂಪರ್ಕ ಮತ್ತು ವೈಚಾರಿಕತೆ

ರವೀಂದ್ರರ ಅಣ್ಣ ಸತ್ಯೇಂದ್ರನಾಥ ಠಾಕೂರರು ಇಂಡಿಯನ್ ಸಿವಿಲ್ ಸರ್ವೀಸ್ (I.C.S.) ಪರೀಕ್ಷೆ ಪಾಸು ಮಾಡಿದ ಮೊದಲ ಭಾರತೀಯ ಅಧಿಕಾರಿಯಾಗಿ ಇಂಗ್ಲೆಂಡಿನಲ್ಲಿ ಸಂಸಾರ ಸಹಿತ ನೆಲೆಸಿದ್ದರು. ಅವರು ಅಲಹಾಬಾದಿನ ನ್ಯಾಯಾಧೀಶರಾಗಿದ್ದಾಗ ಅವರ ಒಂಟಿತನದ ವಾಸದ ಜೊತೆಗೆ ರವೀಂದ್ರರು ಸೇರಿದರು. ಆ ಐತಿಹಾಸಿಕ ಭವ್ಯ ಸ್ಮಾರಕಗಳ ಪ್ರಶಾಂತತೆಯಲ್ಲಿ ರವೀಂದ್ರರ 'ಹಸಿದ ಕಲ್ಲುಗಳು' ಕತೆ ಹುಟ್ಟಿತು.

ಅಹಮದಾಬಾದಿನಿಂದ ಇಂಗ್ಲೆಂಡಿಗೆ ರವೀಂದ್ರರು ವಿದ್ಯಾಭ್ಯಾಸಕ್ಕೆಂದು ೧೮೭೮ರಲ್ಲಿ ಹಡಗಿನಲ್ಲಿ ಪ್ರಯಾಣ ಬೆಳೆಸಿದರು. ಉತ್ತರ ಭಾರತದ ಪ್ರವಾಸ ರವೀಂದ್ರರಿಗೆ ಅಂತಹ ವಿಶೇಷ ಕಾಣಲಿಲ್ಲ; ಆದರೆ ಇಂಗ್ಲೆಂಡ್ ಪ್ರವಾಸ ಅವರಿಗೆ ಹೊಸ ಜಗತ್ತನ್ನೇ ತೆರೆಸಿತು. ಅಲ್ಲಿಯ ಶಾಲೆ ಸೇರಿ ಬಹುಬೇಗ ವಿದ್ಯಾರ್ಥಿಗಳು, ಉಪಾಧ್ಯಾಯರು, ಜನಜೀವನದ ಸಂಗಡ ಬೆರೆಯಲಾರಂಭಿಸಿದರು. ಲಂಡನ್ ವಿಶ್ವವಿದ್ಯಾಲಯ ಸೇರುವಾಗ ಪ್ರತಿಭಾವಂತ ಬಂಗಾಲಿ ಗೆಳೆಯ ಲೋಕೆನ್ ಪಾಲಿತ್ ಒಡಗೂಡಿ ಅನಿವಾರ್ಯವಾಗಿ 'ಲ್ಯಾಟಿನ್' ಕಲಿತರು. ಅಲ್ಲಿ ಐರೋಪ್ಯ ಸಾಹಿತ್ಯ, ಭಾಷಾಶಾಸ್ತ್ರವನ್ನು ಅಭ್ಯಾಸ ಮಾಡಿದರು. ಠಾಕೂರರು ಐರೋಪ್ಯ ಸಂಗೀತವನ್ನೂ ಅಧ್ಯಯನ ಮಾಡಿದರು. ಇಂಗ್ಲೆಂಡಿನಲ್ಲಿ ರವೀಂದ್ರನಾಥರಲ್ಲಿ ಭಾರತೀಯತ್ವ-ಆಂಗ್ಲತ್ವಗಳು, ಪೂರ್ವ-ಪಶ್ಚಿಮಗಳ ಪ್ರಾತಿನಿಧಿಕವಾಗಿ ವಿಶ್ವಮಾನವ ವ್ಯಕ್ತಿತ್ವ - ರವೀಂದ್ರ ಸಾಹಿತ್ಯದಂತಹ ವಿಶ್ವಸಾಹಿತ್ಯ ರಚನೆಯಾಗಲು ಸಾಧ್ಯವಾಯಿತು. ರವೀಂದ್ರನಾಥರ ಮಾತಿನಲ್ಲೇ ಹೇಳುವುದಾದರೆ 'ರಸಾಯನಶಾಸ್ತ್ರದಲ್ಲಿ ಯಾವುದನ್ನು ಮಿಶ್ರಣ ಎಂದು ಕರೆಯುತ್ತಾರೊ ಅದರ ಸೃಷ್ಟಿಯಂತೆ ವಿದೇಶಿ ಕಾರ್ಖಾನೆಯಲ್ಲಿ ನನ್ನ ವ್ಯಕ್ತಿತ್ವದ ರಚನೆಯಾಯಿತು... ಮೂರು ತಿಂಗಳು ಮಾತ್ರ ವಿದ್ಯಾಭ್ಯಾಸ ಮಾಡಿದೆ. ಆದರೆ ನನ್ನ ವಿದೇಶದ ಶಿಕ್ಷಣವನ್ನೆಲ್ಲಾ ಜನಗಳ ಜೊತೆ ಓಡಾಡಿ ಕಲಿತೆ... ಬ್ಯಾರಿಸ್ಟರಾಗದಿದ್ದರೂ ಪೂರ್ವ-ಪಶ್ಚಿಮಗಳ ಸ್ನೇಹಮಿಲನವು ನನ್ನ ಸ್ವಂತ ಹೃದಯದಲ್ಲೇ ನಡೆಯಿತು. ನನಗೆ ಇಟ್ಟ ಹೆಸರಿನ ಅರ್ಥವನ್ನು ನನ್ನ ಬದುಕಿನಲ್ಲಿ ಸಾರ್ಥಕ ಮಾಡಿಕೊಂಡೆ' ಎಂದಿದ್ದಾರೆ.

ರವೀಂದ್ರನಾಥರ ವಿಶಾಲ ದೃಷ್ಟಿ-ಚಿಂತನೆ ಯಾವಾಗಲೂ ಮನುಕುಲದ ಕಲ್ಯಾಣಕರಕ್ಕಾಗಿಯೇ ಮೀಸಲಾಗಿತ್ತು. ಪಾಶ್ಚಾತ್ಯರ ಪುನರುಜ್ಜೀವನದಿಂದ ವಿಜ್ಞಾನ, ವಿಚಾರ, ತಂತ್ರಜ್ಞಾನ, ಶಿಕ್ಷಣ, ಔದ್ಯೋಗೀಕರಣ ಕ್ಷೇತ್ರಗಳಲ್ಲಿ ಕ್ರಾಂತಿಕಾರಕ ಬೆಳವಣಿಗೆಗಳಾಗಿ ಆಮೂಲಾಗ್ರ ಸಾಮಾಜಿಕ ಪ್ರಗತಿಗೆ ನೆರವಾದುದನ್ನು ಕಂಡ ರಾಜರಾಮ ಮೋಹನರಾಯ, ಠಾಕೂರರಂಥವರು ತಮ್ಮ ವಿಶ್ವದೃಷ್ಟಿಯಿಂದ ಭಾರತೀಯ ಕಂದಾಚಾರವನ್ನು ಬಿಟ್ಟು ವೈಚಾರಿಕತೆ ದೃಷ್ಟಿ ಬೆಳೆಸಿಕೊಳ್ಳಲು ಕರೆಯಿತ್ತರು. ರವೀಂದ್ರನಾಥರಿಗೆ ಜೀವನವೇ ಸಾಕ್ಷಾತ್ ದೇವತೆಯಾಯಿತು. ಜ್ಞಾನ, ನ್ಯಾಯ, ಸತ್ಯದ ಮೇಲೆ

ವಿಶ್ವಕುಟುಂಬವನ್ನು ರೂಪಿಸುವುದೇ ಅವರ ಕನಸಾಗಿತ್ತು. ರವೀಂದ್ರನಾಥರ ಈ ಉದಾತ್ತ ವಿಶ್ವದೃಷ್ಟಿಯಲ್ಲಿ ಪೂರ್ವ-ಪಶ್ಚಿಮ ಪರಸ್ಪರ ಅರ್ಥಪೂರ್ಣವಾಗಿ ಬೆರೆತವು. ರವೀಂದ್ರ ಸಾಹಿತ್ಯ, ಶಿಕ್ಷಣ ಸಂಸ್ಥೆಗಳಲ್ಲೂ ಈ ವಿಶಾಲ ಧೋರಣೆಯನ್ನು ಆಶಯವಾಗಿ ಹೊಂದಿವೆ. ಇಡೀ ವಿಶ್ವಕ್ಕೆ ಪ್ರೇಮ, ಭ್ರಾತೃತ್ವ, ಸ್ನೇಹ, ಸಹಕಾರ, ಅಹಿಂಸೆ ಮುಂತಾದ ಮಾನವೀಯ ಮೌಲ್ಯಗಳೊಂದಿಗೆ ಮನುಕುಲವು ರಚನಾತ್ಮಕವಾದ ದುಡಿಮೆಯಲ್ಲಿ ದುಡಿಯಬೇಕೆಂದು ಹೇಳಿದರು.

ರವೀಂದ್ರನಾಥರಿಗೆ ಮಾನವತಾ ಸಿದ್ಧಾಂತದಲ್ಲಿ ಪೂರ್ವಗ್ರಹ ಇಲ್ಲದೆ ಜಾತಿ, ಮತ, ಧರ್ಮಗಳ ಎಲ್ಲೆ ಮೀರಿ ವಾಸ್ತವ ದೃಷ್ಟಿ ಮತ್ತು ಉಪಯುಕ್ತ ಚಿಂತನೆಗಳಿಂದ ಬದುಕನ್ನು ರೂಪಿಸಬೇಕೆಂಬುದು ಅವರ ಧ್ಯೇಯವಾಗಿತ್ತು. ಅದರಂತೆ ನಡೆದುಕೊಂಡರು. ಅವರ 'ನರನಾರಾಯಣ', 'ಜನತಾ ಜನಾರ್ಧನ', 'ದರಿದ್ರ ನಾರಾಯಣ', 'ಪತಿತಪಾವನ' ಮುಂತಾದ ಪರಿಕಲ್ಪನೆಗಳಲ್ಲಿ ಈ ತತ್ವ ಅಡಗಿದೆ. ರವೀಂದ್ರನಾಥರ ಮಾನವತಾವಾದವು, ಮುಕ್ತವಾದ ಆಧ್ಯಾತ್ಮಿಕ ಚಿಂತನೆಯಲ್ಲಿ ಪರಿಷ್ಕರಣಗೊಂಡು ಅವರ ಸಾಹಿತ್ಯ ವಿಚಾರದಲೆಲ್ಲಾ ಬಿಂಬಿತವಾಗಿದೆ. ಇದರ ಮೇಲೆಯೇ ಅವರ 'ಮಾನವಧರ್ಮ' ಎಂಬ ಗ್ರಂಥವೇ ರಚನೆಯಾಗಿದ್ದು, ಅದರ ಪ್ರಸ್ತಾವನೆಯಲ್ಲಿ, "ಮಾನವ ಧರ್ಮವೆನ್ನುವುದರ ಕಲ್ಪನೆ ನನ್ನ ಅಂತರಂಗದಲ್ಲಿ ಕೇವಲ ಒಂದು ತಾತ್ವಿಕ ವಿಷಯವಾಗದೆ ಒಂದು ಧಾರ್ಮಿಕ ಅನುಭವವಾಗಿ ಬೆಳೆಯುತ್ತಾ ಇದೆ."[೧೫] ಎಂಬ ಅವರ ಮಾತಿನಲ್ಲಿ ಈ ಸಿದ್ಧಾಂತ ಬೆಳೆದು ಬಂದ ರೀತಿಯನ್ನು ಕಂಡುಕೊಳ್ಳಬಹುದು.

### ೫.೭. ಸಾಮಾಜಿಕ ಹೋರಾಟ

ಬಂಗಾಳದ ಜನಜೀವನ ಪರಂಪರೆಯು ಏರುಪೇರಿನ ವೈಪರೀತ್ಯಗಳ ಸುಳಿಯೊಳಗೆ ಸ್ಥಿತ್ಯಂತರಗೊಳ್ಳುತ್ತಾ ಸಾಗಿತ್ತು. ಆ ತನಕ ಬಂಗಾಳಿಗಳು ಮುಸ್ಲಿಂ ನವಾಬರ ಆಳ್ವಿಕೆಯಲ್ಲಿ ಬಳಲಿ-ಬೇಸತ್ತಿದ್ದರು. ಮತ್ತೆ ಬ್ರಿಟೀಷರು ಬಂಗಾಳವನ್ನು ಆಕ್ರಮಿಸಿ ಇನ್ನೂ ಅಜ್ಞಾನ, ಬಡತನ, ಅಸ್ಥಿರತೆ, ಆತಂಕದ ಸ್ಥಿತಿಗೆ ದೂಡಿದರು. ಇಂತಹ ಸಂದಿಗ್ಧ ಸಂಕ್ರಮಣಾವಸ್ಥೆಯಲ್ಲಿ ರಾಜಾರಾಮ ಮೋಹನರಾಯರಂಥ ವಿಚಾರವಾದಿ, ಸುಧಾರಕ ಬಂಗಾಳದಲ್ಲಿ ಹುಟ್ಟಿಬಂದರು. ಇಂಗ್ಲಿಷ್ ಕಲಿಸಿ ಬಂಗಾಳಿಗಳ ಕಣ್ಣು ತೆರೆಸಿ ಪಾಶ್ಚಾತ್ಯರ ಉದಾತ್ತ ವಿಚಾರಗಳನ್ನು ಸ್ವೀಕರಿಸುವಂತೆ ; ತಮ್ಮ ಧರ್ಮ, ಸಮಾಜ, ಸಂಸ್ಕೃತಿಯ ಮೌಢ್ಯ-ಓರೆಕೋರೆಗಳನ್ನು ತಿದ್ದಿಕೊಳ್ಳುವಂತೆ ರಾಜಾರಾಮ್ ಮಾಡಿದರು. ಇವರು ಸ್ಥಾಪಿಸಿದ 'ಬ್ರಹ್ಮಸಮಾಜ' ಸೇರಿಕೊಂಡು ದೇವೇಂದ್ರನಾಥ ಠಾಕೂರ್, ರವೀಂದ್ರನಾಥ ಠಾಕೂರ್ ಬಂಗಾಳದಲ್ಲಿ ಅಪ್ಪ-ಮಗ ಜಾಗೃತಿ ಮೂಡಿಸುವ ಕೆಲಸ ಮಾಡಿದರು.

ಬಂಗಾಳಿ ಸಾಹಿತ್ಯ ಪರಿಷತ್ತನ್ನು ಕಟ್ಟಿ ಬಂಗಾಳಿ ಭಾಷೆ, ಸಾಹಿತ್ಯ, ಸಮಾಜದ ಬೆಳವಣಿಗೆಗೆ ನೆರವಾದರು. ಬಂಗಾಳ ನಾಡು ಒಂದು ಸ್ವಯಂ ಸಮೃದ್ಧ ಮಾದರಿ ನಾಡಾಗಲು ಹಳ್ಳಿ ಹಳ್ಳಿಗರೆಲ್ಲರ ಉದ್ಧಾರಕ್ಕೆ ಶ್ರಮಿಸಿದರು. ರಾಷ್ಟ್ರಪ್ರೇಮ, ಸ್ವಾತಂತ್ರ್ಯ ಚಳವಳಿಗಳ ಬಗೆಗೆ ಬಂಕಿಮಚಂದ್ರ,

---
೧೫. ಮಾನವತಾ ಸಿದ್ಧಾಂತ, ಸಂ. ಕುವೆಂಪು, ಪುಟ ೬

ಗಾಂಧೀಜಿವರಿಗಿಂತ ಭಿನ್ನ ಧೋರಣೆ ತಳೆದು ಬಂಗಾಳಿಗಳಿಗೆ ಅವುಗಳ ಅರ್ಥವ್ಯಾಪ್ತಿಯನ್ನು ತಿಳಿಸಲು ರಾಜಕೀಯದಲ್ಲೂ ಕ್ರಿಯಾಶೀಲವಾಗಿ ತೊಡಗಿಕೊಂಡರು. ಗಾಂಧೀಜಿಯವರ ಅಸ್ಪೃಶ್ಯತಾ ನಿವಾರಣಾ ನೀತಿಯನ್ನು ಹಾರ್ದಿಕವಾಗಿ ಬೆಂಬಲಿಸಿದರು. ಜಲಿಯನ್ ವಾಲಾಬಾಗ್ ಹತ್ಯಾಕಾಂಡದಂಥ ದೌರ್ಜನ್ಯವನ್ನು ಬೀದಿಗಿಳಿದು ಉಗ್ರವಾಗಿ ಪ್ರತಿಭಟಿಸಿದರು. ಬ್ರಿಟಿಷರಿತ್ತ 'ನೈಟ್' ಪದವಿಯನ್ನು ಬ್ರಿಟಿಷರಿಗೇ ಹಿಂದಿರುಗಿಸಿದರು. ಭಾರತದ ಸ್ವಾತಂತ್ರ್ಯಕ್ಕಾಗಿ ಸಾಹಿತ್ಯ ರಚನೆ ಮತ್ತು ಹೋರಾಟದ ಮೂಲಕ ಶ್ರಮಿಸಿದರು.

ಉತ್ತರ ಭಾರತದ ಪ್ರಾದೇಶಿಕ ಭಾಷೆಗಳು ಹಿಂದಿ, ಇಂಗ್ಲಿಷ್ ಹೇರಿಕೆಯಿಂದ ಸ್ವಂತ ಅಸ್ತಿತ್ವವನ್ನೇ ಮರೆಯುತ್ತಿದ್ದವು. ಅಂತದ್ದರಲ್ಲಿ ಬಂಗಾಳಿ ಭಾಷೆಗೆ ರವೀಂದ್ರನಾಥರು ವಿಶೇಷ ಸ್ಥಾನಮಾನ ಕಲ್ಪಿಸಿಕೊಟ್ಟರು. ಅವರ ಮಾತೃಭಾಷಾ ಅಭಿಮಾನದ ಪ್ರತೀಕಕ್ಕೆ ಸಾಕ್ಷಿ ಇದು.

ಚಿಕ್ಕಂದಿನಿಂದಲೂ ಇಂಗ್ಲಿಷ್, ಸಂಸ್ಕೃತ, ಲ್ಯಾಟಿನ್ ಇತ್ಯಾದಿಯಾಗಿ ನಾನಾ ಭಾಷೆಗಳನ್ನು ಕಲಿಯುವ ಅವಕಾಶ ಕಲ್ಪಿಸಿಕೊಟ್ಟಿದ್ದರೂ ಅವರು ಇಂಗ್ಲೆಂಡಿಗೆ ಹೋದಾಗ ಇಂಗ್ಲಿಷ್ ಅವರಿಗೆ ಪರಭಾಷೆಯಾಗಿಯೇ ಇತ್ತು. ತಾಯಿನುಡಿಯಷ್ಟು ಆಪ್ಯಾಯಮಾನವಾಗಿ ಸಹಜ ಉತ್ಸಾಹದಿಂದ ಕಲಿಯುವಂತೆ ಯಾವ ಬೇರೆ ಭಾಷೆಯೂ ರವೀಂದ್ರನಾಥರಿಗೆ ಪ್ರೇರಣೆ ನೀಡಲಿಲ್ಲ. ಆದುದರಿಂದಲೇ ಅವರ ಶಾಂತಿನಿಕೇತನ ಶಾಲೆಯಲ್ಲಿ ಪ್ರೌಢಶಾಲೆಯವರೆವಿಗೂ ಬಂಗಾಳಿ ಭಾಷೆಯಲ್ಲೇ ಬೋಧಿಸಲಾಗುತ್ತಿತ್ತು. ಇಂಗ್ಲಿಷ್ ಎರಡನೆಯ ಭಾಷೆಯಾಗಿ ಕಲಿಸಲಾಗುತ್ತಿತ್ತು. ಬಂಗಾಳದ ಸಾರ್ವಜನಿಕ ಸಭೆ ಸಮಾರಂಭಗಳು ಬಂಗಾಳಿಯಲ್ಲೇ ನಡೆಯಬೇಕೆಂದು ಕರೆ ನೀಡಿದರು. ಕಲ್ಕತ್ತ ಘಟಿಕೋತ್ಸವದಲ್ಲಿ ಮೊದಲಿಗೆ ಬಂಗಾಳಿಯಲ್ಲಿ ಭಾಷಣ ಮಾಡಿ, ಬಂಗಾಳಿಗೆ ಪ್ರಥಮ ಪ್ರಾಶಸ್ತ್ಯ ನೀಡುವಂತೆ ನೋಡಿಕೊಂಡರು. ಅಂತೆಯೇ ಭಾರತದ ಇತರ ಪ್ರಾದೇಶಿಕ ರಾಜ್ಯಗಳು ತಮ್ಮ ಭಾಷೆಯಿಂದಲೇ ಆಡಳಿತ, ವ್ಯವಹಾರ ನಡೆಸಲಾರಂಭಿಸಿ ಮಾತೃಭಾಷೆಗೆ ಗೌರವ–ಪ್ರಾಮುಖ್ಯತೆ ನೀಡಲಾರಂಭಿಸಿದವು. ಮಹಾತ್ಮಾ ಗಾಂಧೀಜಿಯವರ ಹದಿಮೂರು ಅಂಶಗಳ ಪಟ್ಟಿಯಲ್ಲಿ 'ಮಾತೃಭಾಷೆ ಪ್ರೇಮ'ವೂ ಒಂದಾಗಿತ್ತು. ಆ ತನಕ ಪ್ರಾದೇಶಿಕ ಭಾಷೆಗಳು ಗ್ರಂಥಸ್ಥವಾಗಿ ಮಾತ್ರವೇ ನೆಲೆ ನಿಂತು ಹೆಸರು ಮಾಡುತ್ತಿದ್ದವುಗಳು, ಬಂಗಾಳಿ ಭಾಷೆಯಂತೆಯೇ ಬಳಕೆ ಮತ್ತು ಅಭಿವೃದ್ಧಿಯಲ್ಲಿಯೂ ಭಾರತದ ಪ್ರಾದೇಶಿಕ ಭಾಷೆಗಳು ಜೀವಂತ ವಿಕಾಸ ಮತ್ತು ಸಮೃದ್ಧಿ ಸಾಧಿಸಿದವು.

ರವೀಂದ್ರನಾಥ ಠಾಕೂರರು, "..... ಬಂಗಾಳಿಯಲ್ಲಿ ಪುಸ್ತಕದ ಭಾಷೆ ಕ್ರಮೇಣ ಮಾತುಕತೆಯ ಭಾಷೆಯ ಕಡೆಗೆ ಇಳಿಯುತ್ತಿದೆ; ಮಾತುಕತೆಯ ಭಾಷೆ ಮೆಲ್ಲಮೆಲ್ಲನೆ ಗ್ರಂಥದ ಭಾಷೆಯತ್ತ ಏರುತ್ತಿದೆ..."[೧೬] ಎಂದು ಬಂಗಾಳ ಭಾಷೆಯ ಜೀವಂತ ಮಿಡಿತವನ್ನು, ವಿಕಾಸದ ಗತಿಯನ್ನು ಗುರುತಿಸಿದ್ದಾರೆ. ಬಂಗಾಳಿ ಭಾಷೆ, ಸಾಹಿತ್ಯ, ಸಂಗೀತಕ್ಕೆ ರವೀಂದ್ರನಾಥರದ್ದು ಅನನ್ಯ ಕೊಡುಗೆ.

---

೧೬. ಬಾಳ ನೆನಹು, ಅನು. ಸ್ವಾಮಿ ಶಂಕರಾನಂದ ಸರಸ್ವತಿ, ಪುಟ ೨೬.

ತಮ್ಮ ಸೃಜನಶೀಲತೆಗಿಂತ ದೇಶದ ಹೋರಾಟ ಮುಖ್ಯವೆಂದು ಸ್ವಾತಂತ್ರ ಚಳವಳಿಯಲ್ಲಿ ಕ್ರೀಯಾಶೀಲ ಹೋರಾಟಕ್ಕಿಳಿದರು. ಆದರೆ ಸ್ವದೇಶಿ ಚಳವಳಿ ಬ್ರಿಟೀಷರ ರಾಜಕೀಯ ದಬ್ಬಾಳಿಕೆಯ ವಿರುದ್ಧ ಹೋರಾಡುವುದನ್ನು ಬಿಟ್ಟು, ವಿದೇಶಿ ವಸ್ತುಗಳನ್ನು ಸುಡುವುದು ಆರ್ಥಿಕ ಮತ್ತು ವೈಚಾರಿಕ ದೃಷ್ಟಿಯಿಂದ ಮೂರ್ಖತನದ ಪ್ರತೀಕವೆಂದು ಭಾವಿಸಿ, ಗಾಂಧೀಜಿಯವರ ಅಸಹಕಾರ ಚಳುವಳಿಗೆ ತಮ್ಮ ಬೆಂಬಲವನ್ನು ಹಿಂತೆಗೆದರು. ಸ್ವಾತಂತ್ರ್ಯ ಪರಿಕಲ್ಪನೆ ರವೀಂದ್ರನಾಥರಲ್ಲಿ ವಿಶಾಲ ಅರ್ಥವ್ಯಾಪ್ತಿ ಪಡೆದಿತ್ತು. 'ಸ್ವಾತಂತ್ರ್ಯವೆನ್ನುವುದು ರಾಷ್ಟ್ರೀಯ ಜೀವನವೆಂಬ ವೃಕ್ಷದಲ್ಲಿ ಸಕಾಲದಲ್ಲಿ ಬರುವ ಹೂ. ಅದು ಮರಕ್ಕೆ ತಗುಲು ಹಾಕುವ ಲಾಂದ್ರವಲ್ಲ' ಎಂಬುದು ರವೀಂದ್ರನಾಥರ ಅಭಿಪ್ರಾಯವಾಗಿತ್ತು. ರಾಷ್ಟ್ರಪ್ರೇಮ ವಿಶ್ವಪ್ರೇಮಕ್ಕೆ ಧಕ್ಕೆಯಾಗಬಾರದೆಂದರು. ರಾಷ್ಟ್ರದ ಸಮಗ್ರತೆ, ಸಾರ್ವಭೌಮತೆ ಹಾಗೂ ರಾಷ್ಟ್ರದ ಜನತೆಗೆ ಧಕ್ಕೆಯಾದರೆ ಸೌಮ್ಯವಾದಿ ಠಾಕೂರರು ಕ್ರಾಂತಿಕಾರರಾಗಿಬಿಡುತ್ತಿದ್ದರು. ಬಂಗಾಳ ವಿಭಜನೆಯಾದಾಗ ಬ್ರಿಟಿಷರ ಒಡೆದು ಆಳುವ ನೀತಿಯನ್ನು ಖಂಡಿಸುತ್ತಾ ಬಂಗಾಳದ ಪುನರ್ ಐಕ್ಯತೆಗೆ ನಾಂದಿ ಹಾಡಿದರು.

## ೫.೮. ಕನ್ನಡದಲ್ಲಿ ರವೀಂದ್ರನಾಥ ಠಾಕೂರರ ಸಾಹಿತ್ಯದ ಔಚಿತ್ಯ ಮತ್ತು ಕರ್ನಾಟಕದ ಒಡನಾಟ

ಕನ್ನಡದಲ್ಲಿ ರವೀಂದ್ರನಾಥ ಠಾಕೂರರ ಬಗೆಗಿನ ಪರಿಚಯಾತ್ಮಕ ಕೃತಿಗಳು, ರವೀಂದ್ರನಾಥ ಠಾಕೂರರ ಸಾಹಿತ್ಯದ ಕನ್ನಡಾನುವಾದಗಳು, ರವೀಂದ್ರರ ಬದುಕು-ಬರಹದ ಬಗೆಗಿನ ವಿದ್ವಾಂಸರ ಲೇಖನಗಳು ಪ್ರಕಟವಾಗಿ ರವೀಂದ್ರನಾಥರ ಜೀವನ ಚರಿತ್ರೆ ಹಾಗೂ ಸಾಹಿತ್ಯದ ಬಗೆಗೆ ಸಾಕಷ್ಟು ಮಾಹಿತಿ-ಜ್ಞಾನವನ್ನು ಕನ್ನಡಿಗರಿಗೆ ದೊರೆತಿರುವುದು ಸಂತಸದ ವಿಷಯ.

ರವೀಂದ್ರನಾಥ ಠಾಕೂರರು ತಮ್ಮ ಪ್ರತಿಭೆಯನ್ನು ಕವಿಯಾಗಿ, ಆಧ್ಯಾತ್ಮಿಯಾಗಿ, ವಿಚಾರವಾದಿಯಾಗಿ, ಶಿಕ್ಷಣತಜ್ಞರಾಗಿ, ಕಲಾವಿದರಾಗಿ, ಮಹಾಮಾನವರಾಗಿ ತೊಡಗಿಕೊಂಡು ಬದುಕನ್ನೇ ಒಂದು ಪ್ರಾಯೋಗಿಕ ಸಂಶೋಧನೆಯನ್ನಾಗಿ ಮಾಡಿಕೊಂಡು, ಅದರಿಂದ ತಾವು ಕಂಡುಕೊಂಡ ಸತ್ಯದರ್ಶನಗಳನ್ನು ತಮ್ಮ ಸಾಹಿತ್ಯದಲ್ಲಿ ಅಭಿವ್ಯಕ್ತಗೊಳಿಸಿದರು. ರವೀಂದ್ರನಾಥರ ಸುವಿಶಾಲ ಬದುಕು-ಚಿಂತನೆ-ಕಲೆ ಎಲ್ಲವೂ ರವೀಂದ್ರ ಸಾಹಿತ್ಯದಲ್ಲಿ ಎರಕಗೊಂಡಿದೆ. ಇಂತಹ ಅಪೂರ್ವ ಸಾಹಿತ್ಯದೊಳಗೆ ಜೀವನ ಪ್ರೀತಿ, ಕಾಯಕ ನಿಷ್ಠೆ, ನೈಜ ದೇವರ ಅಸ್ತಿತ್ವ, ಸೌಂದರ್ಯ ರಾಶಿಯೆಲ್ಲವನ್ನೂ ಬದುಕಿನಲ್ಲಿ ದಕ್ಕಿಸಿಕೊಟ್ಟು; ಜಗತ್ತಿನ ಉಜ್ವಲ ಭವಿಷ್ಯಕ್ಕೆ ಕಾರಣರಾಗಿದ್ದಾರೆ. ಪರಮಾಣು ಯುದ್ಧದ ಅಂಚಿನಲ್ಲಿರುವ ಆಧುನಿಕ ಜಗತ್ತಿಗಂತೂ ರವೀಂದ್ರ ಸಾಹಿತ್ಯ ಸಕಾಲಿಕವೂ-ಸಾರ್ವಕಾಲಿಕವೂ ಹಾಗೂ ಆಶಾದಾಯಕವೂ ಆಗಿದೆ. 'ರವೀಂದ್ರ ಸಾಹಿತ್ಯ' ಎಂಬ ಅರ್ಥವ್ಯಾಪ್ತಿಯಲ್ಲಿ ಗಂಭೀರವಾಗಿ ಪರಿಗಣಿಸಿ ರವೀಂದ್ರರ ಸಮಗ್ರ ಸಾಹಿತ್ಯವನ್ನು ಒಂದು ಭಾಷೆ ಸ್ವೀಕರಿಸಿ ಓದಿಸಿಕೊಂಡಾಗ ಆ ಜನರಿಗೆ ರವೀಂದ್ರನಾಥರಂಥ ಬಹುಮುಖ ಪ್ರತಿಭೆಯ ವಿಚಾರ-ಚಿಂತನೆಗಳ ಅರಿವಾಗುತ್ತದೆ.

ಇಂದು ಅಂತರರಾಷ್ಟ್ರೀಕರಣಗೊಳ್ಳುತ್ತಾ ವಿಶ್ವವೇ ಒಂದು ಆದರ್ಶ ಹಳ್ಳಿಯಾಗಿ ಹತ್ತಿರವಾಗುತ್ತಿರಲು ಪರಸ್ಪರ ದೇಶ-ವಿದೇಶದ ವ್ಯಕ್ತಿ, ವಿಚಾರ, ಸಾಹಿತ್ಯವನ್ನು ಪರಸ್ಪರ ಕೊಳುಕೊಡುಗೆಯ ಮುಖಾಂತರ ಪರಿಚಯಿಸಿಕೊಳ್ಳುವ ಪ್ರಕ್ರಿಯೆ ಆಧುನಿಕ ಸಮಾಜದ ಒಂದು ಅಗತ್ಯವೂ ಆಗಿದೆ. ರವೀಂದ್ರರ ಈ ಕನ್ನಡ ಭಾಷಾಂತರ ಸಾಹಿತ್ಯದ ಮೂಲಕ ಕನ್ನಡದ ಸಾಂಸ್ಕೃತಿಕ ಪರಿಸರವನ್ನು ಪರಿಭಾವಿಸುವ ಅನಿವಾರ್ಯ ಕೂಡ ಇದೆ.

ಕನ್ನಡದಲ್ಲಿ ರವೀಂದ್ರ ಸಾಹಿತ್ಯ ಇಷ್ಟೊಂದು ಆಪ್ಯಾಯಮಾನವಾಗಿ ಸ್ವೀಕೃತವಾಗಿರಲು ಪಶ್ಚಿಮ ಬಂಗಾಳ ಮತ್ತು ಕರ್ನಾಟಕ ರಾಜ್ಯಗಳ ಸಮಾನ ಸಾಹಿತ್ಯಿಕ ಹಾಗೂ ಸಾಂಸ್ಕೃತಿಕ ಲಕ್ಷಣಗಳೂ ಮುಖ್ಯ ಕಾರಣ. ಎರಡೂ ರಾಜ್ಯಗಳ ಭೌಗೋಳಿಕ ಮೇಲ್ಮೈ ಲಕ್ಷಣ ನದಿ, ಕಾಡು, ಕರಾವಳಿ ಮುಂತಾದ ಅಂಶಗಳು ಸರಿಸಮಾನವಾಗಿ ಹಂಚಿಕೆಯಾಗಿವೆ. ಇಲ್ಲಿಯ ಜನ ತಮ್ಮದೇ ಆದ ವಿಭಿನ್ನ ಸಾಂಸ್ಕೃತಿಕ ಪರಂಪರೆಯಲ್ಲಿ ಬೆಳೆದು ಬಂದವರು. ಎರಡೂ ರಾಜ್ಯಗಳ ನಡುವೆ ಸಾಂಸ್ಕೃತಿಕ ಕೊಳು-ಕೊಡುಗೆಗಳು ಪೂರಕಪ್ರಸಾರವಾಗುತ್ತ ಅಂದಿನಿಂದ ಇಂದಿನವರೆಗೂ ನಡೆಯುತ್ತಲೇ ಬಂದಿದೆ.

ರಾಜಾರಾಮ ಮೋಹನರಾಯ್, ಬಂಕಿಮಚಂದ್ರ, ಶರಶ್ಚಂದ್ರ, ರಾಮಕೃಷ್ಣಪರಮಹಂಸ, ವಿವೇಕಾನಂದ, ರವೀಂದ್ರನಾಥ ಠಾಕೂರ್, ಈಶ್ವರ್‌ಚಂದ್ರ ವಿದ್ಯಾಸಾಗರ್ ಮುಂತಾದವರ ವಿಚಾರ-ಸಾಹಿತ್ಯ ಕನ್ನಡಕ್ಕೆ ಅಪಾರವಾಗಿ ಅನುವಾದವಾಗಿ ಬಂದಿದೆ. ಕರ್ನಾಟಕದ ನರೇಗಲ್ಲ ಪ್ರಹ್ಲಾದರಾಯ, ಶ್ರೀನಾರಾಯಣ ಸಂಗಮರಂಥವರು ಶಾಂತಿನಿಕೇತನದಲ್ಲಿ ಕಲಿತವರಲ್ಲದೆ, ರವೀಂದ್ರ ಸಾಹಿತ್ಯವನ್ನು ಕನ್ನಡಕ್ಕೆ ಅನುವಾದಿಸುವ ಕಾರ್ಯಕ್ಕೆ ತೊಡಗಿದವರು. ಇಲ್ಲಿಯ ಶ್ರೇಷ್ಠ ಚಿತ್ರಕಲಾವಿದ ಕೆ. ವೆಂಕಟಪ್ಪ ಮತ್ತು ಅಳಕಂದ ಶಂಕರರಾಯ, ಎಸ್.ಎನ್.ಸ್ವಾಮಿ ಮುಂತಾದ ಕಲಾವಿದರು ಶಾಂತಿನಿಕೇತನದಲ್ಲಿ ಚಿತ್ರಕಲೆಯನ್ನು ಕಲಿತು, ಠಾಕೂರರ ಚಿತ್ರಕಲೆಯನ್ನು ಪುನರುಜ್ಜೀವನಗೊಳಿಸಿದವರು. ಬೌದ್ಧಿಕವಾಗಿ, ಭಾವನಾತ್ಮಕವಾಗಿ ಮತ್ತು ಸಾಹಿತ್ಯಕವಾಗಿ ರವೀಂದ್ರನಾಥ ಠಾಕೂರರಿಗೂ ಕನ್ನಡ, ಕರ್ನಾಟಕಕ್ಕೂ ಇರುವ ನಂಟು ಘನವಾದದ್ದು; ಕನ್ನಡದ ಸಾಂಸ್ಕೃತಿಕ ಪರಿಸರದ ಮೇಲೆ ಅವರ ಪ್ರಭಾವ ಗಾಢವಾದದ್ದು; ಪ್ರೇರಕ ಹಾಗೂ ಪೂರಕವಾದದ್ದು.

ಅಧ್ಯಾಯ – ಆರು

# ರವೀಂದ್ರನಾಥ ಠಾಕೂರರ ಗೀತಾಂಜಲಿ

೬.೧. ಗೀತಾಂಜಲಿ ಕಾವ್ಯದ ಮಹತ್ವ

೬.೨. ರವೀಂದ್ರನಾಥ ಠಾಕೂರರ ಗೀತಾಂಜಲಿಯ ಕನ್ನಡ ಅನುವಾದಗಳನ್ನು ಕುರಿತು

೬.೩. ರಾಷ್ಟ್ರಕವಿ ಕುವೆಂಪು ಮತ್ತು ರವೀಂದ್ರನಾಥ ಠಾಕೂರರ ನಡುವೆ ಇರುವ ಅನುವಾದ ಸಂಬಂಧ

೬.೪. ಕನ್ನಡ ಕವಿಗಳ ಮೇಲೆ 'ಗೀತಾಂಜಲಿ' ಕಾವ್ಯದ ಪ್ರಭಾವ

ಅಧ್ಯಾಯ - ಆರು

# ರವೀಂದ್ರನಾಥ ಠಾಕೂರರ ಗೀತಾಂಜಲಿ

## ೬.೧. ಗೀತಾಂಜಲಿ ಕಾವ್ಯದ ಮಹತ್ವ

ರವೀಂದ್ರನಾಥ ಠಾಕೂರರ ಗೀತಾಂಜಲಿ ಕ್ರಿ.ಶ.೧೯೧೩ರ ನವೆಂಬರ್ ತಿಂಗಳಲ್ಲಿ ಪ್ರಕಟಗೊಂಡು ಜಾಗತಿಕ ಸಾಹಿತ್ಯವಲಯದಲ್ಲಿ ಸಂಚಲನವುಂಟುಮಾಡಿತ್ತು. ಆ ಕಾಲದಲ್ಲಿ ಗೀತಾಂಜಲಿಗೆ ನೋಬೆಲ್ ಪಾರಿತೋಷಕ ದೊರೆತದ್ದೇ ಆ ಸಂಚಲನಕ್ಕೆ ಕಾರಣ. ಇದೇ ಮೊದಲ ಬಾರಿಗೆ ಭಾರತೀಯ ಕವಿಯೊಬ್ಬರಿಗೆ ವಿಶ್ವ ಮನ್ನಣೆ ದೊರಕಿತು.

ಕವಿ ರವೀಂದ್ರನಾಥ ಠಾಕೂರರ ಕವಿತೆಗಳನ್ನು ಇಂಗ್ಲಿಷ್‌ಗೆ ಭಾಷಾಂತರಿಸಿದವರಲ್ಲಿ ಒಬ್ಬರಾದ 'ಜೋ ವಿಂಟರ್' ಕವಿತೆಗಳನ್ನು ಗ್ರಹಿಸಿರುವ ಮಾರ್ಗ ಉತ್ತಮವಾಗಿದೆ. ಭಾರತೀಯ ತತ್ವಶಾಸ್ತ್ರದ ತಲ ಸ್ಪರ್ಶಿ ಪರಿಚಯವಿಲ್ಲದ ಆಂಗ್ಲ ಸಾಹಿತಿಯೊಬ್ಬ ಈ ಪರಿಯಲ್ಲಿ ಗ್ರಹಿಸಿರುವುದು ತುಂಬಾ ಅಭಿನಂದನೀಯವಾಗಿದೆ. "ರವೀಂದ್ರನಾಥ ಠಾಕೂರರ ಗೀತಾಂಜಲಿಯು(ಬಂಗಾಲಿ) ಒಂದು ಭಾವನಾತ್ಮಕ ಮಹಾಕಾವ್ಯದಂತೆ ರಚಿತವಾಗಿ ಜೀವಾತ್ಮನ ಪಯಣಕ್ಕಾಗಿ ಸಿದ್ಧವಾದ ರಥದಂತಿದ್ದು ಜೀವನ ಸೌಂದರ್ಯ ಹಾಗೂ ಅದು ಕೊನೆಗೊಳ್ಳುವ ಶಾಶ್ವತ ಸತ್ಯದ ಬಗ್ಗೆ ಸದಾ ಜಾಗೃತವಾಗಿರುವ ಆತ್ಮದ ನಿವೇದನೆಯಂತಿದೆ".[೧] ಕವಿ ರವೀಂದ್ರರು ಭಾರತೀಯ ತತ್ವಜ್ಞಾನದತ್ತ ಆಂಗ್ಲ ಸಾಹಿತಿಯೊಬ್ಬರನ್ನು ಸೆಳೆಯುವ ಮಟ್ಟಿಗೆ ಅಧ್ಯಾತ್ಮ ಸಾಧಕರಾಗಿ ತಮ್ಮ ದರ್ಶನಗಳನ್ನು ನೂರಾರು ಕವಿತೆಗಳ ಮೂಲಕ ಅಭಿವ್ಯಕ್ತ ಪಡಿಸಿದ್ದರು. ಆತ್ಮ-ಜೀವಾತ್ಮ-ಮೋಕ್ಷ ಇತ್ಯಾದಿ ಭಾರತೀಯ ತತ್ವಜ್ಞಾನದ ಪಾರಿಭಾಷಿಕ ಪದಗಳು ಇಂಗ್ಲಿಷರಿಗೆ ಅರ್ಥವಾದದ್ದು 'ಗೀತಾಂಜಲಿ' ಕವಿತೆಗಳ ಮೂಲಕವೇ ಎಂದರೆ ಅತಿಶಯೋಕ್ತಿಯಲ್ಲ.

ರವೀಂದ್ರನಾಥ ಠಾಕೂರರು ಬಂಗಾಳಿ ಭಾಷೆಯಲ್ಲಿ ಕವಿತೆಗಳನ್ನು ಬರೆಯುತ್ತಿದ್ದ ಕಾಲದಲ್ಲಿ ಇಂಗ್ಲಿಷ್ ತನ್ನ ಕಾವ್ಯಭಾಷೆಯನ್ನು ವಿಶ್ವಮಟ್ಟದಲ್ಲಿ ಪ್ರಸರಣಗೊಳ್ಳುತ್ತಿತ್ತು. ಭಾರತೀಯ ತತ್ವಶಾಸ್ತ್ರವನ್ನು ಇಂಗ್ಲಿಷರಿಗೆ ಮುಟ್ಟಿಸುವ ಪ್ರಯತ್ನದಿಂದ ಗೀತಾಂಜಲಿಯ ಕವಿತೆಗಳನ್ನು ತಾವೇ ಇಂಗ್ಲಿಷ್

೧. ರವೀಂದ್ರನಾಥ ಠಾಕೂರ್ 'ಗೀತಾಂಜಲಿ', ಅನು: ಜಿ.ರಾಮನಾಥಭಟ್, ಮುನ್ನುಡಿ XI, ಪ್ರಥಮ ಪರಿಷ್ಕೃತ ಮುದ್ರಣ-೨೦೦೭, ಕಾವ್ಯಾಲಯ ಪ್ರಕಾಶನ, ಮೈಸೂರು.

ಭಾಷೆಗೆ ಅನುವಾದಿಸಿ 'Song Offerings' ಎಂಬ ಶೀರ್ಷಿಕೆಯಿಟ್ಟು ಪ್ರಕಟಣೆಗೆ ಸಿದ್ದಪಡಿಸಿದ್ದರು. ಕ್ರಿ.ಶ.೧೯೧೨ರಲ್ಲಿ ಲಂಡನ್ನಿನ ಇಂಡಿಯಾ ಸೊಸೈಟಿಯವರು ಈ ಸಂಕಲವನ್ನು 'Song Offerings' ಎಂಬ ಶೀರ್ಷಿಕೆಯಲ್ಲಿಯೇ ಪ್ರಕಟಿಸಿದರು. ಪುಸ್ತಕ ರೂಪದಲ್ಲಿ ಹೊರಬಂದ ಈ ಕವಿತಾ ಸಂಕಲನ ಬ್ರಿಟಿಷರನ್ನು ಬಹುಬೇಗ ಸೆಳೆಯಿತು. ಇಂಗ್ಲಿಷ್ ವಿಮರ್ಶಕರು ಈ ಕೃತಿಯನ್ನು ಬಹು ಮೌಲ್ಯ ಭರಿತವಾದ ನುಡಿಗಳಿಂದ ಸ್ವಾಗತಿಸಿದರು. ಈ ಪುಸ್ತಕದ ಜನಪ್ರಿಯತೆಯನ್ನು ಮನಗಂಡ ಲಂಡನ್ನಿನ ಮ್ಯಾಕ್‌ಮಿಲನ್ ಪ್ರಕಾಶನ ಸಂಸ್ಥೆಯವರು ಒಂದು ಲಕ್ಷ ರೂಪಾಯಿಗಳಿಗೆ ಗೀತಾಂಜಲಿಯ ಪ್ರಕಟನಾ ಹಕ್ಕನ್ನು ಖರೀದಿಸಿ 'ಗೀತಾಂಜಲಿ' ಎಂಬ ಹೆಸರಿನಿಂದಲೇ ಪ್ರಕಟಿಸಿತು. ಕ್ರಿ.ಶ.೧೯೧೩ರಲ್ಲಿ 'ಗೀತಾಂಜಲಿ' ಸಂಕಲನಕ್ಕೆ ನೋಬೆಲ್ ಪಾರಿತೋಷಕ ಲಭ್ಯವಾಯಿತು. ಬಂಗಾಳಿಯಲ್ಲಿದ್ದ ಪದ್ಯಗಳನ್ನು ರವೀಂದ್ರರೇ ಇಂಗ್ಲಿಷಿಗೆ ಭಾಷಾಂತರ ಮಾಡಿದ್ದರಿಂದ ತಾಯಿನುಡಿಯ ಸೊಗಡು ಮತ್ತು ಮಾರ್ದವತೆ ಇಂಗ್ಲಿಷ್ ಆವೃತ್ತಿಯ ಕವಿತೆಗಳಲ್ಲಿಯೂ ಇದ್ದಿತ್ತು.

೧೯೧೩ರಲ್ಲಿ (೧೦-೧೨-೧೯೧೩) ಸ್ವೀಡಿಷ್ ಅಕಾಡೆಮಿಯು ಗೀತಾಂಜಲಿ ಕೃತಿಯನ್ನು ನೋಬೆಲ್ ಪುರಸ್ಕಾರಕ್ಕೆ ಆಯ್ಕೆ ಮಾಡಿ ರವೀಂದ್ರರಿಗೆ ಪ್ರಶಸ್ತಿ ಪ್ರಧಾನ ಮಾಡಿದಾಗ ನುಡಿದ ಮಾತುಗಳು ತುಂಬಾ ಮೌಲ್ಯಭರಿತವಾಗಿವೆ. ನೋಬೆಲ್ ಪ್ರಶಸ್ತಿಯ ಅಧ್ಯಕ್ಷ 'ಹೆರಾಲ್ಡ್ ಜಾರ್ನ್' ರವೀಂದ್ರನಾಥ ಠಾಕೂರರನ್ನು ಆಂಗ್ಲೋ ಇಂಡಿಯನ್ ಎಂದೇ ಸಂಬೋಧಿಸುತ್ತಾರೆ. ಇದರರ್ಥ ಭಾರತದಲ್ಲಿರುವ ಇಂಗ್ಲಿಷ್ ಪ್ರಜೆ ಎಂದಾಗುತ್ತದೆ. ಹೆರಾಲ್ಡ್ ಜಾರ್ನ್ ಮುಂದುವರಿದು "ನಾವು ಅರ್ಥೈಸಿಕೊಂಡಂತೆ ಈ ಕಾವ್ಯವು ಅನ್ಯ ದೇಶೀಯವಾಗಿರದೆ, ವಾಸ್ತವವಾಗಿ ವಿಶ್ವಮಾನವತೆಯ ಗುಣದಿಂದ ತುಂಬಿದ್ದು ಭವಿಷ್ಯದಲ್ಲಿ ನಾವು ತಿಳಿದುಕೊಂಡುದಕ್ಕಿಂತ ಮಿಗಿಲಾಗಿ ವಿಕಾಸಗೊಳ್ಳಬಹುದು, ಪೂರ್ವ ಮತ್ತು ಪಶ್ಚಿಮಗಳಿಂದ ನಾಗರಿಕತೆಗಳ ನಿರ್ಮಾಣವಾದ ಅಗಾಧವಾದ ಕಂದಕವನ್ನು ಮುಚ್ಚಿ ಈ ನಾಗರಿಕತೆಗಳ ನಡುವೆ ಸಮನ್ವಯವನ್ನುಂಟು ಮಾಡಲು ಈ ಕವಿಯ ಪ್ರೇರಣೆ ಕಾರ್ಯೋನ್ಮುಖವಾಗಿದೆಯೆಂಬುದನ್ನು ನಾವು ಅರಿತಿದ್ದೇವೆ".[೨]

ಕವಿ ರವೀಂದ್ರನಾಥ ಠಾಕೂರರ 'ಗೀತಾಂಜಲಿ'ಯಲ್ಲಿರುವ ಕವಿತೆಗಳು ವಿಶ್ವಮಾನವ ಸಂದೇಶವನ್ನು ಅಭಿವ್ಯಕ್ತಗೊಳಿಸುವ ಕಾವ್ಯಭಾಷೆಯನ್ನು ಹೊಂದಿವೆ. ಭಗವಂತನ ಸಾಕ್ಷಾತ್ಕಾರಕ್ಕೆ ಪ್ರೀತಿಯೊಂದೇ ಸಾಧನವೆಂಬ ಕರೆ ಹಲವು ಕವಿತೆಗಳ ವಸ್ತುವಾಗಿದೆ.

ಹೂವೊಂದೆ ನನ್ನಲಿದೆ ನಿನ್ನ ಬಹುಮಾನಿಸಲು
ಬೇರಾವ ಉಡುಗೊರೆಯು ನನ್ನ ಬಳಿ ಇರದು[೩]

ಈ ಸಮರ್ಪಣಭಾವ ಉಡುಗೊರೆಯ ಹೂವಿಗಿಂತಲೂ ಮೃದು-ಕಂಪಿನ ಹಂಬಲವಾಗಿ ಅನುರಣಿಸಿದೆ. 'ನಾಥ ನನ್ನನು ಅಪ್ಪಿಕೋ' ಎಂಬ ಕವಿತೆ, ಕವಿಯ ಹೃದಯ ಅನಾಥ ಪ್ರಜ್ಞೆಯನ್ನು

೨. ರವೀಂದ್ರನಾಥ ಠಾಕೂರ್ 'ಗೀತಾಂಜಲಿ', ಅನು: ಜಿ.ರಾಮನಾಥಭಟ್, ಮುನ್ನುಡಿ XXI, ಪ್ರಥಮ ಪರಿಷ್ಕೃತ ಮುದ್ರಣ – ೨೦೦೭, ಕಾವ್ಯಾಲಯ ಪ್ರಕಾಶನ, ಮೈಸೂರು.
೩. ರವೀಂದ್ರನಾಥ ಠಾಕೂರ್ 'ಗೀತಾಂಜಲಿ', ಅನು: ಜಿ.ರಾಮನಾಥಭಟ್, ಪುಟ ೬೧, ಪ್ರಥಮ ಪರಿಷ್ಕೃತ ಮುದ್ರಣ – ೨೦೦೭, ಕಾವ್ಯಾಲಯ ಪ್ರಕಾಶನ, ಮೈಸೂರು.

ತೊರೆದು ದೇವ ನೊಲುಮೆಯನ್ನು ಗಳಿಸುವ ತುರಿಯಾವಸ್ಥೆಯನ್ನು ಬಿಂಬಿಸುತ್ತದೆ. ಇಲ್ಲಿ ಇಸ್ಲಾಮಿನ 'ಸೂಫಿ' ಸಂಪ್ರದಾಯದ ದೈವ ಪ್ರೇಮದ ವಿರಹ ಥಟ್ಟನೆ ನೆನಪಿಗೆ ಬಂದು ಬಿಡುತ್ತದೆ.

'ಯಾವ ರಾಗದಿ ಮಧುರ ಗೀತವ ಹಾಡಿನಾ ಓಲೈಸಲಿ?
ದೇವ ನನ್ನನು ಸೆಳೆದುಕೋ ಎದೆಗಪ್ಪಿಕೋ ಒಲವಿಂದಲಿ...'[೪]

ಭರವಸೆ ಮತ್ತು ನಿರೀಕ್ಷೆಗಳಲ್ಲಿ ಹುರಿಗೊಂಡ ಭಾವಲಾಲಿತ್ವ 'ಅವನು ಬರುವನು' ಎಂಬ ಕವಿತೆಯಲ್ಲಿ ಕಾಣುತ್ತದೆ. ರವೀಂದ್ರನಾಥ ಠಾಕೂರರು ಕಾವ್ಯಭಾಷೆಯಲ್ಲಿ ಕಟ್ಟಿ ಕೊಡುವ ಸರಿಚಿತ್ತಾರಗಳು ವರ್ಣಸಂಯೋಜನೆಯ ಪರಾಕಾಷ್ಠತೆಯನ್ನು ಹೊಂದಿವೆ. ಭರವಸೆ ಮತ್ತು ನಿರೀಕ್ಷೆಗಳಿಗೆ ಭಾವರೂಪ ತಳೆದ ಭಗವಂತನ ಆಗಮನ ಮೊಟ್ಟಮೊದಲು ಗೋಚರವಾಗುವುದು ಪ್ರಕೃತಿಯ ಋತುಮಾನಗಳ ರೂಪದಲ್ಲಿ ಎಂಬ ರೂಪಕ ಬಹು ಅರ್ಥವತ್ತಾಗಿದೆ.

ಚೈತ್ರಮಾಸದಿ ಸೂರ್ಯರಶ್ಮಿಯು ನವ್ಯಚೇತನ ತುಂಬಲು
ಸೌರಭವನೇ ಸೂರೆಗೊಳ್ಳಲು ಸೊಗದ ಸುಗ್ಗಿಯ ದಿನಗಳು
ಕಾನನದ ಪಥದಲಿ ಬರುವನು ಪುಲಕ ತರುವನು ವಸುಧೆಗೆ
ಇಲ್ಲ ಸಂಶಯ, ಅವನು ಬರುವನು ನನ್ನ ಹೃದಯವ ಸೇರಲು[೫]

ಅಗೋಚರ ಆನಂದ ರೂಪೀ ದೈವ ಅರಣ್ಯ ಪಥದ ಮೂಲಕ ತನಗೂ ಮತ್ತು ಪರಿಸರಕ್ಕೂ ಪುಲಕವನ್ನು ಕರುಣಿಸುತ್ತಾನೆ ಎಂಬ ಪ್ರತಿಮೆ ಬಹುಮನೋಜ್ಞವಾಗಿದೆ. ಕುಸುಮದ ಕಂಪು, ಕೊಳಲನಾದದ ಸೊಂಪು, ಮಧುಮಾಸದ ಪೆಂಪು ಇವು. ಭಗವಂತನು ಧರೆಗಿಳಿದು ಬರುವ ಕಾರಣಗಳು. ಇಷ್ಟ-ಭಾವ-ಪ್ರಾಣಗಳಲ್ಲಿ ಭಗವಂತನ ಆಗಮನವನ್ನು ನಿರೀಕ್ಷಿಸುವ ಭಾವುಕತೆ, ಸೃಷ್ಟಿಯಾಯಿತೆಂದರೆ ಭಗವಂತನ ಸಾಕ್ಷಾತ್ಕಾರ ತಡವಾಗುವುದಿಲ್ಲ. ಮಧುರ ಭಾವಗಳಲ್ಲಿ ದೈವ ಪ್ರೇಮ ಮತ್ತು ಪ್ರೀತಿಗಳು ಸೃಷ್ಟಿಗೊಳ್ಳುತ್ತವೆ. ಉದಾತ್ತಭಾವ ಸಂಪತ್ತುಗಳನ್ನು ಸಮರ್ಪಣ ಮಾಡಿದರೆ, ಆ ಸಂಪತ್ತಿಗೆ ಭಗವಂತನೇ ಒಡೆಯನಾಗುತ್ತಾನೆ ಎಂಬ ತಾತ್ವಿಕ ನಿಲುವು ರವೀಂದ್ರನಾಥ ಠಾಕೂರರ ಅನೇಕ ಕವಿತೆಗಳ ಆಶಯಗಳಾಗಿವೆ.

ರವೀಂದ್ರನಾಥ ಠಾಕೂರರು ಅಪ್ರತಿಮ ಕವಿಯೆಂಬುದರಲ್ಲಿ ಸಂದೇಹವಿಲ್ಲ. ಸಾವಿರಕ್ಕೂ ಹೆಚ್ಚಿನ ಕವಿತೆಗಳನ್ನು ಎರಡು ಸಾವಿರಕ್ಕೆ ಮೀರಿ ಹಾಡುಗಳನ್ನು ರಚಿಸಿರುವುದಲ್ಲದೆ ಕಥೆ, ಕಾದಂಬರಿ, ನಾಟಕ, ಪ್ರಬಂಧ ಇತ್ಯಾದಿ ಸಾಹಿತ್ಯದ ಎಲ್ಲ ಬಗೆಯಲ್ಲೂ ಆಸಕ್ತಿ ಹಾಗೂ ಪ್ರತಿಭಾಶಕ್ತಿಯಿಂದ ಸಾಹಿತ್ಯ ರಚನೆ ಮಾಡಿದ್ದಾರೆ. ಸಹೃದಯ ಓದುಗರು ಸ್ವಾಗತಿಸಿ ಅಭಿಮಾನದಿಂದ ಪ್ರತಿಸ್ಪಂದನೆ ತೋರದೇ ಹೋಗಿದ್ದರೆ, ಈ ರೀತಿಯ ಸಾಹಿತ್ಯ ಕೃತಿಯನ್ನು ಯಾರೊಬ್ಬರೂ

---

೪. ರವೀಂದ್ರನಾಥ ಠಾಕೂರ್ 'ಗೀತಾಂಜಲಿ', ಅನು: ಜಿ.ರಾಮನಾಥಭಟ್, ಪುಟ ೬೨, ಪ್ರಥಮ ಪರಿಷ್ಕೃತ ಮುದ್ರಣ – ೨೦೦೭, ಕಾವ್ಯಾಲಯ ಪ್ರಕಾಶನ, ಮೈಸೂರು.
೫. ರವೀಂದ್ರನಾಥ ಠಾಕೂರ್ 'ಗೀತಾಂಜಲಿ', ಅನು: ಜಿ.ರಾಮನಾಥಭಟ್, ಪುಟ ೬೭, ಪ್ರಥಮ ಪರಿಷ್ಕೃತ ಮುದ್ರಣ – ೨೦೦೭, ಕಾವ್ಯಾಲಯ ಪ್ರಕಾಶನ, ಮೈಸೂರು.

ಮಾಡಲಾಗುತ್ತಿರಲಿಲ್ಲ. ಭಾರತೀಯ ಸಾಹಿತ್ಯ ಸಂದರ್ಭದಲ್ಲಿ ರವೀಂದ್ರನಾಥ ಠಾಕೂರರು ತಮ್ಮ ಹೆಸರನ್ನು 'ಶಿಲಾಲಿಪಿಯಂತೇ' ದಾಖಲುಗೊಳಿಸಿದ್ದಾರೆ.

ಕವಿ ರವೀಂದ್ರನಾಥ ಠಾಕೂರರು, ಕವಿ ಧರ್ಮವೇ ಬೇರೆ, ಮಾನವ ಧರ್ಮವೇ ಬೇರೆಯೆಂಬ ಚಿಂತನೆ ನಡೆಸದೆ ಎರಡು ಕಣ್ಣಿಂದ ನೋಟ ಒಂದೇ ಎಂಬ ಪ್ರಕೃತಿ ಧರ್ಮದಂತೆ ಕವಿ ಧರ್ಮವನ್ನು ಮಾನವ ಧರ್ಮದೊಡನೆ ಸಂಲಗ್ನಗೊಳಿಸಿದರು. ಜಾಗತಿಕ ಚಿಂತಕರು 'ಸೌಂದರ್ಯ' ಸಿದ್ಧಾಂತವನ್ನು 'ಕಲೆಗಾಗಿ ಕಲೆ' ಎಂಬ ಧ್ಯೇಯ ವಾಕ್ಯದೊಡನೆ ಚಿಂತನೆ ನಡೆಸುವ ಕಾಲದಲ್ಲಿಯೇ ಜೀವನ ಸೌಂದರ್ಯದ ಬಗ್ಗೆ ಆಲೋಚನಾಪರರಾಗಿದ್ದರು. ಪ್ರಾಚೀನ ತತ್ವಗಳು ಅರ್ವಾಚಿನ ಸಿದ್ಧಾಂತಗಳೊಡನೆ ಸಂಗಮಿಸಿದರೆ ಸೂಕ್ತವೆಂದು ಅಭಿಪ್ರಾಯಪಟ್ಟವರು. ಕವಿ ರವೀಂದ್ರನಾಥ ಠಾಕೂರರು ಅತುಳ ನಿಸರ್ಗ ಪ್ರೇಮಿ; ಅವರಿಗೆ ಪ್ರಕೃತಿ ಮತ್ತು ಮನುಷ್ಯರ ಸಂಬಂಧ ಅಭಿನ್ನವಾದುವೆಂಬ ಅರಿವು ಹೃನ್ಮನಗಳನ್ನು ತುಂಬಿಕೊಂಡಿದೆ. ಮನುಷ್ಯ ಪ್ರಕೃತಿಯ ಒಂದು ಭಾಗ ಎಂಬ ಪ್ರತಿಮೆ ಅವರ 'ನಿರ್ಝರಿಣಿಯ ಸ್ವಪ್ನಭಂಗ' ಎಂಬ ಕವಿತೆಯಲ್ಲಿ ಕಂಡು ಬರುತ್ತದೆ.

ಪ್ರಾತಃ ಕಾಲದೊಳಿಂದೀ ರವಿ ಕಿರಣ
ಪಸರಿಸಿತೆಂತೋ ಪುಲಕಿಸಿ ಹರಣ;
ಒಳಹೊಕ್ಕಿತು ಹೇಗೋ ಗುಹೆಯಲಿ ಕತ್ತಲೆ ಸೀಳಿ
ಬೆಳಗಿನ ಹಕ್ಕಿಯ ಹಾಡಿನುಲಿ
ತಿಳಿಯದೆನಗೆ ದಿನವಿನಿತುರುಳಿ
ಏಕೆಚ್ಚೆತ್ತಿತೋ ಹರಣವು ಇಂತರಳಿ
ಪ್ರಾಣವು ಎಚ್ಚೆತ್ತಿದೆ ಮರಳಿ,
ಓ ಕಲಕಲಿಸುತ್ತಿದೆ ಜಲಧಾರೆ
ಪ್ರಾಣಾವೇಗವ ರೋದಿಸಲಾರೆ
ಪ್ರಾಣಾಕಾಂಕ್ಷೆಗಳುಲ್ಬ ವೇರೆ... ![೬]

ಈ ಕವಿತೆಯನ್ನು ಬರೆದಾಗ ರವೀಂದ್ರನಾಥರಿಗೆ ಇಪ್ಪತ್ತರ ವಯಸ್ಸು. ಈ ಹೊತ್ತಿಗಾಗಲೇ ಭಾರತೀಯ ತಾತ್ವಿಕ ದರ್ಶನದ ಪ್ರಭಾವದಿಂದ, ಜೀವಾತ್ಮ-ಆತ್ಮಗಳ 'ಪ್ರಜ್ಞೆ' ಜಾಗೃತವಾಗಿದೆ.

ಭೂಮಿಯ ಬಗ್ಗೆ ಅಥವಾ ನಿಸರ್ಗದ ಬಗ್ಗೆ ರವೀಂದ್ರನಾಥ ಠಾಕೂರರು ಅನನ್ಯ ಪ್ರೇಮವನ್ನು ಹೊಂದಿದ ಭಾವಜೀವಿ. ವರುಷವೊಂದರಲ್ಲಿ ಆರು ಋತುಗಳಾಗಿ ತೋರಿ ಮನುಕುಲದ ಮೇಲೆ ಪ್ರಭಾವ ಬೀರುವ ಪ್ರಕೃತಿ ದರ್ಶನವನ್ನು ತಮ್ಮ ಬಹುಸಂಖ್ಯೆಯ ಕವಿತೆಗಳಲ್ಲಿ ಹಾಡಿದ್ದಾರೆ. ಮಳೆಬಿದ್ದ ನೆಲದಿಂದ ಹೊಮ್ಮುವ ನರುಗಂಪನ್ನು ಕಾವ್ಯಭಾಷೆಯಲ್ಲಿ ಹೇಳಿದಷ್ಟು ತೃಪ್ತರಾಗದ ಕವಿ, ಇವರು. ಮಳೆ ಸುರಿದ ನಂತರದ ದಿನಗಳಲ್ಲಿ ಹಳ್ಳಿಗರು ಹೊಲದಲ್ಲಿ ತೋಟ-ಗದ್ದೆಗಳಲ್ಲಿ

---

೬. ರವೀಂದ್ರನಾಥ ಠಾಕೂರ್, ನೂರೊಂದು ಕವನ, ಕನ್ನಡಕ್ಕೆ ದ.ರಾ.ಬೇಂದ್ರೆ, ನಾರಾಯಣ ಸಂಗಮ, ಕೇಂದ್ರ ಸಾಹಿತ್ಯ ಅಕಾಡೆಮಿ, ಪುಟ-೨೫, ೧೯೯೬ ದ್ವಿತೀಯ ಮುದ್ರಣ.

ನಡೆಸುವ ಚಟುವಟಿಕೆಗಳು ಋತು ವೈಭವದ ಸ್ಪಂದನೆಗಳಾಗಿಯೇ ಕಾಣಿಸುತ್ತವೆ. ಕಾಳಿದಾಸನ ಋತು ಸಂಹಾರದಲ್ಲಿ ಎಲ್ಲ ಋತುಗಳ ಸೊಬಗೂ ಹೃದಯಸ್ಪರ್ಶಿಯಾಗಿರುತ್ತವೆ. ಕನ್ನಡದಲ್ಲಿಯೂ ಕವಿಗಳು ತಮ್ಮ ಕಾವ್ಯಗಳಲ್ಲಿ ವರ್ಷ ಋತುವಿನಲ್ಲಿ ವೈಭವವನ್ನು ಕೊಂಡಾಡಿದ್ದಾರೆ.

ವರ್ಷಋತುವಿನಲ್ಲಿ ಆಕಾಶದ ಮೋಡಗಳದ್ದೇ ರುದ್ರ ಸಂಚಲನ; ಕ್ಷಣದಿಂದ ಕ್ಷಣಕ್ಕೆ ಬದಲಾಗುವ ಮೇಘ ಸಂಕುಲದ ಬಹುರೂಪ ಭೂಮಿಯ ಜನರ ಜೀವಿತದ ಭಾಗವಾಗಿಯೇ ವರ್ತಿಸುತ್ತದೆ. ಮಳೆ-ಕೃಷಿಕರಿಗೆ ಮತ್ತಿತರರಿಗೆ ಬಹಳ ಹಿಂದಿನಿಂದಲೂ ಬಂದಿರುವ ಪ್ರಾಣ ಸಂಪತ್ತು. ನೀರಿಲ್ಲದೆ ಯಾವೊಂದು ಜೀವಿಯೂ ಬದುಕಲಾರದು. ಜಗತ್ತಿನ ಜನರೆಲ್ಲರೂ ವರ್ಷಧಾರೆಯಿಂದ ಭೂಮಿಗೆರಗುವ ಮಳೆಯನ್ನೇ ಪ್ರಾಣ ಚೈತನ್ಯದ ಶಕ್ತಿಯನ್ನಾಗಿ ಪಡೆಯುತ್ತಾರೆ. ಆಕಾಶದಲ್ಲಿ ತೇಲಿ ಚಲಿಸುವ ಮೋಡಗಳು ರಾತ್ರಿಯೆಲ್ಲ ಬಿರುಮಳೆ ಸುರಿಸಿ ತನ್ನೊಡಲ ಶೀತಲ ನಿಧಿಯನ್ನು ನೀಗಿಕೊಂಡ ಮೇಲೆ, ಬೆಳ್ಳಗೆ ಅರಳೆಯ ರಾಶಿಯಂತೆ ಚಲಿಸಿ ನೆಲದ ಮೇಲೆ ಚಿತ್ರವಿಚಿತ್ರ ಚಿತ್ತಾಕರ್ಷಕ ನೆಳಲನ್ನು ಸೃಷ್ಟಿಸಿ ತಾವೂ ಚಲಿಸಿ, ತಮ್ಮ ನೆಳಲನ್ನು ಚಲಿಸುವಂತೆ ಮಾಡುವ ಮೇಘಲೀಲೆ ಸೌಮ್ಯವಾಗಿಯೂ, ರುದ್ರವಾಗಿಯೂ ಮೈದೋರುವುದುಂಟು.

ಕವಿ ರವೀಂದ್ರನಾಥರು ಇರುವ ಎಲ್ಲ ಋತುಗಳ ಜೊತೆಗೆ ವರ್ಷ ಋತುವನ್ನು ಮನದಣಿದು, ಚಿತ್ರಿಸುತ್ತಾರೆ.

'ಹೃದಯ ನನ್ನದು ನವಿಲಿನಂದದಿ
ಇಂದು ನರ್ತಿಸುತಿರುವುದು
ಹೃದಯ ನರ್ತಿಸುತಿರುವುದು;

ನೂರು ಬಣ್ಣದ ಭಾವ ಹೊಮ್ಮಲು
ಹೃದಯ ಗರಿ ಗೆದರಿರುವುದು
ಹೃದಯ ಗರಿ ಗೆದರಿರುವುದು.

ಪ್ರಾಣ ವ್ಯಾಕುಲಗೊಂಡು ವ್ಯೋಮನ
ಕಂಡು ಯಾರನೋ ಕರೆವುದು
ಕೆದರಿ ಗರಿಗಳ ಮೊರೆವುದು
ಹೃದಯ ನನ್ನದು ನವಿಲಿನಂದದಿ
ಇಂದು ನರ್ತಿಸುತಿರುವುದು.[೭]

ಕವಿ ರವೀಂದ್ರನಾಥ ಠಾಕೂರರು 'ಪ್ರೇಮಕವಿ', ಪ್ರೇಮವೇ ದೈವವೆಂದು ನಂಬಿದ ಕವಿ. ಗೀತಾಂಜಲಿಯ ಬಂಗಾಳೀ ಭಾಷೆಯ ಕವಿತೆಗಳನ್ನು ಅವರು ಇಂಗ್ಲಿಷಿಗೆ ಭಾಷಾಂತರ ಮಾಡಿಕೊಟ್ಟ ಕಾಲಮಾನದಲ್ಲಿ ಜಾಗತಿಕ ಯುದ್ಧಗಳು ನಡೆದಿದ್ದವು. ವ್ಯಕ್ತಿ-ವ್ಯಕ್ತಿಗಳ 'ರಕ್ತಗರ್ವ', ದೇಶ-ದೇಶಗಳ ನಡುವೆ ವೈರತ್ವವನ್ನು ಹೆಚ್ಚಿಸಿದ್ದವು. ದ್ವೇಷಾಸೂಯೆಗಳಿಗೆ ಕೊನೆ ಯಾವುದೆಂಬ

೭. 'ವರ್ಷಾಕಾಲ' ನೂರೊಂದು ಕವನ. ಕನ್ನಡಕ್ಕೆ ದ.ರಾ.ಬೇಂದ್ರೆ, ಕೇಂದ್ರ ಸಾಹಿತ್ಯ ಅಕಾಡೆಮಿ. ಪುಟ ೧೬೬.

ಗೊಂದಲ ಇಡೀ ಜಗತ್ತನ್ನು ತಲ್ಲಣಗೊಳಿಸಿತ್ತು. ಎರಡು ಮಹಾಯುದ್ಧಗಳ ಬೀಭತ್ಸ ದೃಶ್ಯವನ್ನು ಕಂಡ ಕವಿ ಇಂಥ ಸಂದರ್ಭದಲ್ಲಿ 'ಶಾಂತಿ ಮತ್ತು ಪ್ರೇಮ'ಗಳ ಸಂದೇಶಮಯವಾದ 'ಗೀತಾಂಜಲಿ' ಪ್ರಕಟವಾಯಿತು. ಯುದ್ಧದಲ್ಲಿ ಬೇಸತ್ತ ಪಾಶ್ಚಾತ್ಯರು ಗೀತಾಂಜಲಿಯನ್ನು ಪ್ರಾಂಜಲ ಮನಸ್ಸಿನಿಂದ ಸ್ವಾಗತಿಸಿದರು. ದ್ವೇಷಾಸೂಯೆಗಳೇ ತುಳುಕುತ್ತಿದ್ದ ಮನಸ್ಸುಗಳಿಗೆ ಸ್ವಾದಭರಿತ ಪ್ರೇಮ ಮತ್ತು ಶಾಂತಿ ತುಂಬಿದ ಪ್ರೀತಿಯ ಸಾಂತ್ವನ ಎಲ್ಲರಿಗೆ ಅತ್ಯಗತ್ಯವೆನಿಸಿತ್ತು. ಶಾಂತಿ ಮತ್ತು ಪ್ರೇಮಗಳೇ ಜಗತ್ತಿನ ಸುಖ–ನೆಮ್ಮದಿಗಳ ಅಕ್ಷಯ ಪಾತ್ರೆಯೆಂದು ತಿಳಿಯುವಂತಾಯಿತು.

ಕವಿತೆಗಳ ರಚನೆಯ ಪ್ರಾರಂಭದ ದಿನಗಳಲ್ಲಿ ರವೀಂದ್ರನಾಥ ಠಾಕೂರರು ಸಂಸ್ಕೃತ ಸಮಾಸ ಶಬ್ದಗಳನ್ನು ಹೆಚ್ಚಿನ ಪ್ರಮಾಣದಲ್ಲಿ ಬಳಸಿದರೂ, ಅಷ್ಟೊಂದು ಭಾರವಾದ ಶಬ್ದಗಳೂ ಕೂಡ ಅವರ ಸಮೃದ್ಧವಾದ ವಿಚಾರಗಳನ್ನು ಹಾಗೂ ಭಾವತೀವ್ರತೆಯನ್ನು ಭರಿಸಲಾರದೇ ಹೋದವು. ಶಬ್ದಗಳ ನಡುವಿನ ಶೂನ್ಯದಲ್ಲಿ ಇನ್ನೇನೋ ಇದೆ ಎನ್ನಿಸುವಷ್ಟು ಸಂದೇಹ ಸಹೃದಯರಿಗುಂಟಾಗಿರಲೂಬಹುದು. ರವೀಂದ್ರನಾಥ ಠಾಕೂರರು ತಮ್ಮ ಕಾವ್ಯಭಾಷೆ ಬಂಗಾಳಿಯೇ ಎಂದು ಸದೃಢ ವಿಶ್ವಾಸವನ್ನು ತಳೆದ ಮೇಲೆ ಕಾವ್ಯಭಾಷೆ ಸರಳವಾಯಿತು. ಮಧುರವಾಯಿತು, ಪ್ರೇಮಭಾಷೆಯಾಗಿ ಪರಿವರ್ತನೆಗೊಂಡಿತು.

### ೬.೨. ರವೀಂದ್ರನಾಥ ಠಾಕೂರರ ಗೀತಾಂಜಲಿಯ ಕನ್ನಡ ಅನುವಾದಗಳನ್ನು ಕುರಿತು

ಕನ್ನಡದ ಭಾಷೆಯಲ್ಲಿ ಅನುವಾದ, ಭಾಷಾಂತರ, ರೂಪಾಂತರ ಎಂಬಿತ್ಯಾದಿ ಶಬ್ದಗಳಿಂದ ಅನುವಾದಗಳನ್ನು ಕುರಿತು ಹೇಳುವಾಗ ಗುರುತಿಸಲಾಗುತ್ತದೆ. ಒಂದು ಭಾಷೆಯಿಂದ ಪದ್ಯವನ್ನಾಗಲೀ ಗದ್ಯವನ್ನಾಗಲೀ ಇನ್ನೊಂದು ಭಾಷೆಗೆ ತರ್ಜುಮೆ ಮಾಡುವ ಕಾರ್ಯ ಸೃಜನಶೀಲತೆಯಷ್ಟೇ ಪ್ರಮಾಣದ ಪ್ರತಿಭೆಯನ್ನು ಬಯಸುತ್ತದೆ. ಕಾವ್ಯಭಾಷೆಗಾಗಲೀ, ಸಾಹಿತ್ಯಾದಿ ಗದ್ಯರೂಪದ ಭಾಷೆಗಾಗಲೀ ಮೂಲ ಸಾಹಿತಿಯ ಭಾವಸಂಪತ್ತಿಗೆ ಸರಿದೊರೆಯಾಗಿ ಭಾಷೆಯೂ ಬಳಕೆಗೊಂಡಿರುತ್ತದೆ. ಮೂಲ ಕೃತಿಯನ್ನು ರಚಿಸಿದ ಪ್ರತಿಭಾಶಾಲಿ ಸಾಹಿತಿಯ ಮೆಚ್ಚುಗೆ ಹಾಗೂ ಸಂತೃಪ್ತಿಗೆ ಒಳಗಾಗುವಂತೆ ಅನುವಾದ ಸಾಧ್ಯವಾದಂತೆ ಕಂಡುಬರುವುದಿಲ್ಲ. ಕವಿ ರವೀಂದ್ರನಾಥ ಠಾಕೂರರೇ ತಮ್ಮ ಗೀತಾಂಜಲಿಯ ಕವಿತೆಗಳನ್ನು ತಾವೇ ಇಂಗ್ಲಿಷಿಗೆ ಅನುವಾದ ಮಾಡಿ ಪ್ರಕಟಿಸಿದರು. ಮೂಲ ಬಂಗಾಳಿಯ ಸೊಗಡು ಆ ಕವಿತೆಗಳಲ್ಲಿ ಇದ್ದಿರಲಿಲ್ಲವೆಂದು ಹೇಳಲಾಗುತ್ತಿದೆ. ಆದರೂ ಗೀತಾಂಜಲಿ ಆಂಗ್ಲ ಸಾಹಿತ್ಯ ಪ್ರೇಮಿಗಳ ಹೃದಯವನ್ನು ಸೂರೆಗೊಂಡು ನೋಬೆಲ್ ಪಾರಿತೋಷಕಕ್ಕೆ ಆಯ್ಕೆಗೊಂಡಿತ್ತು. ಕೆಲವು ಅನುಭಾವೀ ಅನುವಾದಕರು; ಯಾವುದೇ ಮೂಲ ಭಾಷೆಯ ಜಾಯಮಾನ ಅಥವಾ ಸೊಗಡು ಅಥವಾ ಮಣ್ಣಿನ ವಾಸನೆ ಅನುವಾದದ ಭಾಷೆಗೆ ತರ್ಜುಮೆಯಾಗುವುದು ತೀರಾ ಅಪರೂಪ.

ಕೆಲವೊಮ್ಮೆ ಮೂಲ ಭಾಷೆಯ ಸಾಹಿತ್ಯ ಅನುವಾದಕ ಸೃಜನಶೀಲತೆಯನ್ನು ಮೈಗೂಡಿಸಿಕೊಂಡು ಮೂಲ ಸಾಹಿತ್ಯಕ್ಕಿಂತ ಮೇಲಾದ ಸಂದರ್ಭಗಳೂ ನಡೆದು ಹೋಗಿವೆ.

ಉತ್ಕೃಷ್ಟ ಕೃತಿಗಳನ್ನು 'ಅನುವಾದ' ಮಾಡುವ ಕಾರ್ಯದಲ್ಲಿ ಯಾರೊಬ್ಬರೂ ಯಶಸ್ಸು ಗಳಿಸುವುದು ಕಷ್ಟಸಾಧ್ಯ. ಒಂದು ಭಾಷೆಯಲ್ಲಿ ಜನಮನ್ನಣೆ ಗಳಿಸಿದ ಕೃತಿ, ಅನುವಾದಿತ ಭಾಷೆಯ ಜನರನ್ನು ಸಂತೃಪ್ತಿಗೊಳಿಸಿತೆಂದರೆ ಆ ಅನುವಾದ ಅಷ್ಟರ ಮಟ್ಟಿಗೆ ಶ್ರೇಷ್ಠತೆಯ ಗೆರೆ ಮುಟ್ಟಿರುತ್ತದೆ. ಸಾಹಿತಿಯೊಬ್ಬ ತಾನು ಬರೆದ ಕೃತಿಯನ್ನು ತಾನೇ ಅನ್ಯಭಾಷೆಗೆ ಅನುವಾದ ಮಾಡಿದರೂ, ಪೂರ್ಣ ಸಾಫಲ್ಯ ಲಭ್ಯವಾಗುತ್ತದೆಂದು ಹೇಳುವಂತಿಲ್ಲ. ರವೀಂದ್ರನಾಥ ಠಾಕೂರರು ಬಂಗಾಳಿಯಲ್ಲಿ ಬರೆದ ಗೀತಾಂಜಲಿಯನ್ನು ತಾವೇ ಇಂಗ್ಲಿಷಿಗೆ ಭಾಷಾಂತರಿಸಿ ಯಶಸ್ಸುಗಳಿಸಿದರು. ಈ ಭಾಷಾಂತರವನ್ನು ನಾವು ಗಮನಿಸಿದರೆ, ಬಂಗಾಳಿ ಭಾಷೆಯಲ್ಲಿದ್ದ 'ಗೀತಾಂಜಲಿ' ಇಂಗ್ಲೀಷ್ ಭಾಷಾ ಮಾಧ್ಯಮಕ್ಕೆ ಪ್ರವೇಶ ಮಾಡಿದ ಕಾರಣ ಅದು ಗದ್ಯ ರೂಪತಾಳಿದೆಯೆನ್ನಬಹುದು. ಕಾವ್ಯದ ರಸಗ್ರಹಿಕೆಯಲ್ಲಿ ಕವಿ ಮತ್ತು ಅನುವಾದಕ ಸರಿಸಮಾನತೆ ಗಳಿಸಿದಾಗ ಒಂದು ಶ್ರೇಷ್ಠ ಕೃತಿ, ಅನುವಾದಗೊಂಡ ಭಾಷೆಯಲ್ಲಿಯೂ ಶ್ರೇಷ್ಠವೇ ಆಗಿರುತ್ತದೆ. ಚಿತ್ರಕಲಾವಿದನೊಬ್ಬ ತನ್ನ ಅಸಾಧಾರಣ ಪ್ರತಿಭೆಯಿಂದ ಗುಲಾಬಿ ಹೂವೊಂದರ ಚಿತ್ರವನ್ನು ಬರೆದರೆ ಅದು ಸಹಜ ಗುಲಾಬಿಗಿಂತಲೂ ಚಂದವಾಗಿ ಕಣ್ಸೆಳೆಯಬಹುದು, ಆದರೆ ಆ ಕಲಾವಿದ ತಾ ಬರೆದ ಗುಲಾಬಿಗೆ ಸಹಜ ಕಂಪನ್ನು ನೀಡಲಾಗುವುದಿಲ್ಲ. ಕವಿ ರವೀಂದ್ರನಾಥ ಠಾಕೂರರ ವಿಷಯಕ್ಕೆ ಬಂದರೆ ಅವರ ಭಾವಸ್ಪಂದನೆ, ಭಾವತೀವ್ರತೆಗಳಿಗೆ ಸಂದಿಲ್ಲದಂತೆ ಬೆಸೆದುಕೊಂಡಿವೆ.

### ೬.೩. ರಾಷ್ಟ್ರಕವಿ ಕುವೆಂಪು ಮತ್ತು ರವೀಂದ್ರನಾಥ ಠಾಕೂರರ ನಡುವೆ ಇರುವ ಅನುವಾದ ಸಂಬಂಧ

ಕುವೆಂಪು ಅವರು ರವೀಂದ್ರನಾಥ ಠಾಕೂರರ ಕೆಲವು ಕವಿತೆಗಳನ್ನು ಕನ್ನಡಕ್ಕೆ ಭಾಷಾಂತರಿಸಿದ್ದಾರೆ. ರವೀಂದ್ರನಾಥ ಠಾಕೂರರಿಗೂ, ಕುವೆಂಪು ಅವರಿಗೂ ಕವಿತಾ ರಚನೆಯಲ್ಲಿ ಒಂದು ಸಾಮ್ಯತೆಯನ್ನು ಗುರುತಿಸಬಹುದು. ರವೀಂದ್ರನಾಥ ಠಾಕೂರರಿಗಿರುವಂತೆ ನಿಸರ್ಗಪ್ರೀತಿ ಕುವೆಂಪು ಅವರಿಗೂ ಇದೆ. ಕುವೆಂಪು ಅವರಿಗೆ ಅವೆರಡೂ ಅವರ ದಾರ್ಶನಿಕತೆ ಕವಿತೆಗಳ ಮುಖ್ಯಲಕ್ಷಣಗಳೂ ಆಗಿವೆ. ಇಬ್ಬರೂ ಕಾವ್ಯ ಸರಸ್ವತಿಯ ಮಾನಸ ಪುತ್ರರಾದ್ದರಿಂದ ಕಾವ್ಯ ಭಾಷೆಯಲ್ಲಿ ವ್ಯತ್ಯಾಸ ಕಂಡುಬರುವುದಿಲ್ಲ. ಸೋಜಿಗ ಪಡಬಹುದಾದ ಸಂಗತಿಯೆಂದರೆ ಕವಿ ಕುವೆಂಪು, ಅನುವಾದಿಸಿರುವ ಪದ್ಯಗಳು ಅನುವಾದವೆಂದು ಹೇಳಿದರೆ ಮಾತ್ರ ಇದೊಂದು ರವೀಂದ್ರನಾಥ ಠಾಕೂರರ ಪದ್ಯದ ಅನುವಾದವೆಂದು ಗ್ರಹಿಕೆಯಾಗುತ್ತದೆ. ಹಾಗೆ ಹೇಳುವುದನ್ನು ಮರೆತರೆ ಕುವೆಂಪು ಅವರ ಸ್ವಂತ ಕವಿತೆಯೆಂದೇ ಭಾವಿಸುವಂತಾಗುತ್ತದೆ. ಅಷ್ಟರ ಮಟ್ಟಿಗೆ ಕವಿ–ಕುವೆಂಪು ರವೀಂದ್ರನಾಥ ಠಾಕೂರರ ಕಾವ್ಯಭಾಷೆಯನ್ನು ಅನುಸರಿಸಿದ್ದಾರೆ. ಕುವೆಂಪು ೧೯೩೦ರಲ್ಲಿ 'ನಮಸ್ಕಾರ' ಎಂಬ ರವೀಂದ್ರನಾಥ ಠಾಕೂರರ ಕವಿತೆಯನ್ನು ೧೯೩೧ರಲ್ಲಿ 'ಬರುತಲಿಹನು', 'ಆ ವರ್ಷ ಶಿಶುಲೀಲೆ', ೧೯೩೨ರಲ್ಲಿ ಗೀತಾಂಜಲಿಯ ೩೩ನೆಯದನ್ನು ೧೯೩೪ರಲ್ಲಿ ಗೀತಾಂಜಲಿಯ ಎರಡನೆಯ ಕವಿತೆಯನ್ನು ಅದೇ ವರುಷ 'ನಮಿಸುತೊಮ್ಮೆ' ಕವಿತೆಯನ್ನು 'ಸತ್ಯದ ಸಂಯಮ', 'ಮೋಹ', 'ಒಂದು ಪ್ರಾರ್ಥನೆ' ಮುಂತಾದವನ್ನು ಅನುವಾದಿಸಿದ್ದಾರೆ.

ರವೀಂದ್ರನಾಥ ಠಾಕೂರರ ಕಾವ್ಯಭಾಷೆ ಪ್ರಾಕೃತ ಮೂಲದಿಂದ ಆವಿಷ್ಕಾರಗೊಂಡ ಬಂಗಾಳಿ, ಕುವೆಂಪು ಅವರದ್ದು ಸಂಸ್ಕೃತ ಬಾಹುಳ್ಯವಿರದ ಮಲೆನಾಡಿನ ಕನ್ನಡ ಭಾಷೆ. ಕನ್ನಡ ಮತ್ತು ಬಂಗಾಳಿ ಭಾಷೆಗಳಿಗೆ ಹೋಲಿಕೆಯಿದ್ದರೆ ಅದು ಎರಡೂ ಭಾಷೆಗಳಲ್ಲಿ ಬಳಸಿರಬಹುದಾದ ಸಂಸ್ಕೃತ ಶಬ್ದಗಳಿಂದ ಮಾತ್ರ ಎನ್ನಬಹುದು. ಎರಡೂ ಬೇರೆ ಬೇರೆ, ಕನ್ನಡ–ಇಂಡೋ ದ್ರಾವಿಡಿಯನ್ ಭಾಷಾ ಗುಂಪಿಗೆ ಸೇರಿದ್ದರೆ, ಬಂಗಾಳಿ–ಇಂಡೋ ಯೂರೋಪಿಯನ್ ಭಾಷಾ ಸಂಕುಲಕ್ಕೆ ಸೇರಿದುದು. ಆದರೂ ಇಬ್ಬರೂ ಮಹಾಕವಿಗಳಾದ್ದರಿಂದ ಅವರ ಕವಿತೆಗಳಲ್ಲಿ ಭಾಷೆಯೇ ಭಾವವಾಗಿ ಭಾವವೇ ಭಾಷೆಯಾಗಿ ಪುಟಗೊಂಡವುಗಳಾಗಿವೆ. ಈ ಹೇಳಿಕೆಯನ್ನು ಸಮರ್ಥಿಸಿಕೊಳ್ಳಲು ನಾವು ಹಲವು ಉದಾಹರಣೆಗಳನ್ನು ನೀಡಿ, ನೋಡಬಹುದು.

ನಮಸ್ಕಾರ

**(ರವೀಂದ್ರನಾಥ ಠಾಕೂರರ ಕವನವೊಂದರ ಅನುವಾದ)**

ಮಣಿಯಲೆನ್ನ ಶಿರವು ನಿನ್ನ
ಚರಣ ಧೂಳಿ ತಲದಲಿ;
ನನ್ನ ಅಹಂಕಾರವೆಲ್ಲ
ಮುಳುಗಲಶ್ರು ಜಲದಲಿ;

ನನಗೆ ನಾನೆ ಪೂಜೆಗೈಯೆ
ಸೊಡರನೆತ್ತಲು
ಬೆಳಕು ಬರುವ ಬದಲು ಅಯ್ಯೋ
ಬರಿಯ ಕತ್ತಲು

ಅಹಂಕಾರದಂಧಕಾರ
ಮುತ್ತುತಿದೆ ಸುತ್ತಲು !

ನನ್ನ ನಾನೆ ಮೆರೆಯದಂತೆ
ನಾನು ಗೈದ ಕರ್ಮದಿ,
ನಿನ್ನ ಇಚ್ಛೆ ಪೂರ್ಣವಾಗ
ಲೆನ್ನ ಜೀವ ಧರ್ಮದಿ

ತಳೆಯಲೆನ್ನ ಜ್ಞಾನ ನಿನ್ನ
ಚರಮ ಶಾಂತಿಯ;
ಬೆಳಗಲೆನ್ನ ಪ್ರಾಣ ನಿನ್ನ
ಪರಮ ಕಾಂತಿಯ
ನನ್ನ ಗಳಿಸು ನೀನೆ ನೆಲಸು
ಹೃದಯ ಪದ್ಮದಲದಲಿ[೮]

---

೮. ಕುವೆಂಪು ಸಮಗ್ರ ಕಾವ್ಯ ಸಂಪುಟ–೨, ಪುಟ ೫೪೯, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೦.

'ಕುವೆಂಪು' ತಮ್ಮ ನಿಸರ್ಗಪ್ರೀತಿ ಮತ್ತು ದೈವೀಶ್ರದ್ಧೆಗಳಿಗನುಗುಣವಾಗಿ ಕವಿ ರವೀಂದ್ರನಾಥ ಠಾಕೂರರ ಅದೇ ಭಾವವುಳ್ಳ ಕವಿತೆಗಳನ್ನು ಬಹು ಅಕ್ಕರೆಯಿಂದ ಅನುವಾದಿಸುತ್ತಾರೆ. ಗೀತಾಂಜಲಿಯ ೪೫ನೆಯ ಕವಿತೆಯನ್ನು 'ಬರುತಲಿಹನು' ಎಂಬ ಶೀರ್ಷಿಕೆಯಿಟ್ಟು ಬಹು ಅರ್ಥವತ್ತಾಗಿ ಅನುವಾದಿಸಿದ್ದಾರೆ. ಇದು ಅನುವಾದದಂತೆ ಭಾಸವಾಗದೆ ಮೂಲ 'ಕವಿಪಾಠದ' ಸೊಗಸನ್ನು ಒಳಗು ಮಾಡಿಕೊಂಡಿದೆ. ಮೂಲ ಬಂಗಾಳಿಯಲ್ಲಿ ಯಾವ ಕಾವ್ಯಾರ್ಥವನ್ನು ಹೊಂದಿರಬಹುದೋ ಅದೇ ಕಾವ್ಯಾರ್ಥ ಕುವೆಂಪು ಅವರಲ್ಲಿಯೂ ನಿಚ್ಚಳವಾಗಿದೆ.

"ಬರುತಲಿಹನು"

ಹೂವುಬಿಸಿಲು ತುಂಬಿಬರುವ ಸುರುಚಿರವರ ಚೈತ್ರದಿ
ತಣ್ಣಿತೆಲರು ತೀಡಿನಲಿವ ಅಡವಿ ಮಲೆಯ ಹಾದಿಯಲಿ
ಬರುತಲಿಹನು, ಬರುತಲಿಹನು, ಬರುತಲಿರುವನು,

ಮಳೆಗರೆಯುವ ಕಾರಿರುಳಿನ ಕಗ್ಗತ್ತಲ ಘನಪಥದಲಿ
ಕುಡಿಮಿಂಚಿನ ಗುಡುಗುಡುಗುವ ಭೀಷಣ ಜಲಧರ ರಥದಲಿ
ಬರುತಲಿಹನು, ಬರುತಲಿಹನು, ಬರುತಲಿರುವನು,

ದುಃಖ ದುಃಖ ವೇಷದಲಿ ನೊಂದ ಹೃದಯ ದೇಶದಲಿ
ಕೇಳುವೆಲ್ಲ ಘೋಷದಲಿ ಹುದುಗಿಹುದವನಡಿಯಲಿ
ಅವನಪಾದ ಪರುಷಮಣಿ ಸರ್ವಸುಖದ ಜೋತಿಗಣಿ

ಬಿಸಿಲ್ಗೆ ಮಳೆಯ ತಂಪುಹನಿ ಅವನಲರಡಿ ಮೆಲುದನಿ
ಒಡೆಯನಡಿಗಳುಲಿಯ ನೀವು ಕೇಳಲಿಲ್ಲವೆ?
ಬರುತಲಿಹನು, ಬರುತಲಿಹನು, ಬರುತಲಿರುವನು,[೯]

ಕುವೆಂಪು' ೧೯೩೨ರ ಹೊತ್ತಿಗೆ ಈ ಕವಿತೆಯನ್ನು ಬಂಗಾಳಿ ಅಥವಾ ಇಂಗ್ಲಿಷಿನಿಂದ ಕನ್ನಡಕ್ಕೆ ಅನುವಾದಿಸಿದ್ದರು. ತಮಗೆ ಬಹುಪ್ರಿಯವಾದ ನಿಸರ್ಗಾರಾಧನೆ ಮತ್ತು ನಿಸರ್ಗದೊಡನೆ ಅವಿನಾಭಾವದಿಂದ ಬೆರೆತಿರುವ ದೈವಶ್ರದ್ಧೆಗಳು ಅವರ ಬಹುಮೊತ್ತದ ಕವಿತೆಗಳಲ್ಲಿ ತುಂಬಿಕೊಂಡಿದೆ. ಕವಿತೆಗಳಲ್ಲಿ ಅರ್ಥಗೌರವ ಮತ್ತು ಪದಲಾಲಿತ್ಯ ಅಳವಡಿಸುವುದು 'ಕುವೆಂಪು' ಅವರ ಶ್ರೇಷ್ಠ ಗುಣ. ಎಷ್ಟೇ ಶ್ರಮಿಸಿದರೂ ಆ 'ಗುಣ' ಬಹುಶಃ ಇನ್ನೊಬ್ಬ ಕವಿಗೆ ದಕ್ಕಲಾರದೇನೋ?

ರಾಷ್ಟ್ರಕವಿ ಕುವೆಂಪು ಹಾಗೂ ವಿಶ್ವಕವಿ ರವೀಂದ್ರನಾಥ ಠಾಕೂರರಿಗೂ ಇರುವ ಸಾಮ್ಯವೆಂದರೆ ಇಬ್ಬರೂ ಅವರವರ ಮಾತೃಭಾಷೆಯ ಆರಾಧಕರು, ಕುವೆಂಪು ಅವರು ಕನ್ನಡ ಬಹು ರೂಪಗಳಾದ ಹಳಗನ್ನಡ, ನಡುಗನ್ನಡ, ಭಾಷೆಯ ಹೊಸಗನ್ನಡಗಳನ್ನು ಸಹಜವಾಗಿ 'ಬೆಸೆದು'ಗೊಳಿಸಿ ಕವಿತೆ ಮತ್ತು ಗದ್ಯಗಳಲ್ಲಿ ಬಳಸುತ್ತಾರೆ. ಕನ್ನಡ ಭಾಷೆಯ ಕಾವ್ಯಸಾಧ್ಯತೆಗಳನ್ನು ಅವರಂತೆ ಕಂಡು ಕೊಂಡ ಕವಿ ಕನ್ನಡದಲ್ಲಿ ಇಲ್ಲವೇ ಇಲ್ಲ. ಅವರ ದೇಸಿ ರೂಪದ ಭಾಷೆಯನ್ನು ಆಸ್ವಾದಿಸಬೇಕಾದರೆ

೯. ಕುವೆಂಪು ಸಮಗ್ರ ಕಾವ್ಯ ಸಂಪುಟ-೨, ಪುಟ ೫೧೦, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೦.

‘ಕಾನೂರು ಹೆಗ್ಗಡಿತಿಯ’ ಬೈರ, ಸಿದ್ದ, ಬಾಡುಗಳ್ಳ ಸೋಮ ಮುಂತಾದ ಪಾತ್ರಗಳು ಆಡುವ ಭಾಷೆಯನ್ನು ನೋಡಬಹುದು.

ಕವಿ ರವೀಂದ್ರನಾಥ ಠಾಕೂರರು ತಮ್ಮ ಕವಿತೆ, ಕಾದಂಬರಿ, ನಾಟಕ, ಕಥೆ ಮುಂತಾದ ಪ್ರಕಾರಗಳಲ್ಲಿ ಬಳಸುವ ಬಂಗಾಳಿಯನ್ನು ಅವಲೋಕಿಸಬೇಕು. ಒಂದು ವಿಶೇಷವೆಂದರೆ; ರವೀಂದ್ರನಾಥರು ತಾವೇ ಬರೆದ ಗೀತಾಂಜಲೀ ಕವಿತೆಗಳನ್ನು ಇಂಗ್ಲಿಷಿಗೆ ಅನುವಾದ ಮಾಡಿ ಇಂಗ್ಲಿಷ್ ಕಾವ್ಯಾಸಕ್ತರಿಗೆ ಒದಗಿಸಿದ್ದರು. ಮಾತೃ ಭಾಷೆಯ ಬಂಗಾಳಿಯಲ್ಲಿ ಬಳಸಿದಂತೆ ಇಂಗ್ಲಿಷ್ ಭಾಷೆಯಲ್ಲಿ ಕಾವ್ಯಭಾಷೆಯಾಗಿ ಬಳಸಲು ಎಂಥವರಿಗೂ ಸವಾಲಿನದಾಗಿರುತ್ತದೆ. ಅನುವಾದದಲ್ಲಿ ಮೂಲಭಾಷೆಯ ಅರ್ಧದಷ್ಟು ಪ್ರಮಾಣದಲ್ಲಿ ಮೂಲಕವಿಯ ಕೃತಿಗೆ ಸಮೀಪವಾಗಿ ಬಿಟ್ಟರೆ ಆ ಅನುವಾದ ಉತ್ಕೃಷ್ಟವೆನಿಸುತ್ತದೆ. ಗೀತಾಂಜಲಿಯ ಇಂಗ್ಲಿಷ್ ಅನುವಾದವನ್ನು ಓದಿ ರೋಮಾಂಚಿತರಾದ ಆಂಗ್ಲಭಾಷಿಕರು ಬಂಗಾಳಿ ಭಾಷೆಯ ಜೀವಂತಿಕೆಯ ಗುಣವನ್ನು ಆಸ್ವಾದಿಸಿದ್ದರೆ ಕೊಂಚಮಟ್ಟಿಗೆ ಪರಿಚಯಿಸಿಕೊಂಡಿರುವರೆನ್ನಬಹುದಾಗಿದೆ.

ರವೀಂದ್ರನಾಥ ಠಾಕೂರರ ಕಾವ್ಯಗಳ ಈ ಅವಲೋಕನವನ್ನು ರವೀಂದ್ರನಾಥರೇ ತಮ್ಮ ಗೀತೆಗಳನ್ನು ಕುರಿತು ಹೇಳಿರುವ ಮಾತಿನಿಂದ ಮುಗಿಯಬಹುದು.

“ನನ್ನ ಜೀವನದಲ್ಲೆಲ್ಲ ನನ್ನ ಗೀತೆಗಳ ಮೂಲಕ ನಾನು ನಿನ್ನನ್ನು ಅನ್ವೇಷಿಸಿದೇನೆ. ಬಾಗಿಲಿನಿಂದ ಬಾಗಿಲಿಗೆ ನನ್ನನ್ನು ಕರೆದುಕೊಂಡು ಹೋದುವು ಅವು. ಅವುಗಳಿಂದ ನಾನು ನನ್ನ ಪ್ರಪಂಚವನ್ನು ತಡವುತ್ತ ಮುಟ್ಟುತ್ತ ಸುತ್ತಣ ಸ್ಥಿತಿಗಳನ್ನು ತಿಳಿದೆನು. ನಾನು ಕಲಿತ ಪಾಠಗಳನ್ನೆಲ್ಲ ನನ್ನ ಗೀತಗಳು ನನಗೆ ಕಲಿಸಿಕೊಟ್ಟವು. ಹೃದಯಾಕಾಶದ ಅಂಚಿನ ಅನೇಕ ಅನೇಕ ನಕ್ಷತ್ರಗಳನ್ನು ಅವು ನನ್ನೆದುರಿಗೆ ತಂದುಬಿಟ್ಟವು. ದಿನವೆಲ್ಲ ಅವು ನನ್ನನ್ನು ನೋವು ನಗೆಯ ನಾಡ ರಹಸ್ಯಗಳತ್ತ ನಡಸಿತಂದವು. ಹೀಗೆ ಕೊನೆಗೆ ಇವು ಸಂಜೆಯಲ್ಲಿನ ಪ್ರಯಾಣ ಮುಗಿದ ಹೊತ್ತು ನನ್ನನ್ನು ಇದು ಯಾವ ಅರಮನೆಯ ಬಾಗಿಲು ಇಲ್ಲಿಗೆ ಕರೆದು ತಂದಿದೆ?”[೧೦] ರವೀಂದ್ರನಾಥ ಠಾಕೂರ್.

## ೬.೪. ಕನ್ನಡ ಕವಿಗಳ ಮೇಲೆ ‘ಗೀತಾಂಜಲಿ’ ಕಾವ್ಯದ ಪ್ರಭಾವ

ನಾನು ಯಾವ ಹಾಡನ್ನು ಹಾಡಬೇಕೆಂದು ಬಂದೆನೋ, ಆ ಹಾಡು ಇದುವರೆಗೆ ಹಾಡದೆ ಉಳಿದಿದೆ.

ನನ್ನ ಕಿನ್ನರಿಯ ತಂತಿಗಳನ್ನು ಏರಿಸುತ್ತಲೂ ಇಳಿಸುತ್ತಲೂ ನನ್ನ ದಿನಗಳು ಸಂದವು.

ಸರಿಯಾದ ತಾಳವು ಇನ್ನೂ ದೊರೆತಿಲ್ಲ. ಶಬ್ದಗಳನ್ನು ಇನ್ನೂ ಸರಿಯಾಗಿ ಜೋಡಿಸಲಿಲ್ಲ. ಹಾಡನ್ನೂ

---

೧೦. ಮಾಸ್ತಿ ವೆಂಕಟೇಶ ಅಯ್ಯಂಗಾರ್, ರವೀಂದ್ರನಾಥ ಠಾಕೂರರು, ಉಷಾ ಸಾಹಿತ್ಯ ಮಾಲೆ, ಮೈಸೂರು, ೧೯೬೧, ಪುಟ ೭೧.

ಹಾಡಬೇಕೆಂಬ ಆತುರವಷ್ಟೇ ನನ್ನೆದೆಯಲ್ಲಿ ತಳಮಳಿಸುತ್ತದೆ.

ಹೂವು ಇನ್ನೂ ಅರಳಿರುವುದಿಲ್ಲ; ಗಾಳಿ ಮಾತ್ರ ಅತ್ತಿತ್ತ ಸುಯ್ಯುತ್ತಿದೆ

ನಾನು ಆತನ ಮೋರೆಯನ್ನು ಇನ್ನೂ ನೋಡಿಲ್ಲ. ಕಂಠವನ್ನಾದರೂ ಕೇಳಿಲ್ಲ. ನನ್ನ ಮನೆಯ ಮುಂದಣಿಂಧ

ಆತನ ಮೆಲ್ಲಡಿಗಳನ್ನು ಮಾತ್ರ ಕೇಳಿರುವೆನು.

ಆತನ ಬಗ್ಗೆ ಮಂದಲಿಗೆಯನ್ನು ನೆಲದಲ್ಲಿ ಹಾಸುವುದರಲ್ಲಿಯೇ ನನ್ನ ಇಡೀ ದಿನ ಕಳೆಯಿತು; ಆದರೆ

ದೀವಿಗೆಯನ್ನು ಇನ್ನೂ ಹೊತ್ತಿಸದೆ, ಆತನನ್ನು ಹೇಗೆ ತಾನೇ ಮನೆಯೊಳಗೆ ಕರೆಯಲಿ?

ಆತನನ್ನು ಕಾಣುವೆನೆಂಬೀ ಆಸೆಯಿಂದ ನಾನು ಇದ್ದಿರುವೆನು. ಆದರೆ ಈ ಕಾಣುವಿಕೆಯು ಇನ್ನೂ ಆಗಿಲ್ಲ.

– ಠಾಕೂರ್ ಕಾವ್ಯ : ಗೋವಿಂದ ಪೈ

ಗೀತಾಂಜಲಿಯ ಕವಿತೆ ೧೩೮ರ ಅನುವಾದ

ಕೆಮ್ಮನೆ ಕಾಲಿಡುವದು ಹಿಂಸ್ರ ನಿಶಿ
ಸುಮ್ಮನೆ ಕೆಮ್ಮನೆ ಕಾಲಿಡುವದು ಹಿಂಸ್ರ ನಿಶಿ
ದುರ್ಬಲ ಶಿಥಿಲ ಶರೀರದ ಬಿಗಿ ಸಿಗಿದುಡುಗಿಸಿ
ಅರ್ಗಲ ಮುರಿದೊಳ ಹೋಗುವುದು ಭೇದಿಸಿ ಕರಣ
ಮಾಡಲು ಜೀವನದೀ ಗೌರವ ರೂಪಂಗಳ ಹರಣ.
ಕಾಳಿಮೆಯಾಕ್ರಮಣಕೆ ಸೋಲೊಪ್ಪುವುದು ಮನ.
ಈ ದಣಿವಿನ ಅಪಮಾನ.
ಮತ್ತೀ ಪರಿಯ ಪರಾಭವ ಲಜ್ಜಾ ಭಾರ.
ಹೆಜ್ಜೆ ಹೆಜ್ಜೆಗೂ ಬೆಳೆಯಲಿಕಪರಂಪಾರ,
ಒಮ್ಮಿಗೆ ಕಾಂಬುದು ದೂರ ದಿಗಂತದಲೆತ್ತಿ
ನಿಂತಿಹ ದಿನದ ಪತಾಕೆಯ ಪಂತಿ,
ಮುತ್ತಿರೆ ಹೊಂಗದಿರಿನ ದೀಧಿತಿ ಒತ್ತೊತ್ತಿ.
ಆಗಸದಾವುದೊ ದೂರದ ಕೇಂದ್ರ
ಕೂಗುತ್ತಿದೆ "ಮಿಥ್ಯಾ ಮಿಥ್ಯಾ" ಎನಲಾ ಸ್ವರಸಾಂದ್ರ,
ಪ್ರಾತಃ ಕಾಲದಿ ವಿಕಸಿತ ಆಲೋಕದಿ ನಾ
ಜೀರ್ಣ ಶರೀರದ ದುರ್ಗ ಶಿಖರದಲಿ ನನ್ನ
ಪಡೆವೆನು ದುಃಖ ವಿಜೇತನ
ಮೂರ್ತಿಯ ದರ್ಶನವನ್ನ.

– ನಾರಾಯಣ ಸಂಗಮ ಮತ್ತು ದ.ರಾ.ಬೇಂದ್ರೆ

ನೂರೊಂದು ಕವನ, ಸಾಹಿತ್ಯ ಅಕಾಡೆಮಿ, ೧೯೬೭

## ಪ್ರಾರ್ಥನೆ

ನಿನ್ನ ಚರಣದ ಧೂಲಿನಡಿಯಲ್ಲಿ ನನ್ನ ಶಿರವನ್ನು ಬಾಗಿಸು
ದೇವ ನನ್ನೀ ಹಮ್ಮನೆಲ್ಲವ ನಯನಜಲದಲ್ಲಿ ಮುಳುಗಿಸು

ನನ್ನ ಅಹಮಿಕೆಯನ್ನೇ ಮೆರೆಸುವೆ ನಿನ್ನ ಪೂಜೆಯ ನೆವದಲಿ
ನಿನ್ನ ಸುತ್ತಲು ಗೋಡೆ ಕಟ್ಟುವೆ ದರ್ಪಗರ್ವಗಳಿಂದಲಿ
ನಾನೆ ರಚಿಸಿದ ಚಕ್ರವ್ಯೂಹದಿ ದಿಕ್ಕುಗಾಣದೆ ಸುತ್ತುವೆ
ನನ್ನ ನಾನೇ ಘಾಸಿಗೊಳಿಸುತ ಪ್ರತಿಕ್ಷಣವು ನಾ ಸಾಯುವೆ

ನನ್ನ ಮಹಿಮೆಯ ನಾನೆ ಹೊಗಳುತ ಇನ್ನು ಸಾರೆನು ಜಗದಲಿ
ನಿನ್ನ ಇಚ್ಛೆಯ ಪೂರ್ಣಗೊಳಿಸೈ ದೇವ ನನ್ನೀ ಬಾಳಲಿ
ನನ್ನ ಪ್ರಾಣಗಳಲ್ಲಿ ತುಂಬುತ ನಿನ್ನ ಅನುಪಮ ಕಾಂತಿಯ
ಚರಮ ಶಾಂತಿಯ ನೀಡಿ ನನ್ನೀ ಚಿತ್ತ ಪಾವನಗೊಳಿಸೆಯ?

ಏಳು ಏಳೈ ದೇವದೇವನೆ ವಿಶ್ವರೂಪವ ಪ್ರಕಟಿಸು
ಸಾಕು ಇನ್ನೀ ಕರುಣೆ ಕನಿಕರ ನನ್ನ ಬಾಳನು ಮಾಗಿಸು
ನಿನ್ನ ಹೃದಯದ ಪದ್ಮದಲದಲಿ ನನ್ನ ಸೆಳೆಯುತ ಬಂಧಿಸು
ದೇವ ನನ್ನೀ ಹಮ್ಮನೆಲ್ಲವ ನಯನಜಲದಲಿ ಮುಳುಗಿಸು

– **ಜಿ. ರಾಮನಾಥಭಟ್**, ಗೀತಾಂಜಲಿ, ಕಾವ್ಯಾಲಯ, ೨೦೦೭

ಕುವೆಂಪು ಅವರು ಹೈಸ್ಕೂಲು ವಿದ್ಯಾರ್ಥಿಯಾಗಿದ್ದಾಗ ಇಂಗ್ಲೀಷ್ ಅಧ್ಯಾಪಕರಾಗಿದ್ದ ಶ್ರೀಸುಂದರ ಅವರಿಂದ 'ಗೀತಾಂಜಲಿ'ಯ ಕವಿತೆಗಳನ್ನು ಮೊದಲ ಬಾರಿಗೆ ಕೇಳುತ್ತಾರೆ. ಅದರ ಸಮ್ಮೋಹನಕ್ಕೆ ಒಳಗಾಗಿ ಸೆಕೆಂಡ್ ಹ್ಯಾಂಡ್ ಪುಸ್ತಕದಲ್ಲಿ ಒಂದು ರೂಪಾಯಿಗೆ ಪುಸ್ತಕವನ್ನು ಕೊಂಡು ತರುವ ಸ್ವಾರಸ್ಯವನ್ನು ನೆನಪಿನ ದೋಣಿಯಲ್ಲಿ ದಾಖಲಿಸುತ್ತಾರೆ. "ಅಂಗಡಿಯವನು ಏನು ಬೇಕು ಎಂದು ಕೇಳಿದಾಗ 'ಗೀತಾಂಜಲಿ' ಎಂದು ಹೆಮ್ಮೆಯಿಂದಲೇ ಹೆಸರು ಹೇಳಿದ. ಹಸುರು ಬೈಂಡಿನ ಒಂದು ತೆಳ್ಳನೆಯ ಪುಸ್ತಕ ತೆಗೆದುಕೊಟ್ಟರು. ಬೆಲೆ ಒಂದೇ ರೂಪಾಯಿ! ಪುಸ್ತಕ ಕೊಂಡು ರೂಮಿಗೆ ಬಂದೆ. ಓದಿದೆ, ಮತ್ತೆ ಓದಿದೆ. ಒಬ್ಬ ಪ್ರೇಮಿ ತನ್ನ ಪ್ರಿಯೆಯನ್ನು ಕೂಡ ಆ ರೀತಿ ಮುದ್ದಾಡಿ ಆಸ್ವಾದಿಸುತ್ತಾನೋ ಇಲ್ಲವೋ? ಎಷ್ಟು ದಿನಗಳು ಅದರ ಮಾದಕತೆಯಲ್ಲಿ ಕಳೆದುವೋ? ದೈನಂದಿನ ಯಥಾಸ್ಥಿತಿಯ ವ್ಯಾಪಾರಗಳೇನೋ ನಡೆಯುತ್ತಿದ್ದವು ಯಾಂತ್ರಿಕವಾಗಿ ಮೀಯುವುದು, ಉಣ್ಣುವುದು, ಬಟ್ಟೆಬರೆ ಹಾಕಿಕೊಳ್ಳುವುದು, ಕ್ಲಾಸಿಗೆ ಹೋಗುವುದು ಇತ್ಯಾದಿ. ಆದರೆ ಚೇತನವೆಲ್ಲ ಗೀತಾಂಜಲಿಯ ನಂದನದಲ್ಲಿ ನರ್ತಿಸಿ ನಲಿವ ಅಪ್ಸರೆಯಾಗಿತ್ತು. ಆ ಇಂಗ್ಲಿಷ್ ವಚನ ಕವನಗಳಲ್ಲಿ ಸ್ಫುರಿಸುತ್ತಿದ್ದ ಕವಿ ಹೃದಯದ ಪ್ರಾರ್ಥನೆ, ಅಭೀಪ್ಸೆ, ಆರಾಧನೆ, ಅನಂತತಾ ಆಕಾಂಕ್ಷೆ, ಸುಮಧುರಾಸ್ವಪ್ನ, ಸ್ವಾಪ್ನಿಕಾಹ್ವಾನ, ಇವು ನನ್ನ ಆತ್ಮವನ್ನು ತಮ್ಮ ಇಂದ್ರಚಾಪಾ ಸದೃಶ್ಯವಾದ ವರ್ಣೋಪವರ್ಣಮಯ ಭಾವಪಾಶಗಳಿಂದ ನೆಯ್ದ ಐಂದ್ರಜಾಲದಿಂದ ಬಂದಿಸಿ, ಸುದೂರದೊಂದು ಇಂದ್ರಲೋಕಕೊಯ್ದುವು"[೧೧] ಗೀತಾಂಜಲಿಯ ಸಮ್ಮೋಹಕ ಶಕ್ತಿಗೆ ಕುವೆಂಪು ಅವರು ಹೇಗೆ ಒಳಗಾದರು ಎಂಬುದನ್ನು ಈ ಮೂಲಕ ತಿಳಿಯಬಹುದು.

೧೧. ಕುವೆಂಪು, ನೆನಪಿನ ದೋಣಿಯಲಿ, ಉದಯರವಿ ಪ್ರಕಾಶನ, ೨೦೦೭, ಪುಟ–೧೪೬.

ಅಧ್ಯಾಯ - ಏಳು

# ರವೀಂದ್ರನಾಥ ಠಾಕೂರರ ಖಂಡಕಾವ್ಯ ಮತ್ತು ನಾಟಕ

೭.೧. ಚಿತ್ರಾಂಗದಾ

೭.೨. ಕುವೆಂಪು ಅವರ ಚಿತ್ರಾಂಗದ ಖಂಡಕಾವ್ಯ ಮತ್ತು ರವೀಂದ್ರನಾಥ ಠಾಕೂರರರ ಚಿತ್ರಾಂಗದ ತೌಲನಿಕ ನೋಟ

೭.೩. ರವೀಂದ್ರನಾಥ ಠಾಕೂರರ ನಾಟಕ: ಅಂಚೆಮನೆ

೭.೪. ರವೀಂದ್ರನಾಥ ಠಾಕೂರರ ನಾಟಕ: ಬಲಿದಾನ

೭.೫. ಹಿಂಸೆ-ಅಹಿಂಸೆ

೭.೬. ವಿಪ್ರ-ಶೂದ್ರ

೭.೭. ಸ್ವಾತಂತ್ರ್ಯದ ಕಲ್ಪನೆ

ಅಧ್ಯಾಯ – ಏಳು

# ರವೀಂದ್ರನಾಥ ಠಾಕೂರರ ಖಂಡಕಾವ್ಯ ಮತ್ತು ನಾಟಕ

## ೭.೧. ಚಿತ್ರಾಂಗದಾ

ಚಿತ್ರಾಂಗದಾ; ರವೀಂದ್ರನಾಥ ಠಾಕೂರರ; ರಸ–ಭಾವಗಳ, ಸಮ್ಮಿಶ್ರಣಗೊಂಡಿರುವ ನಾಟಕ, ಮಹಾಭಾರತದಲ್ಲಿ ಕಂಡುಬರುವ ಈ ಉಪಾಖ್ಯಾನ, 'ಚಿತ್ರಾಂಗದಾ' ಎಂಬ ಮಣಿಪುರದ ರಾಜಕುಮಾರಿಯ ಕಥೆ. ಪ್ರಸ್ತುತ ನಾಟಕ 'ಚಿತ್ರಾ' ಎಂಬ ಶೀರ್ಷಿಕೆಯಲ್ಲಿ ಇಂಗ್ಲೀಷಿನಲ್ಲೂ ಪ್ರಕಟವಾಗಿದೆ. ಇದಲ್ಲದೆ ಬಂಗಾಳಿ ಭಾಷೆಯಲ್ಲಿ ಬರೆದ 'ಚಿತ್ರಾ' ಎಂಬ ಕೃತಿಯೂ ಇದೆ. ಈ ಕೃತಿ ಚಿತ್ರಾದಿಂದ ಬೇರೆಯದೇ ಆದ ವಸ್ತುವುಳ್ಳ ನಾಟಕ ಚಿತ್ರಾಂಗದಾ.

'ಚಿತ್ರಾಂಗದಾ' ಖಂಡಕಾವ್ಯವನ್ನು ಮಹಾಛಂದಸ್ಸಿನಲ್ಲಿ ರಾಷ್ಟ್ರಕವಿ ಕುವೆಂಪು ಅವರೂ ಬರೆದಿದ್ದಾರೆ. ವಿಮರ್ಶಕರು ಹೇಳುವಂತೆ ವಿರಹದ ಶೃಂಗಾರಪೂರ್ಣವಾದ ಕಥೆಯಿದು. ರವೀಂದ್ರನಾಥರು ಚಿತ್ರಾಂಗದಾ ನಾಟಕವನ್ನು ತೀವ್ರತವಾದ ಪ್ರಜ್ಞೆಯಿಂದ ರಚಿಸಿದಂತೆ ಕಾಣುತ್ತದೆ. ಶೃಂಗಾರ ರಸ ಪ್ರತಿಪಾದನೆ ಕೊಂಚ ಎಚ್ಚರ ತಪ್ಪಿದರೂ ಅಶ್ಲೀಲತೆಯ ದೋಷ ಉಂಟಾಗಿಬಿಡುತ್ತದೆ. ಶೃಂಗಾರರಸ ಪ್ರಭೇದಗಳಲ್ಲಿ ಎರಡು; ಮೊದಲನೆಯದು ಪ್ರೇಮಿಗಳ ಮಿಲನ ಇದು ಮಿಲನ ಶೃಂಗಾರವಾದರೆ, ಎರಡನೆಯದು ವಿಪ್ರಲಂಬ ಶೃಂಗಾರ ಇದು ಪ್ರೇಮಿಗಳ ಅಗಲಿಕೆಯಿರುತ್ತದೆ. ಶೃಂಗಾರ ರಸ ಪ್ರಧಾನತೆಯ ನಾಟಕಕ್ಕೆ ಕಾಳಿದಾಸನ ಅಭಿಜ್ಞಾನ ಶಾಕುಂತಲವನ್ನು ಇಲ್ಲಿ ಉದಾಹರಿಸಬಹುದು. ಅಂಥದ್ದೇ ಶೃಂಗಾರ ರಸಭರಿತವಾದ ನಾಟಕ 'ಚಿತ್ರಾಂಗದಾ'.

'ಸಂಭೋಗ ಶೃಂಗಾರ' ಭಾರತೀಯೇತರರಲ್ಲಿ ಬೇರೆ ರೀತಿಯದಾಗಿರುತ್ತದೆ. ವಿವಾಹ ಪೂರ್ವದಲ್ಲಿ ತರುಣ–ತರುಣಿಯರು ಗೆಳೆತನವನ್ನು ಸಂಪಾದಿಸಿದ ನಂತರ ಶರೀರ ಸಂಪರ್ಕವಾದರೆ ಭಾರತೀಯರಲ್ಲಿ ವಿವಾಹಪೂರ್ವದಲ್ಲಿ ಗೆಳೆತನಕ್ಕೆ ಅವಕಾಶವಿಲ್ಲ. ಕೆಲವು ಧಾರ್ಮಿಕ ಸಮುದಾಯಗಳಲ್ಲಿ ವಿವಾಹಪೂರ್ವದಲ್ಲಿ ವಧೂವರರು ಒಬ್ಬರನ್ನೊಬ್ಬರು ನೋಡುವುದನ್ನು ನಿರ್ಬಂಧಿಸುತ್ತಾರೆ. ವಧುವನ್ನು ಗೋಪ್ಯ ಮಾಡಿಯೇ ವಿವಾಹ ಮಾಡುತ್ತಾರೆ. ಭಾರತೀಯರ ಮನೋಭಾವಕ್ಕೆ ತಕ್ಕಂತೆಯೇ ಚಿತ್ರಾಂಗದಾ ನಾಟಕವೂ ಸೃಷ್ಟಿಗೊಂಡಿದೆ.

ಮಣಿಪುರ ಕಡಲದಂಡೆಯ ಒಂದು ಸುಂದರ ನಿಸರ್ಗ ರಮಣೀಯ ನಗರ. ಅದರ ದೊರೆ ಚಿತ್ರವರ್ಮ. ಈತನ ವಂಶದಲ್ಲಿ ವರಪ್ರಸಾದದ ಪ್ರಭಾವದಿಂದ ಬರಿಯ ಗಂಡು ಮಕ್ಕಳೇ ಹುಟ್ಟಿ ಬೆಳೆಯುತ್ತಿದ್ದರು. ಅದೇನು ಕಾರಣವೋ ಚಿತ್ರವರ್ಮನಿಗೆ ಪುತ್ರನಿಗೆ ಬದಲಾಗಿ 'ಚಿತ್ರಾಂಗದೆ' ಹೆಣ್ಣುಮಗುವಾಗಿ ಹುಟ್ಟುತ್ತಾಳೆ. ಚಿತ್ರವರ್ಮ ಹೆಣ್ಣುಮಗು ಹುಟ್ಟಿತೆಂದು ನಿರಾಶನಾಗಲೀ, ಚಿಂತಿತನಾಗಲೀ ಆಗಲಿಲ್ಲ. ಹೆಣ್ಣು ಮಗುವನ್ನೇ ಗಂಡು ಮಗನಂತೆ ಬೆಳೆಸಿದ. ಚಿತ್ರಾಂಗದೆ ಮಕ್ಕಳಾಟದ ಜೊತೆ ಯುದ್ಧ ಕಲೆಗಳನ್ನು ಮೈಗೂಡಿಸಿಕೊಂಡಳು. ಸದಾ ಒರಟು ಆಯುಧಗಳನ್ನು ಹಿಡಿದು ಸಮರಕಲೆಯನ್ನು ಅಭ್ಯಾಸ ಮಾಡಿದ್ದರ ಫಲವಾಗಿ ಆಕೆಯ ಶರೀರ ಸ್ತ್ರೀಸಹಜವಾದ ಮೃದುತ್ವ ಹಾಗೂ ಕೋಮಲತ್ವಗಳನ್ನು ಕಳೆದು ಕೊಂಡಿತು. ಒರಟುತನ ಸ್ತ್ರೀಸಹಜವಾದ ಲೋಕವಾನ್ಯ ಬೆಡಗಿನಿಂದ ವಂಚಿತಳಾದಳು. ಮದನನಿಗೂ ಚಿತ್ರಾಂಗದೆಗೂ ನಡೆದ ಮಾತುಕತೆಯನ್ನು ಕವಿ ರವೀಂದ್ರನಾಥ ಠಾಕೂರರು ಒಂದು ಬಗೆಯ ಪ್ರಾರ್ಥನಾಲಯದ ಕವಿತಾ ರೂಪದಲ್ಲಿ ಹೇಳಿದ್ದಾರೆ.

**ಚಿತ್ರಾಂಗದಾ :** ಬರಿದಾಗಿರುವೀ ಪೂಜಾಪಾತ್ರವ
ನಿನ್ನಡಿಗಳಲಿಡುವೆ,
ಕಂಗಾಲಿನಿನಾ ಸೆರಗನ್ನು
ನೀ ಬರುವೆಡೆಯಲ್ಲಿ ಹಾಸುವೆ;

ಕುಸುಮಾಸ್ತ್ರನೆ ಶರಗಳ ನೆಸೆದು
ಈ ದೈನ್ಯವನಳಿಸು
ನಿನ್ನ ವಿಜಯ ಸಂಗ್ರಾಮದಲಿ
ನನಗೂ ಪಾಲಿರಿಸು;

**ಮದನ :** ಬಲ್ಲೆ ನಿನ್ನ ಮಾನಿನಿ
ಮಣಿಪುರ ರಾಜಕುಮಾರಿ
ಬಲ್ಲೇ ನೀ ತಪಸ್ವಿನಿ
ನನ್ನ ಪೂಜೆಗೆಳಸದವಳು
ಏತಕೀಗ ಹೀಗೆ?
ದೀನಳಾಗಿ ಬಂದೆ ಬಳಿಗೆ
ನಾಚಬೇಡ ನುಡಿಗೆ;

**ಚಿತ್ರಾಂಗದಾ :** ಪುರುಷ ವಿದ್ಯೆಯೆಲ್ಲ ಕವಿತೆ
ಅವನ ಭವ ಹರಣ
ಕಲಿಯಲಿಲ್ಲವೋ ಅನಂಗ
ಬಾಳೆ ಇದು? ಮರಣ.

ಈ ಹತಭಾಗ್ಯಳಿಗೆ ಒಂದೇ
ಸಂವತ್ಸರ ಮಾತ್ರ

ಸಮನಿಲ್ಲದ ಚಲುವ ಹರಸು
ಬೇಡುವೆ ಕಂದರ್ಪ.

ಮದನ : ಇಗೋ ವರವೀಯುವೆ ನಿನ್ನ ನಯನದಲಿ
ಮೂಡಲಿ ಕುಸುಮ ಶರ
ನಾರಿದ್ರೋಹಿ ಸಂನ್ಯಾಸಿಯ ಭಾವವ
ಗೆಲ್ಲುವೆ ಗಳಿಗೆಯಲಿ
ಬಂಧಿಸಿ ತೋಳಿನಲಿ ನಿಲಿಸುವೆ
ವ್ಯಂಗ್ಯ ಹಾಸ್ಯದಲ್ಲಿ
ಮಣಿಪುರ ರಾಜಕುಮಾರಿಗೆ ಪ್ರಿಯನೆದೆ
ಯೊಳು ಅರಳಲಿ ದಾರಿ.[೧]

ಚಿತ್ರವರ್ಮನ ರಾಜ್ಯಭಾರದಲ್ಲಿ ತಾನೂ ಪಾಲ್ಗೊಂಡು ಹಲವಾರು ಯುದ್ಧಗಳಲ್ಲಿ ಪಾಲ್ಗೊಂಡು ವೀರತನವನ್ನು, ಧೈರ್ಯವನ್ನು ಕಲಿತುಕೊಂಡಳು. ಚಿತ್ರಾಂಗದೆ ಯುವತಿಯಾದಳು. ಈಕೆಯ ಹೆಸರು ಕೇಳಿದ ವೈರಿರಾಜರು ಕಂಪಿಸುವಂತಾದರು. ತಂದೆಯ ನೆರವಿಲ್ಲದೇ ಶತ್ರುಗಳನ್ನು ಸೋಲಿಸಿ, ಹಿಮ್ಮೆಟ್ಟಿಸುವ ಹಂತಕ್ಕೆ ಬಂದು ನಿಂತಳು.

ಹಸ್ತಿನಾವತಿಯನ್ನು ರಾಜಧಾನಿ ಮಾಡಿಕೊಂಡು ರಾಜ್ಯಭಾರ ಮಾಡುತ್ತಿದ್ದ ಪಾಂಡವರು, ಸಾಂಸಾರಿಕವಾದ ಗೊಂದಲಕ್ಕೊಳಗಾಗಿ, ಋಷಿಯೊಬ್ಬನ ಸಲಹೆಯಂತೆ ದ್ರೌಪದಿಯೊಡನೆ ಒಬ್ಬೊಬ್ಬರು ಒಂದೊಂದು ವರ್ಷ ಸಂಸಾರ ಮಾಡುವಂತೆ ಒಪ್ಪಂದವಾಯಿತು. ತುರ್ತು ಕಾರ್ಯದ ಮೇಲೆ ರಾಜಧಾನಿಯನ್ನು ಬಿಟ್ಟು ಹೋಗಬೇಕಾದಾಗ, ಅರ್ಜುನನು ದ್ರೌಪದಿಯ ಅಂತಃಪುರಕ್ಕೆ ಹೋಗಿ ಅಲ್ಲಿ ತನ್ನ ಗಾಂಡೀವವನ್ನು ಬಾಣ ಬತ್ತಳಿಕೆಯನ್ನು ಪಡೆದು ಬರುವ ಕಾರಣದಿಂದ ಒಪ್ಪಂದವನ್ನು ಮರೆತು ಧರ್ಮರಾಯನೊಡನೆ ಸತಿಧರ್ಮವನ್ನು ಆಚರಿಸುತ್ತಿದ್ದ ಸಮಯದಲ್ಲಿಯೇ ಅತಿಕ್ರಮಿಸಿದ. ಇದರ ಸಲುವಾಗಿ ಒಪ್ಪಂದದಂತೆ ಹನ್ನೆರಡು ವರ್ಷ ದೇಶ ಪರ್ಯಟನೆ ಮಾಡಲು ಹೊರಟುಹೋದ. ನಾನಾ ದೇಶಗಳನ್ನು ಸಂಚರಿಸಿ ಎಲ್ಲೆಡೆ ಇದ್ದ ಋಷ್ಯಾಶ್ರಮಗಳನ್ನು, ತೀರ್ಥಗಳನ್ನು, ಪುಣ್ಯಕ್ಷೇತ್ರಗಳನ್ನು ಸಂದರ್ಶಿಸಿ ಪರ್ಯಟನೆಯ ಕೊನೆಯ ವರ್ಷದಲ್ಲಿ ಮಹೇಂದ್ರ ಪರ್ವದಲ್ಲಿ ತಪಸ್ಸು ಮಾಡುತ್ತಿದ್ದ ಋಷಿಗಳನ್ನು, ಅಲ್ಲಿಯ ಪುಣ್ಯಕ್ಷೇತ್ರಗಳನ್ನು ಸಂದರ್ಶಿಸಿ ಹಾಗೆಯೇ ಕಡಲ ತಡಿಯಲ್ಲಿ ನಡೆದು ಬರುತ್ತಾ ಮಣಿಪುರವೆಂಬ ನಗರವನ್ನು ಪ್ರವೇಶಿಸಿದ. ಅರಣ್ಯದ ಉಪವನದಲ್ಲಿ ಸಂಚರಿಸುತ್ತಿದ್ದ ಚಿತ್ರಾಂಗದೆ, ಅರ್ಜುನನನ್ನು ಕಂಡು ತಾರುಣ್ಯ ಪ್ರಭಾವದಿಂದ ಮೋಹಿತಳಾದಳು. ಸಂಪ್ರದಾಯ, ಸೌಜನ್ಯಗಳನ್ನು ಮೀರಿ ಅರ್ಜುನನನ್ನು ಸಮೀಪಿಸಿ; ಪ್ರಶಾಂತ ಸ್ಥಳದಲ್ಲಿ ಧ್ಯಾನಮಗ್ನನಾಗಿದ್ದ ಅರ್ಜುನನ ಗಮನ ಸೆಳೆದು ಮೋಹಪರವಶಳಾದಳು. ಅರ್ಜುನನಿಗೆ ಚಿತ್ರಾಂಗದೆ ಮೋಹಿನಿಯಾಗಿ ಕಾಣಿಸಲಿಲ್ಲ. ತಾನೊಂದು ವ್ರತದಲ್ಲಿರುವೆನೆಂದು ಉದಾಸೀನದ

೧. ರವೀಂದ್ರನಾಥ ಠಾಕೂರರ 'ಚಿತ್ರಾಂಗದಾ ಮತ್ತು ಇಸ್ಪೀಟ್ ರಾಜ್ಯ', ಅನು: ಲಕ್ಷ್ಮೀನಾರಾಯಣಭಟ್ಟ, ಬಿ.ಎಲ್.ಮಂಜುನಾಥ, ೧೯೮೪, ಕನ್ನಡ ಸಾಹಿತ್ಯ ಪರಿಷತ್ತು, ಪುಟ-೧೦, ೧೧.

ಉತ್ತರ ನೀಡಿದ. ಚಿತ್ರಾಂಗದೆಗೆ ದೇಹ ಧರ್ಮ ಜಾಗೃತವಾಯಿತು. ಹೇಗಾದರೂ ಮಾಡಿ ಅರ್ಜುನನೆಂಬ ಮೋಹನಾಂಗನನ್ನು ಮೋಹದಿಂದ ಗೆದ್ದು ವಶಪಡಿಸಿಕೊಳ್ಳಬೇಕೆಂಬ ಹಂಬಲವಾಯಿತು.

ಅರಮನೆಗೆ ಬಂದು ಆಪ್ತ ಸಖಿಯರ ನೆರವಿನಿಂದ ಅನನ್ಯ ರೀತಿಯಲ್ಲಿ ಅಲಂಕರಿಸಿಕೊಂಡು ಅರ್ಜುನನ ಬಳಿ ಬಂದು ವಿವಾಹವಾಗೆಂದು ತನ್ನ ಹಂಬಲವನ್ನು ಹೇಳಿಕೊಳ್ಳುತ್ತಾಳೆ. ಅರ್ಜುನನಿಗೆ ಚಿತ್ರಾಂಗದೆಯ ಬಗ್ಗೆ ಉದಾಸೀನ ಭಾವವೇ ಬೆಳೆದು ತನಗೆ ಒಂದು ವರ್ಷದ ಪರ್ಯಂತ ವ್ರತವಿರುವುದೆಂದು ನೆಪ ಹೇಳಿ ವಿವಾಹವನ್ನು ನಿರಾಕರಿಸುತ್ತಾನೆ. ಚಿತ್ರಾಂಗದೆಗೆ ಅರ್ಜುನನು ತನ್ನನ್ನು ನಿರಾಕರಿಸಿದ ಕಾರಣ ತಿಳಿದು ಹೋಗಿ ತನ್ನ ತಾರುಣ್ಯದ ಅಧಿದೇವನಾದ ಮನ್ಮಥನನ್ನು ಅಥವಾ ಕಾಮದೇವನನ್ನು ಕುರಿತು ತಪೋಮಗ್ನಳಾಗುತ್ತಾಳೆ. ಕಾಮದೇವ ಯೌವನಿಗರ ಇಷ್ಟ ದೇವನಾದ್ದರಿಂದ ಚಿತ್ರಾಂಗದೆಗೆ ಮೈದೋರುತ್ತಾನೆ. ಚಿತ್ರಾಂಗದೆ ತನ್ನ ಮತ್ತು ಅರ್ಜುನನ ನಡೆದ ಪ್ರೇಮಭಗ್ನತೆಯ ಕಥೆಯನ್ನು ಹೇಳಿಕೊಂಡು ಪಾಲಿಸೆಂದು ಬೇಡುತ್ತಾಳೆ. ತರುಣ-ತರುಣಿಯರು, ಬೇಡದೇ ತಾನೇ ವರ ನೀಡುವ ಪ್ರೇಮದೇವತೆ ಚಿತ್ರಾಂಗದೆಯ ಹಂಬಲವನ್ನು ತಣಿಸಲು ಮುಂದಾಗುತ್ತಾನೆ.

ರವೀಂದ್ರನಾಥ ಠಾಕೂರರಿಗೆ ಭಾರತೀಯ ತಾತ್ವಿಕ ಚಿಂತನೆಗಳ ಬಗ್ಗೆ ಅಪಾರವಾದ ಪ್ರೀತಿ ಇತ್ತೆಂಬುದರಲ್ಲಿ ಯಾವುದೇ ಸಂದೇಹವಿಲ್ಲ. 'ಯೌವನ' ಬಂದು ಹೋಗುವ ಅತಿಥಿ, ಅದು ಶಾಶ್ವತವಲ್ಲ. ಯೌವನೋದಯವಾಗುತ್ತಿದ್ದಂತೆ ಸ್ತ್ರೀ-ಪುರುಷರು ತಮ್ಮ ನಿಗ್ರಹ ಗುಣಗಳ ಬಗ್ಗೆ ನಂಬಿಕೆ ಸಡಿಲಗೊಳಿಸಿಕೊಳ್ಳುತ್ತಾರೆ. ಆಗ ಶರೀರಧರ್ಮ ಮತ್ತು ನೀತಿಧರ್ಮಗಳ ನಡುವೆ ಒಂದು ಗೊಂದಲದ ಸಮರವೇ ಉಂಟಾಗುತ್ತದೆ. ಪೌರಾಣಿಕ ಆಶಯಗಳಲ್ಲಿ ಚಿರಯೌವನ ಒಂದು ಮಹಾಪುಣ್ಯದಂತೆ ಚರ್ಚೆಗೊಳಗಾಗಿದೆ. ಯಯಾತಿಯೆಂಬ ಪೌರಾಣಿಕ ಕಾಲದ ದೊರೆ ತನ್ನ ಮಗನಾದ ಪುರುವಿನಿಂದಲೇ ಯೌವನ ಎರವಲು ಪಡೆಯುವ ಆಮಿಷಕ್ಕೆ ಒಳಗಾಗುತ್ತಾನೆ.

ರವೀಂದ್ರನಾಥರು ಚಿತ್ರಿಸಿದ ಚಿತ್ರಾಂಗದೆ, ಮದನನಿಂದ ಸುಂದರ ರೂಪಿನ ಪಡೆದದ್ದು, ಕೇವಲ ಒಂದು ವರ್ಷದ ಅವಧಿಗೆ. ಒಂದು ವರ್ಷದಳೆದ ಮೇಲೆ ಚಿತ್ರಾಂಗದೆಯ 'ಲಾವಣ್ಯ' ಹೊರಟು ಹೋಗಿ ಮೊದಲಿನ ಒರಟು ಸ್ತ್ರೀ ರೂಪವೇ ಪ್ರಾಪ್ತವಾಗುತ್ತದೆ. ಕೇವಲ ಮದನನ ವರದ ಪ್ರಭಾವದಿಂದ ಲಾವಣ್ಯವತಿಯಾದ ಚಿತ್ರಾಂಗದೆಯನ್ನು ಅರ್ಜುನ ಗಾಂಧರ್ವ ವಿವಾಹವಾದನೆಂಬುದನ್ನು ಕಟ್ಟಕಡೆಗೆ ಚಿತ್ರಾಂಗದೆ ವೀರವನಿತೆಯೆಂದು ಗ್ರಹಿಕೆಯಾದ ಮೇಲೆ ಆಕೆಯನ್ನು ತನ್ನ ಹೃನ್ಮಂದಿರದಲ್ಲಿ ಸ್ಥಾಪಿಸಿಕೊಳ್ಳುತ್ತಾನೆ. ಈ ಬದಲಾವಣೆಯಿಂದ ಅರ್ಜುನ ಚಿತ್ರಾಂಗದೆಯರ ಪಾತ್ರಗಳು ತುಂಬಾ ಔನ್ನತ್ಯವನ್ನು ಗಳಿಸುತ್ತವೆ. ಇಲ್ಲಿ ಸ್ತ್ರೀ-ಪುರುಷರ ಅಸ್ಥಿರ ಚಾಪಲ್ಯಗಳು ಮಾಯವಾಗಿ ದಿಟವಾದ ನಿಷ್ಕಲ್ಮಶವಾದ ಪ್ರೇಮ ಇಬ್ಬರ ಸಂಬಂಧವನ್ನು ಕಟ್ಟಿಹಾಕುತ್ತದೆ.

ಮದನನ ವರಬಲದಿಂದ 'ಚಿತ್ರಾಂಗದೆ' ಅಲೌಕಿಕವಾದ ಬೆಡಗನ್ನು ಬಿನ್ನಾಣವನ್ನು ಮೋಹಕ ಕುಡಿ ನೋಟವನ್ನು ಪಡೆದು ಅರ್ಜುನನ ಎದುರಾಗುತ್ತಾಳೆ. ಸರೋವರದ ತಿಳಿನೀರಲ್ಲಿ ತನ್ನ ಬಿಂಬವನ್ನು ನೋಡಿಕೊಂಡು,

ಮೀನಕೇತು,
ಯಾವ ನಿಶಾಚರಿಯ ನನ್ನ
ಒಡಲೊಳಿರಿಸಿದೆ.
ಈ ಮಾಯಾ ರೂಪವೋ
ಎಂಥ ಶಾಪ ನನಗೆ !
ಕ್ಷಣಿಕ ಚಲುವಿನೀ ಪ್ರವಾಹ
ರಕ್ತವ ಕುದಿಸಿ
ಉನ್ಮಾದ ದೊಳಿಳಿಸಿದೆ...[೨]

ಪರಸ್ಪರ ಪರಿಚಯವಾದ ಮೇಲೆ ಅರ್ಜುನ ಚಿತ್ರಾಂಗದೆಯ ಲಾವಣ್ಯವನ್ನು ನೋಡಿ ಮೋಹಿತನಾಗುತ್ತಾನೆ.

"ಬಾ ಒಲವೇ ಎಚ್ಚರಾದುದೆನ್ನ ಯೌವನ
ಕಳಚಿತು ಈ ಸನ್ಯಾಸಿಯ ನಿಯಮ ಬಂಧನ
ಪೌರುಷದ ತವಕವನು
ಗೌರವಿಸುವೆ ನಾನು"[೩]

ಈ ಹೇಳಿಕೆಗಳಲ್ಲಿ ಅರ್ಜುನ ಪ್ರೇಮದ ವಿಷಯವಾಗಿ ಗೌರವ ಮನೋಭಾವವನ್ನು ಹೊಂದುತ್ತಾನೆ. ಆ ಆಶ್ವಾಸನೆ ಚಿತ್ರಾಂಗದೆಗೆ ಬಹುಪ್ರಿಯವಾಗುತ್ತದೆ. ತನ್ನೆಲ್ಲ ಕನಸುಗಳನ್ನು ಅರ್ಜುನನ ರೂಪದಲ್ಲಿ ಸಾಕಾರ ಮಾಡಿಕೊಳ್ಳುತ್ತಾಳೆ.

ಸ್ನೇಹದ ಹೊನಲಲಿ ವಿನೋದದಲೆಯಲಿ
ಮುಗಿಲದಾರಿಯಲಿ ತೇಲೋಣ
ಬಗೆ ಬಗೆ ರಂಗಿನ ನೃತ್ಯಭಂಗಿಯಲಿ
ಮಲ್ಲಿಗೆವನಗಳ ಗಂಧದಲಿ
ಮೋದ ಮೋಹದಲಿ ನಲಿಯೋಣ.[೪]

ಕೆಲ ಸಮಯದ ನಂತರ ಚಿತ್ರಾಂಗದೆಯು ನಿರ್ಗಮನವಾಗುತ್ತದೆ. ಅರ್ಜುನ ಏಕಾಂಗಿಯಾಗುತ್ತಾನೆ. ಚಿತ್ರಾಂಗದೆಯಿಲ್ಲದ ಕ್ಷಣಗಳು ತುಂಬಾ ಭಾರವಾದಂತೆನಿಸುತ್ತವೆ.

---

೨. ರವೀಂದ್ರನಾಥ ಠಾಕೂರರ 'ಚಿತ್ರಾಂಗದಾ ಮತ್ತು ಇಸ್ಪೀಟ್ ರಾಜ್ಯ', ಅನು: ಲಕ್ಷ್ಮೀನಾರಾಯಣಭಟ್ಟ, ಬಿ.ಎಲ್.ಮಂಜುನಾಥ, ೧೯೮೪, ಕನ್ನಡ ಸಾಹಿತ್ಯ ಪರಿಷತ್ತು, ಪುಟ-೧೩.
೩. ಅದೇ, ಪುಟ-೧೫.
೪. ಅದೇ, ಪುಟ-೧೬.

ತನಗೇನಾಗುತ್ತಿದೆ, ಯಾವ ಕಾರಣಕ್ಕೆ ಈ ತಳಮಳವುಂಟಾಗುತ್ತಿದೆ ಎಂದು ಅರ್ಜುನನಿಗೆ ತಿಳಿಯದೇ ಇದ್ದಿರಲಿಲ್ಲ.

"ಯಾವ ಅಶಾಂತಿ ಕಾಡಿದೆ ನನ್ನನು
ಸುಡುವುದಾವ ಜ್ವಾಲೆ?
ನಿರ್ದಯ ಬಾಣ ಇರಿದಿದೆ ಎದೆಯನು
ಕವಿದಿದೆ ಹೃದಯವ ನೋವು?"[೫]

ನಲ್ಲ-ನಲ್ಲೆಯರು ವಾಸ್ತವ ಲೋಕವನ್ನು ಮರೆತು ಪ್ರೇಮದ ಭಾವಪ್ರಪಂಚದಲ್ಲಿ ವಿಹರಿಸುತ್ತಾರೆ. ಅರ್ಜುನನ ಪ್ರೇಮಾನುರಾಗದ ಸಲುವಾಗಿ ಚಿತ್ರಾಂಗದೆ ತನ್ನ ರಾಜ್ಯಾಡಳಿತದ ಪ್ರಜ್ಞೆಯನ್ನು ತಪ್ಪುತ್ತಾಳೆ. ಇಂತಹ ಸಮಯದಲ್ಲಿ ನೆರೆಯ 'ಶತ್ರುಪಡೆ' ಮಣಿಪುರದ ಮೇಲೆ ದಾಳಿ ಮಾಡಲು ಹೊಂಚು ಮಾಡುತ್ತಿರುತ್ತದೆ. ಪ್ರಜೆಗಳು ಯುದ್ಧ ಭೀತಿಯಿಂದ ಶಕ್ತಿರೂಪಿಯಾದ ಚಿತ್ರಾಂಗದೆಯನ್ನು ಕಾಣಲಾಗದೆ ಶತ್ರುಭಯದಿಂದ ವಿಹ್ವಲರಾಗುತ್ತಾರೆ. ಪ್ರಜೆಗಳಿಗೆ ವ್ರತದ ನೆಪ ಹೇಳಿ ಒಂದು ವರ್ಷ ಪ್ರೇಮದ ಏಕಾಂತ ವಾಸದಲ್ಲಿ ಅರ್ಜುನನೊಡನೆ ಸೆರೆಯಾಗಿರುತ್ತಾಳೆ. ಪ್ರಜೆಗಳು ಯುದ್ಧ ಭೀತಿಯನ್ನು ಶೂರ ರಾಜಕುಮಾರಿ ಚಿತ್ರಾಂಗದೆಗೆ ಜಯಕಾರ ಮಾಡುವ ಮೂಲಕ ವ್ಯಕ್ತಗೊಳಿಸುತ್ತಾರೆ. ಅರ್ಜುನ ಶೂರ ರಾಜಕುಮಾರಿ ಯಾರೆಂದು ಶಂಕಿಸುತ್ತಾನೆ. ಶೌರ್ಯದ ಬಗೆಗೆ ತುಂಬಾ ಪ್ರೀತಿಗೌರವವುಳ್ಳ ಅರ್ಜುನನು "ಜನಪದ ವಾಸಿಗಳೇ ನಿಮ್ಮ ರಕ್ಷಿಸುವವರಿಲ್ಲವೆ ಯಾರು?" ಎಂಬ ಪ್ರಶ್ನೆ ಕೇಳುತ್ತಾನೆ. ಹಳ್ಳಿಯ ಜನ ಚಿತ್ರಾಂಗದೆಯ ಬಗ್ಗೆ ಸುಳಿವು ಕೊಡುತ್ತಾರೆ. ಆ ರಾಜಕುಮಾರಿ ನಮಗೆಲ್ಲ ಮಮತೆಯಲ್ಲಿ ತಾಯಿ, ಶೌರ್ಯದಲ್ಲಿ ಪುರುಷ ರೂಪಿ ರಾಜ ಎನ್ನುತ್ತಾರೆ. ಅರ್ಜುನನಿಗೆ ವೀರ ರಾಜಕುಮಾರಿ ಚಿತ್ರಾಂಗದೆಯ ಬಗ್ಗೆ ಕುತೂಹಲವುಂಟಾಗಿ ಪ್ರಿಯತಮೆ ವರರೂಪಿಯೊಡನೆ ಹೀಗನ್ನುತ್ತಾನೆ. (ಪುಟ-೨೧)

ಚಿತ್ರಾಂಗದಾ ರಾಜಕುವರಿ
ಅವಳ ತಿಳಿವ ತವಕವೊಂದೆ
ಹಿಂಡುತಲಿದೆ ಎದೆಯ.
ಕೇಳಿರುವೆನು ಅವಳ ಬಗೆಗೆ
ಜನದ ಹೆಮ್ಮೆ ನುಡಿಯ

ಸ್ನೇಹದಲ್ಲಿ ನಾರಿ ಶಕ್ತಿಯಲ್ಲಿ ಕಾಳಿ
ಸಿಂಹಾಸನ ವೇರಿರಲು ಸಿಂಹವಾಹಿನಿ
ಗೊತ್ತೆ ನಿನಗೆ ಹೇಳು ಚಲುವೆ
ಆ ಮೋಹಿನಿ![೬]

---

೫. ರವೀಂದ್ರನಾಥ ಠಾಕೂರರ 'ಚಿತ್ರಾಂಗದಾ ಮತ್ತು ಇಸ್ಪೀಟ್ ರಾಜ್ಯ', ಅನು: ಲಕ್ಷ್ಮೀನಾರಾಯಣಭಟ್ಟ, ಬಿ.ಎಲ್.ಮಂಜುನಾಥ, ೧೯೮೪, ಕನ್ನಡ ಸಾಹಿತ್ಯ ಪರಿಷತ್ತು, ಪುಟ-೧೭.

೬. ಅದೇ, ಪುಟ-೨೨.

ಎಂದು ಚಿತ್ರಾಂಗದೆಯನ್ನೇ ಕೇಳುತ್ತಾನೆ ಆ ತನಕ ಚಿತ್ರಾಂಗದೆ ಮತ್ತು ಅರ್ಜುನನ ನಡುವೆ ನಿರುದ್ದಿಶ್ಯವಾದ ಪ್ರೇಮವಿರುತ್ತದೆ. ಅದು ಚೆಲುವು ಮತ್ತು ತಾರುಣ್ಯದ ಸೆಳೆತ; ಚಿತ್ರಾಂಗದೆಗೆ ತನ್ನ ಪೂರ್ವರೂಪ ಬಂದು ತನ್ನ ಬಗೆಗೆ ತನಗೆ ಬೇಸರ ಮೊಳೆಯುತ್ತದೆ. ಉಪೇಕ್ಷೆಯ ಭಾವದಲ್ಲಿ ಹೀಗೆನ್ನುತ್ತಾಳೆ.

ಛೀ !
ಎಂತಹ ಕುರೂಪಿ ಅವಳಿಗೆ ಇಂಥ
ಬಾಗಿದ ಹುಬ್ಬಿಲ್ಲ, ಹೊಳೆಯುವ ಕಪ್ಪು ಕಣ್ಗಳಿಲ್ಲ
ಲಜ್ಜೆಯಿಲ್ಲ ನಯ ಭಯವಿಲ್ಲ
ಹೊನ್ನ ಹೀಗಳೆವ ಹೊಳಪಿಲ್ಲ
ಬೇಧಿಸಲಾರದು ವೀರನೆದೆಯನು
ಕುಟಿಲ ಕಟಾಕ್ಷದ ಸರಳು[೭]

(ಹೊಳಪಿಲ್ಲ: ಇಂಗಿತ ಲಯ ಮಾಧುರ್ಯದ ನೀರವಮಂಗಳ ಗಾನದ ಮೆಲುಪಿಲ್ಲ ಹಾರಿಸುವುದು ನಿಜ ಎಂಥ ಗುರಿಯನ್ನು ಕುಶಲ ಹಸ್ತ ಬೆರಳು) (ಪುಟ–೨೨, ೨೩)

ಅರ್ಜುನನಿಗೆ ಚಿತ್ರಾಂಗದೆಯ ಉಪೇಕ್ಷೆ ಸಹನವಾಗುವುದಿಲ್ಲ. ಕುತೂಹಲ ಕೆರಳುತ್ತದೆ.

ತಾಳಲಾರೆ ನನ್ನಾಸೆಯ ಹೇಳು
ಎಲ್ಲಿರುವಳು ಆ ವೀರ್ಯವತಿ?
ಒರೆಗಳಚಿದ ಅಸಿಲತೆಯಂತೆ
ಸೆಳೆದೆತ್ತಿದ ವಜ್ರಾಯುಧದಂತೆ
ರುದ್ರರಮ್ಯ ಮೂರ್ತಿ
ಭೋಗಿಯ ಕಣ್ಣಾಸೆಯಲ್ಲ ಅವಳು
ವೀರನ ತೋಳ್ಗಳ ಶೋಭೆ.[೮]

ಅರ್ಜುನನಿಗೆ ಬಹುದಿನದಿಂದ ಸಂಯಮದಿಂದಿದ್ದುದು, ಸಾಕಾಗಿ ಹೋಗಿದೆ ಯುದ್ಧವೆಂದರೆ ಶೌರ್ಯಭಾವ ಬುಗ್ಗನೆ ಹೊತ್ತಿ ಜ್ವಾಲೆ ಕೆದರುತ್ತದೆ. ಚಿತ್ರಾಂಗದೆಯ ಜೊತೆ ಸೇರಿ ಶತ್ರುಗಳನ್ನು ಮಣಿಸಿಬಿಡುವ ಮನಸ್ಸಾಗುತ್ತದೆ. ಯುದ್ಧದ ಹಂಬಲ ತೀವ್ರವಾಗುತ್ತದೆ.

ಜೊತೆ ದೊರೆಯಲು ಚಿತ್ರಾಂಗದೆ – ಕೂಡಲೆ
ಆರ್ತರ ರಕ್ಷಿಸಲು
ನಿಲ್ಲದೆ ಓಡುವೆನು
ಭೋಗಾವೇಷವ ದಾಟಿ ರಣ
ಭೂಮಿಯ ಸೇರುವೆನು

---

೭. ರವೀಂದ್ರನಾಥ ಠಾಕೂರರ 'ಚಿತ್ರಾಂಗದಾ ಮತ್ತು ಇಸ್ಪೀಟ್ ರಾಜ್ಯ', ಅನು: ಲಕ್ಷ್ಮೀನಾರಾಯಣಭಟ್ಟ, ಬಿ.ಎಲ್.ಮಂಜುನಾಥ, ೧೯೮೪, ಕನ್ನಡ ಸಾಹಿತ್ಯ ಪರಿಷತ್ತು, ಪುಟ–೨೨–೨೩.
೮. ಅದೇ, ಪುಟ–೨೩.

ಮೊಳಗಿದೆ ಶಸ್ತ್ರದ ಝಣ ಝಣನಾದ
ಹರಿಯುವ ನೆತ್ತರಲಿ
ಚಿತ್ರಾಂಗದಾ ರಾಜಕುಮಾರಿ
ಪೌರುಷವತಿ ನಾರಿ...[೯]

ಚಿತ್ರಾಂಗದೆಯ ಸುಳಿವನ್ನು ಸಖಿಯರು ಅರ್ಜುನನಿಗೆ ಮನವರಿಕೆ ಮಾಡಿಕೊಡುತ್ತಾರೆ. ಅರ್ಜುನ ಸಂತುಷ್ಟನಾಗಿ ಧನ್ಯ-ಧನ್ಯ ಧನ್ಯ ನಾನು ಎಂದು ಸಂತಸಗೊಳ್ಳುತ್ತಾನೆ.

ರವೀಂದ್ರನಾಥರು ಗೀತ-ನೃತ್ಯರೂಪಕವಿದನ್ನು ವಸಂತ ಋತುವಿಗೆ ಸ್ವಾಗತ ನೀಡುವ ವೃಂದಗಾನದೊಡನೆ ಮುಕ್ತಾಯಗೊಳಿಸುತ್ತಾರೆ. ಚಿತ್ರಾಂಗದಾ ನೃತ್ಯರೂಪಕವಾದ್ದರಿಂದ ರಾಗದ ಮಾಧುರ್ಯ, ಮನಮೋಹಕ ನೃತ್ಯಗಳನ್ನು, ಗೀತ ಕಾವ್ಯದ ಶೈಲಿಯಲ್ಲಿ ರಚಿಸಿದ್ದಾರೆ. ಎಲ್ಲಿಯೂ ಶೃಂಗಾರದ ವಲಯ ರೇಖೆಯನ್ನು ಅತಿಕ್ರಮಿಸದೆ, ಸಂಯಮ ಮತ್ತು ಸ್ನೇಹಕ್ಕೆ ಕುಂದುಂಟಾಗದಂತೆ ವರ್ಣಿಸುತ್ತಾರೆ. ಚಿತ್ರಾಂಗದೆ-ಅರ್ಜುನರ ನಡುವೆ ಸಂಭೋಗ ಶೃಂಗಾರದ ಉದ್ವಿಗ್ನತೆಯಿಲ್ಲ. ಪ್ರತಿಪಾತ್ರದ ಸಂಭಾಷಣೆಯಲ್ಲಿಯೂ ಭಾರತೀಯ ತಾತ್ವಿಕ ನೀತಿ ಹದವಾಗಿ ಮೃದುವಾಗಿ ಬೆರೆತು ಕೊಂಡಿದೆ.

ರವೀಂದ್ರನಾಥ ಠಾಕೂರರು, ಚಿತ್ರಾಂಗದಾ ನೃತ್ಯ-ಸಂಗೀತ ರೂಪಕವನ್ನು ಬರೆದದ್ದು ಕ್ರಿ.ಶ. 1936ರ ಸಮಯದಲ್ಲಿ ಕವಿ-ನಿಸರ್ಗ ಪ್ರೀತಿಯುಳ್ಳವರಾದ ಕಾರಣ ರೂಪಕದಲ್ಲಿ ವಸಂತ ಋತುವಿನ ವರ್ಣನೆ ತುಂಬು ಕಾವ್ಯಭಾಷೆಯಲ್ಲಿದೆ. ನಿಸರ್ಗ ರಮಣೀಯತೆ ಕೇವಲ ಸಾಂಪ್ರದಾಯಕ ವರ್ಣನೆಯಾಗಿರದೆ, ಅದೂ ಒಂದು ಪಾತ್ರದಂತೆ ಅಥವಾ ವೈಭವಪೂರ್ಣ ರಂಗಸಜ್ಜಿಕೆಯಂತೆ ರೂಪಕಕ್ಕೆ ಹೊಂದಿಕೊಂಡಿದೆ. ಕವಿ ರವೀಂದ್ರರಿಗೆ ಈ ರೂಪಕವನ್ನು ರಚಿಸಲು ಸ್ಫೂರ್ತಿಯೂ ವಸಂತ ಮಾಸವೇ ಆಗಿದೆ. ಚಿತ್ರಾಂಗದೆ-ಅರ್ಜುನನನ್ನು ಮೋಹದಿಂದ ಸೆಳೆಯಲು ತನಗೆ ಮದನನಿಂದ ಲಭ್ಯವಾದ ಚಲುವೇ ಕಾರಣವೆಂದು ಆಕೆ ಭಾವಿಸುವುದಿಲ್ಲ. ಜೀವನದ ಒಂದು ಘಟ್ಟದಲ್ಲಿ ಅತಿಥಿಯಂತೆ ಬಂದು ಹೋಗುವ ತಾತ್ಕಾಲಿಕ ಮೋಹನ ಶಕ್ತಿಯೆಂದು ಆಕೆ ಅರಿತಿದ್ದಳು. ದೈಹಿಕವಾದ ಆಕರ್ಷಣೆ ಭೋಗದತ್ತ ಜಾರದೆ, ಅದಕ್ಕೂ ಮೀರಿದ ಬದುಕಿಗೆ ಸ್ನೇಹಪರತೆಯನ್ನುಂಟು ಮಾಡಬೇಕು. ಅದು ಶಾಶ್ವತವಾದುದು ಮತ್ತು ಸಾರ್ಥಕವಾದುದು ಎಂಬ ತತ್ವದ ನಿರ್ವಹಣೆ ಈ ರೂಪಕದಲ್ಲಿ ವಿಶಿಷ್ಟ ಗುಣವಾಗಿ ಕಂಡುಬರುತ್ತದೆ.

ಮಹಾಭಾರತದಲ್ಲಿ ಕೆಲವೇ ಕೆಲವು ಶ್ಲೋಕಗಳಲ್ಲಿ ಬಂದು ಹೋಗುವ ಚಿತ್ರಾಂಗದಾ ಉಪಾಖ್ಯಾನ ರವೀಂದ್ರನಾಥ ಠಾಕೂರರ ಈ ರೂಪಕದಲ್ಲಿ ಒಂದು ಪೂರ್ಣ ರೂಪಕವಾಗಿ ಮೈತಾಳಿದೆ.

---

೯. ರವೀಂದ್ರನಾಥ ಠಾಕೂರರ 'ಚಿತ್ರಾಂಗದಾ ಮತ್ತು ಇಸ್ಪೀಟ್ ರಾಜ್ಯ', ಅನು: ಲಕ್ಷ್ಮೀನಾರಾಯಣಭಟ್ಟ, ಬಿ.ಎಲ್.ಮಂಜುನಾಥ, ೧೯೮೪, ಕನ್ನಡ ಸಾಹಿತ್ಯ ಪರಿಷತ್ತು, ಪುಟ-೨೪.

## ೭.೨. ಕುವೆಂಪು ಅವರ ಚಿತ್ರಾಂಗದ ಖಂಡಕಾವ್ಯ ಮತ್ತು ರವೀಂದ್ರನಾಥ ಠಾಕೂರರ ಚಿತ್ರಾಂಗದ ತೌಲನಿಕ ನೋಟ

ಕವಿ ಕುವೆಂಪು ಅವರು ತಮ್ಮ ಚಿತ್ರಾಂಗದಾ ಖಂಡಕಾವ್ಯದ ಮುನ್ನುಡಿಯಲ್ಲಿ ಹೇಳಿಕೊಂಡಿರುವಂತೆ, ಕವಿ ರವೀಂದ್ರರ 'ಚಿತ್ರಾ' ನಾಟಕ ಕೃತಿಯಿಂದ ಪ್ರಭಾವಿತರಾಗಿದ್ದಾರೆ. ಕವಿ ರವೀಂದ್ರನಾಥ ಠಾಕೂರರು ಅರ್ಜುನ-ಚಿತ್ರಾಂಗದೆಯರ ಅನುರಾಗದ ಪ್ರಣಯವನ್ನು ನಿಸರ್ಗದೊಡನೆ ಸಮೀಕರಿಸಿದ್ದಾರೆ. ಚಿತ್ರಾಂಗದೆ ಪ್ರಣಯಕ್ಕೆ ಸೂಕ್ತವಾದ ಹಾವ - ಭಾವ - ವಿಲಾಸ ವಿಭ್ರಮಗಳನ್ನು ಹೊಂದದೆ ಬನದ ಸ್ತ್ರೀಯಂತೆ ಅಥವಾ ಕುವೆಂಪು ಅವರು ಹೇಳುವಂತೆ ಕಿರಾತ ಕನ್ಯೆ-ಬನವೆಣ್ಣು ಆಗಿದ್ದಳು. ಮನ್ಮಥನ ಕೃಪೆಯಿಂದ ಒಂದು ಮಾಸದ ಮಟ್ಟಿಗೆ ಶೃಂಗಾರ ನಾಯಕಿಯ ರೂಪವನ್ನು ವರ ಪಡೆದು ಅರ್ಜುನನ ಮುಂದೆ ಸುಳಿದಾಗ ಅರ್ಜುನ ಮೋಹವಶನಾಗುತ್ತಾನೆ. ತಾರುಣ್ಯದಲ್ಲಿ ಮೋಹಪರವಶತೆಯು ನಿಸರ್ಗ ಸಹಜವೆಂಬ ಪರಿಕಲ್ಪನೆಯನ್ನು ಇಬ್ಬರು ಕವಿಗಳೂ ಸಮರ್ಥಿಸಿದಂತೆ ಚಿತ್ರಿಸಿದ್ದಾರೆ.

ಕುವೆಂಪು ಅವರು ಲಕ್ಷ್ಮೀಶ ಕವಿಯ ಜೈಮಿನಿ ಭಾರತದಲ್ಲಿ ಬರುವ ಬಬ್ರುವಾಹನ - ಚಿತ್ರಾಂಗದೆಯ ಪ್ರಸಂಗವನ್ನು ಪ್ರಧಾನವಾಗಿ ಬಳಸಿಕೊಂಡು 'ಚಿತ್ರಾಂಗದಾ' ಖಂಡಕಾವ್ಯವನ್ನು ರಚಿಸಿದ್ದಾರೆನ್ನಬಹುದು. ರವೀಂದ್ರನಾಥ ಠಾಕೂರರು ಬಬ್ರುವಾಹನನ ಬಗ್ಗೆ ತಮ್ಮ ಗೀತನಾಟಕದಲ್ಲಿ ಏನನ್ನು ತಿಳಿಸುವುದಿಲ್ಲ. ಕುವೆಂಪು ಅವರ ಪ್ರೇಮದ ಹೊರಗಿನ ತ್ಯಾಗ-ಬಲಿದಾನದ ಕಡೆಗೆ ಕಾವ್ಯವನ್ನು ಹೊರಳಿಸಿ ಒಂದು ಅದ್ಭುತವಾದ ರಸಸೃಷ್ಟಿಯನ್ನುಂಟು ಮಾಡಿದ್ದಾರೆ.

ಚಿತ್ರಾಂಗದೆ ತನ್ನ ಮರಣಶಯ್ಯೆಯಲ್ಲಿ ಹೇಳುವ ಮಾತುಗಳು ಕೇವಲ ತನ್ನ ಗಂಡ ಹಾಗೂ ಮಗನಿಗೆ ಅನ್ವಯಿಸದೆ ಸಮಸ್ತ ಲೋಕಕ್ಕೆ ನೀಡಿದ ಯುದ್ಧ ವಿರೋಧಿ ಶಾಂತಿಯ ಸಂದೇಶದಂತಿವೆ.

"ದುಗುಡವೇಕೆಲೆ ಮಗನೇ? ಸಂತಸಕೆ ಸಮಯವಿದು!
ನಾನಳಿವೆನಾದರೇಂ? ಮಂಗಳ ಮುಹೂರ್ತಕ್ಕೆ
ನಾನಿಲ್ಲಿಗೈ ತಂದೆನಲ್ಲದಿರ್ದೊಡೆ ನಿನ್ನ ಈ
ತಂದೆಯಂ ಕೊಲುತಿರ್ದೆ ನೀಂ ಮಹಾಪಾತಕಕೆ
ಪಕ್ಕಾಗುತಿರ್ದೆ." ಪುಟ-೮೭[೧೦]

ಯುದ್ಧದ ಸನಿಹದಲ್ಲಿ ಜಗತ್ತು ನಿಂತಿರುವಾಗ ಯುದ್ಧವಿರೋಧಿ ನಿಲುವನ್ನು ಕುವೆಂಪು ಅವರು ತಮ್ಮ ಚಿತ್ರಾಂಗದ ಖಂಡಕಾವ್ಯದಲ್ಲಿ ವಿಶದೀಕರಿಸಿದ್ದಾರೆ.

ಕನ್ನಡ ಜೈಮಿನಿ ಭಾರತದಲ್ಲಿ ಅರ್ಜುನ-ಬಬ್ರುವಾಹನ ಕಾಳಗವನ್ನು ವರ್ಣಿಸುವಾಗ ಲಕ್ಷ್ಮೀಶ ಕವಿ ಪ್ರಾಸಂಗಿಕವಾಗಿ ಚಿತ್ರಾಂಗದೆಯ ಪಾತ್ರವನ್ನು ಅನಾವರಣಗೊಳಿಸಿದ್ದಾನೆ. ಪ್ರಸ್ತುತ

---

೧೦. ಕುವೆಂಪು, ಚಿತ್ರಾಂಗದಾ, ಉದಯರವಿ ಪ್ರಕಾಶನ, ವಾಣಿವಿಲಾಸ ಪುರಂ, ಮೈಸೂರು, ೧೯೮೭, ಪುಟ-೮೭.

ಪ್ರಸಂಗದಲ್ಲಿ ಕಂಡು ಬರುವ ಚಿತ್ರಾಂಗದೆ ಬಭ್ರುವಾಹನನ ತಾಯಿ–ಇಡೀ ಪ್ರಸಂಗ 'ಉತ್ತರ ಚಿತ್ರಾಂಗದಾ' ಎನ್ನಬಹುದಾಗಿದೆ.

ರವೀಂದ್ರನಾಥ ಠಾಕೂರರು ರಚಿಸಿರುವ ಚಿತ್ರಾ ಗೀತ ನಾಟಕವು 'ಪೂರ್ವ ಚಿತ್ರಾಂಗದಾ' ಎಂದು ಕರೆಯಬಹುದಾದ ಕಾವ್ಯವೆನಿಸುತ್ತದೆ. 'ಪೂರ್ವ ಚಿತ್ರಾಂಗದಾ' ಗೀತನಾಟಕದಲ್ಲಿ ಚಿತ್ರಾಂಗದೆಯ ಪೂರ್ವ ವೃತ್ತಾಂತವನ್ನು ವಿವರಿಸಿದ್ದಾರೆ.

ತೌಲನಿಕ ಅಧ್ಯಯನದ ಹಿನ್ನೆಲೆಯಲ್ಲಿ ರವೀಂದ್ರನಾಥ ಠಾಕೂರರ 'ಚಿತ್ರಾಂಗದಾ' ನಾಟಕವನ್ನು ನೋಡುವುದಾದರೆ :

ಲಕ್ಷ್ಮೀನಾರಾಯಣಭಟ್ಟರು ಕನ್ನಡಕ್ಕೆ ಭಾಷಾಂತರಿಸಿರುವ ಚಿತ್ರಾಂಗದಾ ನಾಟಕ ಸರಳ, ಕನ್ನಡದಲ್ಲಿದೆ. ಭಾಷಾಂತರದ ಒಂದು ಮಿತಿ ಎಂದರೆ ಮೂಲ ನುಡಿಗಟ್ಟುಗಳನ್ನು ಕಾವ್ಯಭಾಷೆಯ ಸೊಗಸನ್ನು ಭಾಷಾಂತರದಲ್ಲಿ ಕಾಣಲಾಗುವುದಿಲ್ಲ. ಕುವೆಂಪುರವರ ಚಿತ್ರಾಂಗದಾ ಖಂಡಕಾವ್ಯದ ಭಾಷೆ ಮಹಾಕಾವ್ಯದ ರಚನೆಗೆ ತೊಡಗಿಸಿಕೊಳ್ಳುತ್ತಿರುವಂತೆ ಭಾಸವಾಗುತ್ತದೆ. ಕುವೆಂಪು ಅವರು ಮಹಾಛಂದಸ್ಸನ್ನು ಹೇಗೆ ಬಳಸಿಕೊಳ್ಳುತ್ತಿದ್ದರೆಂಬುದು ಸೂಕ್ಷ್ಮವಾಗಿ ತಿಳಿದುಬರುತ್ತದೆ. ರವೀಂದ್ರನಾಥ ಠಾಕೂರರು, ಕುವೆಂಪು ಅವರು ಒಂದೇ ಮೂಲದಿಂದ ಕಥಾವಸ್ತುವನ್ನು ಆರಿಸಿಕೊಂಡರೂ ಇಬ್ಬರೂ ಮಹಾಕವಿಗಳೂ ಭಿನ್ನ ದೃಷ್ಟಿಯಿಂದ 'ಚಿತ್ರಾಂಗದಾ' ಕಥೆಯನ್ನು ಅವಲೋಕನ ಮಾಡಿದ್ದಾರೆ. ಒಂದು ವಿಚಾರದಲ್ಲಿ ಈ ಇಬ್ಬರೂ ಕವಿಗಳು ಕಾವ್ಯರಚನೆಯಲ್ಲಿ ಸಾಮ್ಯತೆಯನ್ನು ಹೊಂದುತ್ತಾರೆ. ಆ ಸಾಮ್ಯತೆ 'ನಿಸರ್ಗ'ದ ವರ್ಣನೆಯಲ್ಲಿ ಕಾಣುತ್ತದೆ. ಪ್ರಕೃತಿಯ ವರ್ಣನೆ ಸಹಜವಾಗಿ ನಾಟಕದಲ್ಲಿ ಕಾವ್ಯದಲ್ಲಿ ಒಂದು ಪ್ರಧಾನ ಪಾತ್ರದಂತೆ ಅನುರಣಿಸುತ್ತದೆ.

ಈರ್ವರ ನಿಸರ್ಗದ ವರ್ಣನೆ ಇಂತಿದೆ.

**ರವೀಂದ್ರರು :–**

ಬಾರೋ ವಸಂತ ಸುಮ ಪರಿಮಳದ
ಪ್ರಿಯಸ್ಪರ್ಶಕ್ಕೆ ಮೃದುಗೊಳ್ಳುತ
ಎಲೆಗಳ ಮರ್ಮರ ದನಿಯಲಿ ಸಾಗುತ
ಸವಿಯೆಲರಲಿ ಸವಿನೆರಳಲಿ ಬಾ
ಬಾ ವಸಂತ ಮಧುಭಾಂಡಕೆ
ಹೂ ಸೊಕ್ಕಿದ ಮಲ್ಲಿಗೆ ಬನಕೆ
ಬಾ ನಗುಚೆಲ್ಲುತ ಕುಸುಮ ಮುಖ
ನಂದನವನ ಚಿರಯಾತ್ರಿಕ
ಕೊಳಲ ಮಾಯೆ ತಟ್ಟಿದ ಇರುಳಲಿ ತಾ
ತುಂಬಿದಮೃತ ಕಳಶ.[೧೧]

---

೧೧. ರವೀಂದ್ರನಾಥ ಠಾಕೂರರ 'ಚಿತ್ರಾಂಗದಾ ಮತ್ತು ಇಸ್ಪೀಟ್ ರಾಜ್ಯ', ಅನು: ಲಕ್ಷ್ಮೀನಾರಾಯಣಭಟ್ಟ, ಬಿ.ಎಲ್.ಮಂಜುನಾಥ, ೧೯೮೪, ಕನ್ನಡ ಸಾಹಿತ್ಯ ಪರಿಷತ್ತು, ಪುಟ–೨೯.

**ಕುವೆಂಪು :-**

ವನವನಿತೆ ತನ್ನ ನೇಹದ ವಸಂತೋದಯಾನಂದದಿಂ
ಹರ್ಷಾಶ್ರುಬಿಂದು ವರ್ಷವ ಸೂಸಿಪೋಲ್, ಕೆದರಿ
ದಳಂಗಳಾ ಕುಸುಮ ತಲೆ ನಲಿಯೆ ನರುಗಂಪಿನಿಂ
ಮತ್ತು ಮಧುಪಂಗಳುಂ ಮತ್ತೆ ಭ್ರಮರಂಗಳುಂ
ಹಿಂಡು ಹಿಂಡಾಗಿ ಹೂವೊಡಲ ಹೊಂಧೂಳಿಯೊಳ್
ಹೊರಳಿ ಹೊಂಬೊಗರೇರಿ ಮಲರು ಮಲರಿಗೆ ಹಾರಿ
ಮಕರಂದ ಭಿಕ್ಷೆಯಂ ಬೇಡಿ ಕುಟಜಂಗಳಲಿ
ಝೇಂಕರಿಸಿದವು ನಿತ್ಯಯಾತ್ರೆಯೊಯೋಂಕಾರಮಂ.[೧೨]

ರವೀಂದ್ರನಾಥ ಠಾಕೂರರು ಭಾವಗೀತಾತ್ಮಕವಾದ ಶೈಲಿಯನ್ನು ಬಳಸಿಕೊಂಡರೆ ಕುವೆಂಪು ಅವರು ನಿಸರ್ಗದ ವೈಭವವನ್ನು ಒಂದು ರೂಪಕವನ್ನಾಗಿ ರೂಪಿಸಿಕೊಳ್ಳುತ್ತಾರೆ. ಇಬ್ಬರೂ ಕವಿಗಳು ನಿಸರ್ಗಪ್ರೇಮಿಗಳೇ ಆಗಿದ್ದಾರೆ. ರವೀಂದ್ರನಾಥರಲ್ಲಿ ವನಸೌಂದರ್ಯ ಸಾಂದರ್ಭಿಕವಾಗಿ ಕಂಡು ಮರೆಯಾದರೆ ಕುವೆಂಪು ಅವರಲ್ಲಿ ಸೌಂದರ್ಯದಾಚೆಯ ಅನುಭೂತಿಯನ್ನು ಪಡೆದುಕೊಳ್ಳುತ್ತದೆ.

"ಕಾಳಿದಾಸ ಮಹಾಭಾರತದ ಕಥೆಯ ಆಧಾರದ ಮೇಲೆ ತನ್ನ ಶಾಕುಂತಲಾ ನಾಟಕ ಬರೆದಂತೆ ರವೀಂದ್ರನಾಥ ಠಾಕೂರರು ಅಲ್ಲಿನ ಚಿತ್ರಾಂಗದೆಯ ಕಥೆಗೆ ಹೊಸ ಚೈತನ್ಯ ಕೊಟ್ಟು ತಮ್ಮ ಕಾವ್ಯ ನಾಟಕವನ್ನು ಬರೆದಿದ್ದಾರೆಂದು"[೧೩] ಪ್ರಮಥನಾಥ್‌ಬಿಶೀಯವರು ಅಭಿಪ್ರಾಯಪಡುತ್ತಾರೆ.

## ೭.೩. ರವೀಂದ್ರನಾಥ ಠಾಕೂರರ ನಾಟಕ : ಅಂಚೆಮನೆ

ರವೀಂದ್ರನಾಥ ಠಾಕೂರರ 'ಅಂಚೆಮನೆ' ಒಂದು ನಾಟಕದಂತೆ ಕಂಡರೂ ಅದಕ್ಕಿಂತ ಭಿನ್ನವೂ ಅರ್ಥಗರ್ಭಿತವೂ ಆದ ರೂಪಕವಾಗಿದೆ. ಆಧುನಿಕ ಶಿಕ್ಷಣದ ಮಹತ್ವವನ್ನು ಒಂದು ಹಂಬಲದಂತೆ ರವೀಂದ್ರರು ಅಭಿವ್ಯಕ್ತಗೊಳಿಸಿದ್ದಾರೆ. ಮಕ್ಕಳ ಮನೋವಿಕಾಸ, ಬುದ್ಧಿ ವೈಶಾಲ್ಯ, ಲೋಕಸತ್ಯದ ಆವಾಹನೆಗಳು ಶಿಕ್ಷಣದಿಂದ ದೊರಕಬೇಕು. ಕಂದಾಚಾರದ ಭಾವನೆಗಳನ್ನು ಬಿತ್ತಿ-ಬೆಳೆಯುವ ಮತ್ತು ಆಧುನಿಕ ಶಿಕ್ಷಣ ಪದ್ಧತಿಗೆ ತೆರೆದುಕೊಳ್ಳದ ಮತ್ತು ವಿಚಾರಪರತೆಯನ್ನು ಒಳಗೊಳ್ಳದ, ಸಮರ್ಥನಾರಹಿತವಾದ ಕಟ್ಟಳೆಗಳಿಂದ ಭಾರತೀಯ ಮಗು ಬೌದ್ಧಿಕವಾಗಿ ವಿಕಸನ ಹೊಂದುವುದಿಲ್ಲ.

'ಅಂಚೆಮನೆ' ನಾಟಕವು ಸರಳ ರೂಪಕದಂತೆ ಕಂಡರೂ, ಪ್ರಯೋಗದಲ್ಲಿ ಹಾಗನ್ನಿಸುವುದಿಲ್ಲ. ಭಾರತೀಯರು "ಒಳ್ಳೆ ತಿಳಿವದು ಬರಲಿ, ಎಲ್ಲದಿಕ್ಕಿನಲೆಮಗೆ" ಎಂಬ ಧ್ಯೇಯಾದರ್ಶಗಳುಳ್ಳವರಾದರೂ, ಕಿಟಕಿ ಬಾಗಿಲುಗಳನ್ನು ಮುಚ್ಚಿ ಕಂದಮ್ಮಗಳನ್ನು ಕತ್ತಲಲ್ಲಿಯೇ ಇರಿಸುತ್ತಿದ್ದೇವೆ. ಜಾಗತಿಕ

---

೧೨. ಕುವೆಂಪು, ಚಿತ್ರಾಂಗದಾ, ಉದಯರವಿ ಪ್ರಕಾಶನ, ವಾಣಿವಿಲಾಸ ಪುರಂ, ಮೈಸೂರು, ೧೯೮೭, ಪುಟ-೯.
೧೩. ರವೀಂದ್ರನಾಥ ಠಾಕೂರರ 'ಚಿತ್ರಾಂಗದಾ ಮತ್ತು ಇಸ್ಪೀಟ್ ರಾಜ್ಯ', ಅನು: ಲಕ್ಷ್ಮೀನಾರಾಯಣಭಟ್ಟ, ಬಿ.ಎಲ್.ಮಂಜುನಾಥ, ೧೯೮೪, ಕನ್ನಡ ಸಾಹಿತ್ಯ ಪರಿಷತ್ತು, ಮುನ್ನುಡಿ, ಪುಟ-VII

ಜ್ಞಾನ, ಸೂರ್ಯನ ಬೆಳಕು, ತಂಪು ತಂಗಾಳಿ ಸರಾಗವಾಗಿ ನಮ್ಮ ಮನೆ–ಮನಗಳಲ್ಲಿ ಸುಳಿದಾಡಲು ಬಿಡದೆ, ಹಿಂದಿನಿಂದಲೂ ಬಂದ ಶಾಸ್ತ್ರ ಪರಂಪರೆಗೆ ಮಣೆ ಹಾಕಿ ಮಕ್ಕಳ ಬುದ್ಧಿ ವಿಕಾಸಕ್ಕೆ, ಜ್ಞಾನದಾಹಕ್ಕೆ ನೆರವಾಗದೆ ಮಕ್ಕಳನ್ನು ನಾಲ್ಕುಗೋಡೆಗಳ ಮಧ್ಯೆ ಕೂಡಿಹಾಕಿದ್ದೇವೆ.

"ಮನೆಯಲ್ಲೇ ಕುಳಿತಿದ್ದರೆ ನೀನು ಒಬ್ಬ ಪಂಡಿತನಾಗುವೆ"[೧೪] ಎಂಬ ಮಾಧವನ ಮಾತಿಗೆ ಅಮಲನು ಪಾಂಡಿತ್ಯವನ್ನು ಇಷ್ಟ ಪಡುವುದಿಲ್ಲ. ಈ ಕಿರುನಾಟಕದ ನಾಯಕ ಅಮಲನೆಂಬ ಕಿಶೋರ. ಅವನ ಮನಸ್ಸಿನಲ್ಲಿ ಜಗತ್ತಿನ ಪರಿಜ್ಞಾನವನ್ನು ಹೊಂದುವ ಹಂಬಲ. ಅವೈಜ್ಞಾನಿಕ ವೈದ್ಯ ಸಲಹೆಯನ್ನು ಪಾಲಿಸಿ ಹೊರಬೆಳಕಿಗೆ ಬಿಡದಂತೆ ಸೆರೆಯಲ್ಲಿಟ್ಟಿರುವ ಸಾಕುತಂದೆ ಮಾಧವದತ್ತ. ಅಮಲ ಉಪಚರಿಸಿದರೆ ವಾಸಿಯಾಗುವ ಸಾಮಾನ್ಯ ಕಾಯಿಲೆಗೀಡಾಗಿರುವನೆಂದು ಪಂಡಿತ ವೈದ್ಯನ ಅಂಧಪ್ರಜ್ಞೆಯು ಹೇಳಿಕೆಗೆ ಅಂಜಿ ಬಾಲಕನನ್ನು ಗಾಳಿ–ಬೆಳಕು ಸುಳಿಯದ ಕೋಣೆಯೊಂದರಲ್ಲಿ ಇರಿಸಿರುತ್ತಾನೆ. ಬಾಲಕ ಅಮಲ ತೆರೆದ ಚಿಕ್ಕ ಕಿಟಕಿಯ ಮೂಲಕ, ಹೊರಜಗತ್ತಿಗೆ ಸೀಮಿತವಾದ ವಿದ್ಯಮಾನಗಳನ್ನು ನೋಡಿ ನೋಡಿ ತನ್ನ ಕಲ್ಪನಾ ಲಹರಿಯ ಬೆನ್ನೇರಿ ತನಗೆ ಕಾಣದ ಜಗತ್ತನ್ನು ಅವರಿವರ ಮಾತುಗಳಿಂದ ಕಲ್ಪಿಸಿಕೊಳ್ಳುತ್ತಾನೆ.

ತಾತಯ್ಯನೆಂಬ ಹಿರಿಯ, ಮೊಸರು ಮಾರುವ ಗೊಲ್ಲ, ಪಟೇಲ, ಹೂವು ಮಾರುವ ಬಾಲಕಿ ಸುಧಾ ಎಂಬ ಪುಟ್ಟ ಹುಡುಗಿ, ಓರಗೆಯ ಇತರ ಹುಡುಗರು, ಫಕೀರ, (ತಾತಯ್ಯ) ರಾಜ, ಮುಂತಾದ ಕೆಲವೇ ಕೆಲವು ವ್ಯಕ್ತಿಗಳಿಂದ ತಾನು ಕಾಣದ ಪ್ರಪಂಚವನ್ನು, ತನ್ನ ಸೀಮಿತ ಬುದ್ಧಿ ಮತ್ತೆಗನುಗುಣವಾಗಿ ಕಲ್ಪಿಸಿಕೊಳ್ಳುತ್ತಲೇ ಹಗಲುರಾತ್ರಿಗಳನ್ನು ಕಳೆಯುತ್ತಿರುತ್ತಾನೆ. ಅಮಲ ತನ್ನ ಬಳಿಯಿದ್ದ ಆಟಿಕೆಗಳನ್ನು ಓರಗೆಯ ಹುಡುಗರಿಗೆ ಉದಾರವಾಗಿ ಕೊಟ್ಟು, ಅವರಂತೆ ತಾನು ಆಟವಾಡಲು ಸಾಧ್ಯವಿಲ್ಲದೆ ಹತಾಶನಾಗುತ್ತಾನೆ.

ಶಿಕ್ಷಣದಿಂದ ಭಾವೈಕ್ಯತೆ ಸರಳ ಸಾಧ್ಯವೆಂಬ ಸೂತ್ರವನ್ನು ಕವಿ ರವೀಂದ್ರರು, ಅಮಲನ ವೀಕ್ಷಣೆಗೆ ಗೋಚರವಾಗುವ ಅಂಚೆಮನೆ, ಅದರ ಮೇಲೆ ಹಳದಿ ಬಾವುಟವನ್ನು ಸಾಂಕೇತಿಕವಾಗಿ ತಂದಿದ್ದಾರೆ. 'ಶಿಕ್ಷಣ' ಸಂಪರ್ಕ ಸಾಧನವೆಂದು ಭಾರತೀಯರ ಗಮನವನ್ನು ಸೆಳೆಯುತ್ತಾರೆ. ನಾಟಕದಲ್ಲಿ ಬರುವ ರಾಜ ಬ್ರಿಟಿಷ್ ಸರ್ಕಾರದ ಎಡ್ವರ್ಡ್‌ನನ್ನು ನೆನಪಿಗೆ ತರುತ್ತದೆ. ಬ್ರಿಟಿಷರು ಕಲ್ಕತ್ತದಲ್ಲಿ ವಾಸ್ತವ್ಯ ಹೂಡಿ, ಈಸ್ಟ್ ಇಂಡಿಯಾ ಕಂಪನಿಯ ಮೂಲಕ ವ್ಯವಹಾರವನ್ನು ವಿಸ್ತರಿಸಿಕೊಂಡು ಭಾರತದ ಆಡಳಿತವನ್ನು ವಹಿಸಿಕೊಂಡ ಸಂಗತಿ ಎಲ್ಲರಿಗೂ ತಿಳಿದಿರುವಂತಹದೆ. ಬ್ರಿಟಿಷರ ಆಡಳಿತ ಪ್ರಾರಂಭವಾದ ದಿನದಿಂದಲೇ ಭಾರತೀಯರು ಆಧುನಿಕ ಶಿಕ್ಷಣವ್ಯವಸ್ಥೆಗೆ ತಮ್ಮನ್ನು ಒಗ್ಗಿಸಿಕೊಂಡರು.

'ಅಂಚೆಮನೆ' ಮೇಲ್ನೋಟಕ್ಕೆ ಮಕ್ಕಳ ನಾಟಕವೆಂಬಂತೆ ಕಂಡರೂ, ನಾಟಕದ ಒಳ ಆಶಯ ಆಧುನಿಕ ಶಿಕ್ಷಣಕ್ಕೆ ಕರೆ ಕೊಡುವ ಸಂದೇಶವೇ ಆಗಿದೆ. ನಾಟಕದ ಕೊನೆಯಲ್ಲಿ ಬರುವ ರಾಜ

---

೧೪. ಮಾಸ್ತಿ ವೆಂಕಟೇಶ ಅಯ್ಯಂಗಾರ್, ರವೀಂದ್ರನಾಥ ಠಾಕೂರರು, ಉಷಾ ಸಾಹಿತ್ಯ ಮಾಲೆ, ಮೈಸೂರು, ೧೯೬೧, ಪುಟ ೧೨೧.

ಮತ್ತು ರಾಜ ವೈದ್ಯರ ಪಾತ್ರಗಳು ಯಾವುದನ್ನು ಸಂಕೇತಿಸುತ್ತವೆ ಎಂಬುದು ಸ್ವಲ್ಪಮಟ್ಟಿಗೆ ಗೊಂದಲ ಉಂಟುಮಾಡಿವೆ. ಖಾಯಿಲೆಯಿಂದಿರುವ 'ಅಮಲ'ನಿಗೆ ಪಂಡಿತ ವೈದ್ಯ ಹೇಳಿದುದೇ ಕಾಯಿಲೆಯೋ ಅಥವಾ ತನ್ನ ಪ್ರತಿಷ್ಠೆಗೆ ಯಾವುದೋ ಧನ್ವಂತರಿ ವಿಷಯ ಶ್ಲೋಕಗಳನ್ನು ಹೇಳಿ 'ಇರಬಹುದೇ?" ಎಂಬ ಊಹಾ ಮಾತ್ರದ ಖಾಯಿಲೆಯೋ ತಿಳಿಯುವುದಿಲ್ಲ. ಮಾಸ್ತಿ ವೆಂಕಟೇಶ ಅಯ್ಯಂಗಾರ್ ರಾಜನ ಪಾತ್ರವನ್ನು ದೇವರ ಕರುಣೆಗೆ ಹೋಲಿಸಿದ್ದಾರೆ. 'ಅಂಚೆಮನೆ' ದೈವ ನಿರ್ಮಿತಿ, ಅದರ ಬಣ್ಣ ಕೆಂಪು, ಅಲ್ಲಿಂದ ಬರುವ ಸಂದೇಶ ಒಂದು ಪತ್ರ, ಇದು ಸಾವಿನ ಸಂಕೇತ ಎಂದುಕೊಂಡರೆ ನಾಟಕ ಸುಖಾಂತ್ಯವಾಗುವುದಿಲ್ಲ. ಎಳೆಯ ಮನಸ್ಸುಗಳ ಭಾವಲತೆ ಕಮರಿಹೋಯಿತೆ? ಎಂಬ ವಿಷಾದ ಉಂಟಾಗುತ್ತದೆ. ಹೂವಾಡಿಗರ ಹುಡುಗಿ 'ಸುಧಾ' ರಾಜವೈದ್ಯನ ಮೂಲಕ ಅಮಲನಿಗೆ ಹೂವನ್ನು ಕೊಟ್ಟು ತಾನು ಅಮಲನನ್ನು ಮರೆಯುವುದಿಲ್ಲ ಎಂದು ಹೇಳಿಬಿಡಿ ಎಂದಾಗ ಓದುಗರ ಕಣ್ಣುಗಳು ತೇವಗೊಳ್ಳುವುದು. ದುಃಖಾಂತ ನಾಟಕದ ಲಕ್ಷಣವೆನ್ನಬಹುದು.

### ೭.೪. ರವೀಂದ್ರನಾಥ ಠಾಕೂರರ ನಾಟಕ: ಬಲಿದಾನ

'ಬಲಿದಾನ' ನಾಟಕ 'ವಿಸರ್ಜನ್' ನಾಟಕದ ಅನುವಾದವಾಗಿದೆ. ೧೯೫೭ರಲ್ಲಿ ಮೊದಲನೇ ಮುದ್ರಣ, ೧೯೬೭ರಲ್ಲಿ ೨ನೇ ಮುದ್ರಣ ಕನ್ನಡದಲ್ಲಿ ಅನುವಾದಗೊಂಡು ಪ್ರಕಟವಾಗಿದೆ. ಅಹೋಬಲ ಶಂಕರ ಅನುವಾದಿಸಿರುವ ೧೯೬೭ರಲ್ಲಿ ಮೈಸೂರು ಕಾವ್ಯಾಲಯ ಪ್ರಕಾಶನದಿಂದ ಪ್ರಕಟಗೊಂಡಿರುವ ಎರಡನೇ ಮುದ್ರಣವಾಗಿ ಪ್ರಕಟವಾಗಿದೆ.

ರವೀಂದ್ರನಾಥ ಠಾಕೂರರು ಸ್ವಾತಂತ್ರ ಪೂರ್ವದಲ್ಲಿ ಈ ನಾಟಕವನ್ನು ರಚಿಸಿದ್ದಾರೆ. 'ಬಲಿದಾನ' ನಾಟಕದಲ್ಲಿ ಹಿಂಸೆ – ಅಹಿಂಸೆ, ಶೂದ್ರ – ವಿಪ್ರ, ಸ್ವಾತಂತ್ರ್ಯ ಕಲ್ಪನೆಯ ವಿಚಾರಗಳನ್ನು ಕೇಂದ್ರ ವಸ್ತುವನ್ನಾಗಿ ಕಟ್ಟಿಕೊಡಲಾಗಿದೆ.

### ೭.೫. ಹಿಂಸೆ – ಅಹಿಂಸೆ

ಸ್ವಾತಂತ್ರ್ಯ ಪೂರ್ವದಲ್ಲಿ ನಾಟಕ ರಚನೆಯಾದ್ದರಿಂದ ಗಾಂಧೀಜಿಯವರ ಅಹಿಂಸಾ ತತ್ವವು ನಾಟಕದ ಮೇಲೆ ಬಹು ಪ್ರಭಾವ ಬೀರಿದೆ. ಅತಿಯಾದ ಮೋಹ, ಕಾಮ ವೈರಾಗ್ಯಕ್ಕೆಡೆ ಮಾಡಿಕೊಡುವಂತೆ ಅತಿಯಾದ ಹಿಂಸೆಯು ಅಹಿಂಸೆಗೆ ದಾರಿ ಮಾಡಿ ಕೊಡುತ್ತದೆ. ಬಡ ಹುಡುಗಿಯು ತಾನು ಮುದ್ದಿನಿಂದ ಸಾಕಿದ ಆಡು ಮರಿಯನ್ನು ಕಾಳಿಗೆ ಬಲಿಕೊಟ್ಟಾಗ ರಾಜಗೋವಿಂದ ಮಾಣಿಕ್ಯನ ಮುಂದೆ ರೋದಿಸುತ್ತಾಳೆ. ಇಲ್ಲಿಯವರೆಗೂ ಬಲಿಯ ಹೆಸರಿನಲ್ಲಿ ನಡೆದುಕೊಂಡು ಬಂದಿರುವ ಹಿಂಸೆ, ರಕ್ತಪಾತಗಳ ಹಿಂದಿರುವ ನೋವನ್ನು ಅನುಭವಿಸಿದಂತಾಗಿ, ಕಳಿಂಗ ಯುದ್ಧದಲ್ಲಿ ಅಶೋಕನಿಗೆ ಮನಃಪರಿವರ್ತನೆಯಾದಂತೆ ರಾಜನು ಹಿಂಸೆಯನ್ನು ತ್ಯಜಿಸಿ ಬಲಿಯನ್ನು ನಿಷೇಧಿಸುತ್ತಾನೆ. ರಾಜನ ಸುತ್ತ ಇರುವ ಪರಿವಾರ ಇದಕ್ಕೆ ತೀವ್ರ ವಿರೋಧವನ್ನು ಒಡ್ಡುತ್ತದೆ. ಅಂಧ ಭಕ್ತಿಯಲ್ಲಿ ಮುಳುಗಿರುವ ಜನ ಏನು ಬೇಕಾದರು ಮಾಡುತ್ತಾರೆ ಎಂಬ

ನಿದರ್ಶನದಂತೆ ರಾಜನ ಮಡದಿ ಗುಣವತಿ ಕೂಡ ಚಿರಕಾಲದಿಂದ ನಡೆದುಕೊಂಡು ಬಂದಿರುವ ಬಲಿಪೂಜೆಯನ್ನು ನಡೆಸಬೇಕೆಂದು ಸ್ವತಃ ತಾನೇ ದತ್ತು ಮಗನನ್ನು ಬಲಿಕೊಡಲು ಮುಂದಾಗುತ್ತಾಳೆ. ದೇವಿಯು ದೇವಿಯಲ್ಲ; ಬರಿ ಕಲ್ಲುಶಿಲೆ ಎಂದು ಅರಿವಾದಾಗ ಆಕೆಯ ಮನಪರಿವರ್ತನೆಯಾಗುತ್ತದೆ. ಆ ಕಾಲಘಟ್ಟದಲ್ಲಿ ಯಥೇಚ್ಛವಾಗಿದ್ದ ಒಡೆದು ಆಳುವ ನೀತಿಯನ್ನೇ ವಿಪ್ರನಾದ ರಘುಪತಿ ರಾಜನ ವಿಚಾರದಲ್ಲಿ ಅನುಸರಿಸುತ್ತಾನೆ. ರಾಜನ ತಮ್ಮ ನಕ್ಷತ್ರನನ್ನು "ನೀನು ರಾಜನಾಗುವೆ, ಇದು ದೇವಿ ಆಜ್ಞೆ, ಆದರೆ ಅದಕ್ಕೆ ಮೊದಲು ರಾಜರಕ್ತ ತಂದು ದೇವಿಗರ್ಪಿಸು"[೧೫] ಎನ್ನುವುದು ಭಕ್ತಿಯ ಹೆಸರಿನಲ್ಲಿ ಎಂತಹ ಕ್ರೂರ ಹಿಂಸೆ ನಡೆಯುತ್ತಿತ್ತು ಎಂದುದನ್ನು ಬಲಿದಾನ ನಾಟಕ ಕಟ್ಟಿಕೊಡುತ್ತದೆ.

## ೨.೬. ವಿಪ್ರ – ಶೂದ್ರ

ಪುರೋಹಿತಶಾಹಿಗಳು ಅನಾದಿ ಕಾಲದಿಂದಲೂ ಸನಾತನ ವ್ಯವಸ್ಥೆಯಲ್ಲಿ ಪ್ರಶ್ನಾತೀತ ಸ್ಥಾನದಲ್ಲಿ ಕುಳಿತು ರಾಜನನ್ನೇ ನಿಯಂತ್ರಿಸುತ್ತಿದ್ದರು. ರಾಜದಂಡ, ಮಂತ್ರದಂಡ ಇವುಗಳಲ್ಲಿ ಮಂತ್ರದಂಡವೇ ಮೇಲುಗೈ ಸಾಧಿಸುತ್ತಿತ್ತು. ರಾಜಪುರೋಹಿತನಾದ ರಘುಪತಿ ತನ್ನ ಅಸ್ತಿತ್ವಕ್ಕೆ ಗಾಸಿ ತಂದ ರಾಜನನ್ನೇ ಹತ್ಯೆಗೊಳಿಸಲು ದೇವಿಯನ್ನು ಬಳಸಿಕೊಳ್ಳುತ್ತಾನೆ. ಈ ವ್ಯವಸ್ಥೆಯಲ್ಲಿ ವಿಪ್ರರನ್ನು ಎದುರು ಹಾಕಿಕೊಂಡರೆ ಅನುಭವಿಸಬೇಕಾದ ಶಿಕ್ಷೆಯಂತಿದೆ. ರಾಜನ ಬಲಿ ನಿಷೇಧದ ಆಜ್ಞೆಯನ್ನು ಕೇಳಿ 'ಬಾಹುಬಲವು ರಾಹುವಂತೆ ಬ್ರಹ್ಮತೇಜವನ್ನು ನುಂಗಲು ಬರುತ್ತಿದೆ'[೧೬] ಎಂಬ ರಘುಪತಿಯ ಈ ನುಡಿ ಬ್ರಹ್ಮತ್ವಕ್ಕೆ, ಬ್ರಹ್ಮತೇಜಕ್ಕೆ, ಅಪಾಯ ಒದಗಿದೆ ವಿಪ್ರರು ಜಾಗ್ರತರಾಗಬೇಕು ಎಂಬ ಸಂದೇಶವಿದ್ದಂತಿದೆ. ಅರಮನೆಯ ಒಳಗೂ, ಹೊರಗೂ, ಹಿಂಸೆಯನ್ನು ಕೊನೆಗಾಣಿಸಲು ಹೆಣಗಾಡುತ್ತಿದ್ದ ಗೋವಿಂದ ಮಾಣಿಕ್ಯ ಅಸಹಾಯಕನಂತೆ ಕಾಣಿಸುತ್ತಾನೆ. ರಘುಪತಿಯು ಸರ್ವಸ್ವ ಎಂದು ತಿಳಿದುಕೊಂಡಿದ್ದ ಪಾಲಿತ ಪುತ್ರನಾದ ಜಯಸಿಂಹ ರಘುಪತಿಯ ಮನಃಪರಿವರ್ತನೆಗೆ ಕಾರಣವಾಗುತ್ತಾನೆ. 'ಸರಳ ಭಕ್ತಿಯ ಮಾರ್ಗವು ಶಾಸ್ತ್ರವನ್ನನುಸರಿಸುತ್ತದೆಯೇ? ಹೃದಯವನ್ನನುಸರಿಸುತ್ತದೆಯೇ? ಕಣ್ಣುಗಳು ತಮ್ಮ ಬೆಳಕಿನಿಂದ ನೋಡುತ್ತವೆಯೆ? ಅಥವಾ ಬೆಳಕು ಆಂತರ್ಯದಲ್ಲಿ ವಿಮರ್ಶಿಸಿಕೊಳ್ಳುವಂತಿದೆ.

ವಿಪ್ರನಲ್ಲದ ರಾಜ ರಘುಪತಿಯನ್ನು ಪ್ರಶ್ನಿಸಿದರೆ ಅದನ್ನು ನಿಂದನೆ ಎಂದು ಜರಿದರೆ, ವಿಪ್ರ ಪುತ್ರನಾದ ಜಯಸಿಂಹ ವಿಪ್ರರ ವಂಚನೆಯನ್ನು ಹತ್ತಿರದಿಂದ ಕಂಡು ಬ್ರಹ್ಮಾಂಡವೇ ವಂಚನೆ, ಎಲ್ಲವೂ ಮಿಥ್ಯೆ ಎಂದು ದೇವಿಗೆ ತನ್ನ ದೇಹವನ್ನೇ ಬಲಿ ಕೊಡುತ್ತಾನೆ. ವಿಪ್ರರಲ್ಲದವರನ್ನು ಬಲಿ ಪಡೆದಾಗ ನೋವಾದಾಗ ರಘುಪತಿಯ ಮನಸ್ಸು ಜಯಸಿಂಹನ ಬಲಿಯಿಂದ, ಪುತ್ರಶೋಕದಿಂದ ಮುದ್ದಿನ ಆಡುಮರಿ ಕಳೆದುಕೊಂಡ ಬಡಹುಡುಗಿಯ ಮನಸ್ಸಿನಂತೆ ಸಂಕಟಕ್ಕೊಳಗಾಗುತ್ತಾನೆ. 'ಸರ್ವೇ ಜನ ಸುಖಿನೊ ಭವಂತು' ಎಂದು ಉಚ್ಚರಿಸುತ್ತಿದ್ದರೂ

---

೧೫. ಅಹೋಬಲ ಶಂಕರ, 'ಬಲಿದಾನ', ಕಾವ್ಯಾಲಯ ಪ್ರಕಾಶನ, ೧೯೬೬ ಪುಟ-೩೦.
೧೬. ಅಹೋಬಲ ಶಂಕರ, ಬಲಿದಾನ, ಕಾವ್ಯಾಲಯ ಪ್ರಕಾಶನ, ೧೯೬೬, ಪುಟ-೧೪.

ತಮ್ಮ ಸುಖಕ್ಕಾಗಿ ಎಲ್ಲರನ್ನು ದುಡಿಸಿಕೊಳ್ಳುತ್ತಿದ್ದ, ರಾಜಶಾಸನಕ್ಕಿಂತ ವಿಪ್ರಶಾಸನ ಮಿಗಿಲು ಎಂದು ತಿಳಿದಿದ್ದ ಮನಸ್ಸುಗಳನ್ನು ರಘುಪತಿಯಲ್ಲಿ ಕಾಣಬಹುದಾಗಿದೆ. ಕುವೆಂಪು ಅವರ ಶೂದ್ರತಪಸ್ವಿ ನಾಟಕಕ್ಕೆ ಕೆಲವೊಮ್ಮೆ ಸಾಮೀಪ್ಯವಿದೆ ಎನ್ನಿಸುತ್ತದೆ. ಶೂದ್ರನಾದ ಶಂಬೂಕನ ತಪಸ್ಸಿನ ಕಾರಣಕ್ಕಾಗಿ ಬ್ರಾಹ್ಮಣನು ತನ್ನ ಮಗ ಸತ್ತನೆಂದು, ರಾಮನಲ್ಲಿ ದೂರನ್ನು ಒಯ್ದಾಗ ರಾಮ ಅಸಹಾಯಕನಂತೆ ಕಾಣುವುದು ಗೋವಿಂದ ಮಾಣಿಕ್ಯನ ಅಸಹಾಯಕತೆಯನ್ನು ಸೂಚಿಸುವಂತಿದೆ, ಬ್ರಾಹ್ಮಣನು ರಘುಪತಿಯನ್ನು ಹೋಲುವಂತೆ ಕಾಣಿಸುತ್ತದೆ.

## ೭.೭. ಸ್ವಾತಂತ್ರ್ಯದ ಕಲ್ಪನೆ

ಭಾರತ ಇನ್ನೂ ಸ್ವಾತಂತ್ರ್ಯಗೊಂಡಿರದಿದ್ದ ಸಂದರ್ಭದಲ್ಲಿ ಈ ನಾಟಕ ರಚಿತವಾಗಿರುವುದರಿಂದ, ದೇಶದ ಒಳಗಡೆ ನಡೆಯುತ್ತಿದ್ದ ವಿಪ್ಲವಗಳು ಅರಮನೆಯ ಒಳಗೆ ನಡೆಯುವಂತೆ ನಾಟಕದಲ್ಲಿ ಹೆಣೆಯಲಾಗಿದೆ. ಗೋವಿಂದ ಮಾಣಿಕ್ಯ 'ನಾನು ಕಾರಾಗೃಹದ ಬಂಧಿ' ಎನ್ನುವುದರ ಹಿಂದಿನ ವೇದನೆ ಎಷ್ಟೆಂಬುದು ತಿಳಿಯುತ್ತದೆ. ರಾಜನಿಗೆ ಸ್ವಾತಂತ್ರ್ಯ ಇಲ್ಲ ಎಂದ ಮೇಲೆ ಸಾಮಾನ್ಯ ಜನರ ಸ್ಥಿತಿ ಏನಾಗಿತ್ತು ಎಂಬುದನ್ನು ಆಲೋಚಿಸುವಂತೆ ಮಾಡುತ್ತದೆ. ಮೊಗಲರಿಂದ ರಾಜ ಸ್ವಾತಂತ್ರ್ಯ ಬಯಸಿದಂತೆ ಕಂಡುಬಂದರೂ, ತನ್ನ ನಿಜವಾದ ಸ್ವಾತಂತ್ರ್ಯ ದೇವಿಯ ಸ್ವಾತಂತ್ರ್ಯ, ಸಾಮಾನ್ಯ ಜನರ ಸ್ವಾತಂತ್ರ್ಯವನ್ನು ಬಯಸುವ ಉದಾತ್ತ ರಾಜನಂತೆ ಕಾಣುತ್ತಾನೆ.

ಪ್ರಾಚೀನ ಭಾರತದಲ್ಲಿ ಆಚರಣೆಯಲ್ಲಿದ್ದ ಬಲಿಪೀಠಗಳ ಆಚರಣೆಯ ಅಧ್ಯಯನಕ್ಕೆ ಆಕರವಾಗುವ 'ಬಲಿದಾನ' ನಾಟಕ ಈ ಶತಮಾನದಲ್ಲಿ ಜಗತ್ತಿನ್ನೆಲ್ಲೆಡೆ 'ಹಿಂಸೆ' ತನ್ನ ಕಬಂಧಬಾಹುಗಳನ್ನು ವಿಸ್ತರಿಸುತ್ತಿರುವಾಗ ಅತ್ಯಂತ ಮಹತ್ವದ ನಾಟಕವೆನಿಸಿದೆ.

ಅಧ್ಯಾಯ – ಎಂಟು

# ರವೀಂದ್ರನಾಥ ಠಾಕೂರರ ಕಥೆ ಮತ್ತು ಕಾದಂಬರಿಗಳು

೮.೧. ಕಾಬೂಲಿವಾಲಾ

೮.೨. ರವೀಂದ್ರನಾಥ ಠಾಕೂರರ 'ಮನೆಜಗತ್ತು' ಕಾದಂಬರಿ

೮.೩. ರವೀಂದ್ರನಾಥ ಠಾಕೂರರ 'ಗೋರಾ' : ಧಾರ್ಮಿಕತೆಯ ಸಂಘರ್ಷ

೮.೪. ರವೀಂದ್ರರ ಪ್ರಬಂಧಗಳು

೮.೫. ಕನ್ನಡದಲ್ಲಿ ಠಾಕೂರರ ಸಾಹಿತ್ಯ

ಅಧ್ಯಾಯ – ಎಂಟು

# ರವೀಂದ್ರನಾಥ ಠಾಕೂರರ ಕಥೆ ಮತ್ತು ಕಾದಂಬರಿಗಳು

## ೮.೧. ಕಾಬೂಲಿವಾಲಾ

ಭಾರತೀಯ ಸಾಹಿತ್ಯದ ಮಹಾಪ್ರತಿಭೆ ರವೀಂದ್ರನಾಥ ಠಾಕೂರರು ಸಣ್ಣಕತೆ, ಕಾದಂಬರಿ, ಕವಿತೆ, ನಾಟಕ ಹೀಗೆ ಹಲವು ಸಾಹಿತ್ಯದ ಪ್ರಕಾರಗಳಲ್ಲಿ ರವೀಂದ್ರನಾಥ ಠಾಕೂರರ ಹೆಸರನ್ನು ಉಲ್ಲೇಖಿಸಬಹುದು. ಕವಿತೆಗಳಲ್ಲಿ ಬಹುಪಾಲು ಕವಿತೆಗಳು ಪ್ರಾರ್ಥನೆ, ನಿಸರ್ಗವನ್ನು ಕುರಿತದ್ದಾಗಿದ್ದರೆ, ಕತೆಗಳು ಸಾಮಾಜಿಕ ವಸ್ತುಗಳನ್ನು ಕುರಿತದ್ದಾಗಿವೆ.

ಬಂಗಾಳಿಯಿಂದ ಕತೆ ಕಾದಂಬರಿಗಳನ್ನು ಕನ್ನಡಕ್ಕೆ ಭಾಷಾಂತರಿಸುವ ಕೆಲಸ ಈ ಹಿಂದೆ ಹೇಳಿದಂತೆ ಬಿ.ವೆಂಕಟಾಚಾರ್ಯರನ್ನು ಮೊದಲುಗೊಂಡು ಆರಂಭವಾಯಿತು. ಇನ್ನಿತರ ಭಾರತೀಯ ಭಾಷೆಗಳಲ್ಲಿ ಇರುವ ಸಾಹಿತ್ಯ ಕೃತಿಗಳನ್ನು ಕನ್ನಡಕ್ಕೆ ಭಾಷಾಂತರಿಸುವ ಕೆಲಸವನ್ನು ಕರ್ನಾಟಕ ಸರ್ಕಾರ ಅನುವಾದ ಅಕಾಡೆಮಿಯನ್ನು ಸ್ಥಾಪಿಸಿ, ಅದರ ಮೂಲಕ ಭಾಷಾಂತರ ಯೋಜನೆಗಳನ್ನು ಕೈಗೊಳ್ಳುತ್ತಿದೆ. ಹಾಗೆಯೇ ಕನ್ನಡದ ಸಾಹಿತ್ಯಕೃತಿಗಳನ್ನು ಇತರ ಭಾರತೀಯ ಭಾಷೆಗಳಿಗೂ, ಇಂಗ್ಲಿಷ್ ಭಾಷೆಗೂ ಅನುವಾದ ಮಾಡಿಸುವ ಮಹತ್ಕಾರ್ಯವನ್ನು ಕರ್ನಾಟಕ ಸರ್ಕಾರ ಕೈಗೊಳ್ಳುತ್ತಿದೆ.

ರವೀಂದ್ರನಾಥ ಠಾಕೂರರ ಭಾವಜಗತ್ತು ಬಹುವಿಶಾಲವಾದುದು. ರವೀಂದ್ರನಾಥರ ಕತೆಗಳಲ್ಲಿ ಪ್ರಸಿದ್ಧವಾದ “ಕಾಬೂಲಿವಾಲಾ” ಸಣ್ಣಕತೆಯೂ ಒಂದು ರೀತಿಯಲ್ಲಿ ಗದ್ಯದಲ್ಲಿ ಬರೆದ ಭಾವಗೀತೆ ಎಂದರೆ ತಪ್ಪಾಗಲಾರದು.

ರವೀಂದ್ರನಾಥ ಠಾಕೂರರ ಜೀವನಾನುಭವದಲ್ಲಿ ಬಂದುಹೋದ ಪ್ರಸಂಗವನ್ನು ಇಲ್ಲಿ ಕತೆಯನ್ನಾಗಿ ರೂಪಿಸಿದ ಕತೆ ‘ಕಾಬೂಲಿವಾಲ’. “ನನ್ನ ಐದು ವರ್ಷ ವಯಸ್ಸಿನ ಮಗಳು, ಮಿನಿಗೆ ಒಂದು ಕ್ಷಣ ಕೂಡ ಮಾತಾಡದೆ ಇರಲು ಆಗುವುದಿಲ್ಲ. ಅವಳು ಹುಟ್ಟಿದ ಮೇಲೆ ಮಾತು ಕಲಿಯುಲು ಒಂದೇ ವರ್ಷ ಕಾಲವ್ಯಯ ಮಾಡಿದ್ದಾಳೆ. ಎಷ್ಟು ಹೊತ್ತು ಎಚ್ಚರವಾಗಿರುತ್ತಾಳೋ ಅಷ್ಟು ಹೊತ್ತು ಒಂದು ಕ್ಷಣವನ್ನು ಮೌನಭಾವದಲ್ಲಿ ವ್ಯರ್ಥವಾಗಿ

ಕಳೆಯಲು. ಆದರೆ ನಾನು ಆಗ ಮಾಡಲಾರೆ. ಮಿನಿ ಮೌನವಾಗಿದ್ದರೆ ಅದು ಅಸ್ವಾಭಾವಿಕವಾಗಿ ಕಂಡು ಸಹಿಸುವುದಕ್ಕೇ ಆಗುವುದಿಲ್ಲ. ಆದ ಕಾರಣ ನನ್ನೊಂದಿಗೆ ಅವಳ ಮಾತುಕತೆ ಸ್ವಲ್ಪ ಉತ್ಸಾಹಪೂರಿತವಾಗಿಯೇ ನಡೆಯುತ್ತದೆ".[೧]

ಕವಿ ರವೀಂದ್ರರಿಗೆ ಮಿನಿಯೆಂಬ ಪುಟ್ಟಮಗಳು, ಕವಿಯ ಧರ್ಮಪತ್ನಿ ಪ್ರತಿಮಾದೇವಿಯರ ಮುದ್ದಿನ ಮಗಳು. ಮಿನಿ ವರ್ಷದವಳಿರುವಾಗಲೇ ಹರಳು ಹುರಿದಂತೆ ಮಾತನಾಡುವುದನ್ನು ಕಲಿತವಳು. ಸಾಮಾನ್ಯವಾಗಿ ಚುರುಕುಬುದ್ಧಿಯ ಮಕ್ಕಳನ್ನು ನಿಯಂತ್ರಿಸಿ ತಹಬಂದಿಗೆ ತರಲು ತಾಯಂದಿರು ಭಿಕ್ಷುಕನಿಗೆ ಹಿಡಿದುಕೊಡುತ್ತೇನೆಂದೋ ಬೀದಿಯಲ್ಲಿ ತಿನಿಸು ಮಾರುವ ಅಪರಿಚಿತರಿಗೆ ಕೊಟ್ಟು ಬಿಡುತ್ತೇನೆಂದೋ ಭಯಪಡಿಸುವುದುಂಟು. ಹಾಗೆಯೇ ಮಿನಿಗೂ ಒಂದು ಭಯದ ಲಕ್ಷ್ಮಣ ರೇಖೆಯಿತ್ತು.

ರವೀಂದ್ರನಾಥ ಠಾಕೂರರು ಕತೆಯಲ್ಲಿ ಬರುವ ಕಾಬೂಲಿವಾಲನ ಚಿತ್ರವನ್ನು ಈ ರೀತಿ ಚಿತ್ರಿಸುತ್ತಾರೆ. "ಮಲಿನವಾದೊಂದು ಸಡಿಲ ಪಾಯಿಜಾಮಾ, ಕುತ್ತಿಗೆಯಿಂದ ಮೊಳಕಾಲವರೆಗೂ ಹಾಕಿರುವ ಜುಬ್ಬಾ, ತಲೆಯ ಮೇಲೆ ಪಗಡಿ, ಕುತ್ತಿಗೆಯಲ್ಲಿ ಜೋಲಾಡುವ ಚೀಲ, ಕೈಯಲ್ಲಿ ನಾಲ್ಕೈದು ಒಣಗಿದ ಅಂಜೂರದ ಪೆಟ್ಟಿಗೆಗಳು, ಇವುಗಳ ಸಹಿತ ದೀರ್ಘಾಕೃತಿಯ ಕಾಬೂಲಿವಾಲನೊಬ್ಬ ನಿಧಾನವಾಗಿ, ಗಂಭೀರ ಗಮನದಿಂದ ಆ ರಸ್ತೆಯಲ್ಲಿ ಹೋಗುತ್ತಿದ್ದ, ಅವನನ್ನು ನೋಡಿದೊಡನೆ ನನ್ನ ಈ ಪುಟ್ಟ ಕನ್ಯಾರತ್ನಕ್ಕೆ ಅದೇನು ಭಾವದಾವೇಶ ಹುಟ್ಟಿತೋ ಕಾಣೆ, ಅವನನ್ನು ಊರ್ಧ್ವಶ್ವಾಸದಿಂದ ಕೂಗಲು ಮೊದಲು ಮಾಡಿದಳು."[೨]

ರವೀಂದ್ರರು ವಾಸಿಸುತ್ತಿದ್ದ ಬೀದಿಗೆ ಕಾಬೂಲಿನಿಂದ ಬಂದು ಬೀದಿ ವ್ಯಾಪಾರ ಮಾಡುತ್ತಿದ್ದ 'ರಹಮಾನ್' ಎಂಬುವನು ಹೆಗಲ ಜೋಳಿಗೆಯಲ್ಲಿ ದ್ರಾಕ್ಷಿ, ಬಾದಾಮಿ, ಖರ್ಜೂರಗಳನ್ನು ತುಂಬಿಕೊಂಡು ಮಾರಾಟ ಮಾಡಲು ಬರುತ್ತಿದ್ದ. ಕಾಬೂಲಿನ ರಹಮಾನ್ ಆಜಾನುಬಾಹು, ಉದ್ದನೆಯ ಜುಬ್ಬಾ ಧರಿಸುತ್ತಿದ್ದ. ಮಿನಿ ಒಮ್ಮೆ ಅವನನ್ನು ಕಾಬೂಲಿವಾಲ ಎಂದು ಜೋರಾಗಿ ಕರೆದು ಕೂಗಿದಳು. ಆತನ ಜೋಳಿಗೆಯಲ್ಲಿ ಅಪಹರಿಸಲ್ಪಟ್ಟ ಕೆಲವು ಚಿಕ್ಕ ಮಕ್ಕಳಿರುವವೆಂದು ಯಾರೋ ಎಳೆಯ ಮಿನಿಗೆ ಹೇಳಿದ್ದರು. ಆ ಕಾರಣಕ್ಕೆ ಮಿನಿ ಕಾಬೂಲಿವಾಲನನ್ನು ಕಂಡರೆ ಭಯದಿಂದ ಬೀದಿಯಲ್ಲಿದ್ದವಳು ಮನೆಗೋಡಿ ಬಂದು ಕವಿ ರವೀಂದ್ರರನ್ನು ಜೋರಾಗಿ ಬಿಗಿದಪ್ಪಿಕೊಂಡು ಬಿಡುತ್ತಿದ್ದಳು.

ಕಾಬೂಲಿವಾಲಾ ರಹಮಾನನಿಗೆ ಮಿನಿಯನ್ನು ಕಂಡರೆ ಲೋಕಾಂತರದ ಮಮತೆ. ತಾನು ದೇಶಾಂತರದವನಾದರೂ 'ಮಿನಿ'ಯನ್ನು ಮಮತಾವಲಯಕ್ಕೆ ಸೆಳೆದುಕೊಳ್ಳುವ ಹಂಬಲ.

---

೧. ರವೀಂದ್ರ ಕಥಾಮಂಜರಿ, ಅಹೋಬಲ ಶಂಕರ (ಅನು): ಕರ್ನಾಟಕ ಅನುವಾದ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೨೦೦೭, ಪುಟ-೧೮೭.

೨. ರವೀಂದ್ರ ಕಥಾಮಂಜರಿ, ಅಹೋಬಲ ಶಂಕರ (ಅನು): ಕರ್ನಾಟಕ ಅನುವಾದ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೨೦೦೭, ಪುಟ-೧೮೮.

ಅದಕ್ಕೊಂದು ಪ್ರಬಲ ಕಾರಣವೂ ಇತ್ತು. ರಹಮಾನನಿಗೆ ಮಿಲಿಯಷ್ಟೆ ವಯಸ್ಸಿನ ಪುಟ್ಟಮಗಳಿದ್ದಳು. ವ್ಯಾಪಾರಕ್ಕಾಗಿ ಕಾಬೂಲಿನಿಂದ ಕಲ್ಕತ್ತಕ್ಕೆ ಬರುವುದಕ್ಕೆ ಅವನ ಮಗಳ ಮಮಕಾರ ಅಡಿಗಡಿಗೆ ತಡೆದು ನಿಲ್ಲಿಸುತ್ತಿತ್ತು. ಬದುಕಿಗಾಗಿ ದುಡಿವ ಸೆಳೆತ ಹೆಚ್ಚಾದಾಗ ಅನಿವಾರ್ಯವಾಗಿ ಪುಟ್ಟಮಗಳನ್ನು ಕಾಬೂಲಿನಲ್ಲಿಯೇ ಬಿಟ್ಟು ಹೊರಡಬೇಕಾಯಿತು. ಆಗ ಆತನಿಗೆ ಹೊಳೆದ ಉಪಾಯ ಪುಟ್ಟಮಗಳ ಪುಟ್ಟಹಸ್ತಗಳ ಮಸಿಮುದ್ರೆಯನ್ನು ಕಾಗದವೊಂದರ ಮೇಲೆ ಒತ್ತಿಸಿಕೊಂಡು ಅದನ್ನು ಮಡಿಚಿ ಸದಾ ಎದೆಗೆ ಸ್ಪರ್ಶವಾಗುವಂತೆ ಜೇಬಿನಲ್ಲಿರಿಸಿಕೊಂಡು ಮಗಳ ನೆನಪು ಕಾಡಿದಾಗಲೆಲ್ಲಾ ಆ ಹಸ್ತದ ಮುದ್ರಿತ ಚಿತ್ರವನ್ನು ನೋಡಿ ನೋಡಿ ಪುಳಕಗೊಂಡು ಸಾಂತ್ವನ ಪಟ್ಟುಕೊಳ್ಳುತ್ತಿದ್ದ. ಠಾಕೂರರ ಮಗಳು ಮಿನಿ ತಂತಾನೇ ಕಾಬೂಲಿವಾಲನನ್ನು ನಂಬಿಕೆಗೆ ಒಳಪಡಿಸಿಕೊಂಡು ಇಬ್ಬರ ನಡುವೆ ಸ್ನೇಹ ಮೂಡಿತು. 'ಮಿನಿ'ಯನ್ನು ಕಂಡು ಮಾತನಾಡಿಸಿ, ಲಲ್ಲೆ ಹೊಡೆದು ಹೋದರೇನೇ ರಹಮಾನನ ಮಗಳ ಸೆಳೆತ ಸಡಿಲವಾಗುತ್ತಿತ್ತು. ಪ್ರಾರಂಭದಲ್ಲಿ ರಹಮಾನ ಮಿನಿಗೆ ದ್ರಾಕ್ಷಿ, ಖರ್ಜೂರ, ಬಾದಾಮಿಗಳನ್ನು ನೀಡಿದಾಗ ಮಿನಿಯ ತಂದೆ ಠಾಕೂರರು ಹಾಗೆಲ್ಲಾ ಹಣವಿಲ್ಲದೆ ಪದಾರ್ಥಗಳನ್ನು ಕೊಡಬಾರದೆಂದು ಹೇಳಿ ರಹಮಾನನಿಗೆ ಎಂಟಾಣೆ ಕೊಟ್ಟಿದ್ದರು. ಅದನ್ನಾತ 'ಮಿನಿ'ಗೇ ಕೊಟ್ಟಿದ್ದ. ಮಿನಿ ಎಂಟಾಣೆಯ ಜೊತೆ ಆಟವಾಡುತ್ತಿದ್ದಾಗ ಅದು ತಾಯಿ ಪ್ರತಿಮಾದೇವಿಯ ದೃಷ್ಟಿಗೆ ಬಿತ್ತು. ಮಕ್ಕಳ ಬಳಿ ಹಣವಿರುವುದನ್ನು ಆಶ್ಚರ್ಯಪಟ್ಟು ನೋಡಿ ತಾಯಿ 'ಮಿನಿ'ಯನ್ನು ವಿಚಾರಿಸಿ ಈ ಎಂಟಾಣೆ ಎಲ್ಲಿ ಬಂತು ಎಂದಾಗ ಮಿನಿ ಇದ್ದವಿಚಾರವನ್ನು ಹೇಳಿದಾಗ ಅದನ್ನು ತಾಯಿ ತೀವ್ರವಾಗಿ ಆಕ್ಷೇಪಿಸಿದ್ದರು. ಕಡೆಗೆ ಕವಿ ರವೀಂದ್ರರ ಸಂಧಾನದಿಂದ ಪ್ರಕರಣ ಶಾಂತವಾಯಿತು. ಕಾಬೂಲಿವಾಲಾ ಮತ್ತು 'ಮಿನಿ'ಯ ಗೆಳೆತನ ಗಾಢವಾಯಿತು. ರಹಮಾನ ಗಿರಾಕಿಗಳಿಗೆ ನಂಬುಗೆ-ವಿಶ್ವಾಸದ ಮೇಲೆ ಸಾಲವನ್ನು ಕೊಟ್ಟು ಉಪಾಯವಾಗಿ ವಸೂಲು ಮಾಡುತ್ತಿದ್ದ.

ರಹಮಾನ ಮತ್ತು ಮಿನಿ ಮಾತುಕತೆ ನಡೆಸುತ್ತಿರುವಾಗ ರಹಮಾನ 'ಮಿನಿ'ಯನ್ನು ಕುರಿತು, 'ನೀನು ಯಾವಾಗ ಮಾವನ ಮನೆಗೆ ಹೋಗುತ್ತೀ'[೩] ಎಂದು ಹಾಸ್ಯದ ಪ್ರಶ್ನೆ ಕೇಳಿದ್ದ. ಮಾವನ ಮನೆಯ ಬಗ್ಗೆ ಏನೂ ತಿಳಿಯದಿದ್ದ 'ಮಿನಿ' ಅದೇ ಪ್ರಶ್ನೆಯನ್ನು ರಹಮಾನನಿಗೆ ಕೇಳಿ, ನೀನಾವಾಗ ಮಾವನ ಮನೆಗೆ ಹೋಗುತ್ತೀ ಎಂದಿದ್ದಳು. ಮಾವನ ಮನೆ ಎಂದರೆ 'ಸೆರೆಮನೆ'ಯೆಂದು ರಹಮಾನನಿಗೆ ತಿಳಿದಿತ್ತು. 'ಮಿನಿ' ಪ್ರಶ್ನೆಗೆ ಅಭಿನಯದ ಮುಷ್ಟಿಯನ್ನು ಬಿಗಿ ಹಿಡಿದು ನಾನು ಮಾವನ ಮನೆಯವರನ್ನು ಹೊಡೆದುಬಿಡುತ್ತೇನೆ ಎಂದಿದ್ದ ಮಿನಿಗೆ ಮಾವನ ಮನೆಯೆಂದರೆ ಯಾರೋ ಆಗದವರ ಮನೆಯೆಂದು ಅರ್ಥವಾಗಿತ್ತು.

ರಹಮಾನ ಅಥವಾ ಕಾಬೂಲಿವಾಲಾ ಸಾಲವಸೂಲಿಯ ಸಂಬಂಧ; ಗಿರಾಕಿಯೊಬ್ಬನ ಜೊತೆ ಜಗಳವಾಡಿ ಸಾಲ ಪಡೆದಿದ್ದವನು, ತಾನಾವುದೇ ಹಣವನ್ನು ಕೊಡಬೇಕಾಗಿಲ್ಲವೆಂದೂ

---

೩. ರವೀಂದ್ರ ಕಥಾಮಂಜರಿ, ಅಹೋಬಲ ಶಂಕರ (ಅನು): ಕರ್ನಾಟಕ ಅನುವಾದ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೨೦೦೭, ಪುಟ-೧೮೯.

ಸುಳ್ಳು ಹೇಳಿದ್ದ ಕೋಪಗೊಂಡ ಕಾಬೂಲಿವಾಲ ತನ್ನ ಚೂರಿಯಿಂದ ಸಾಲಗಾರನಿಗೆ ಇರಿದು ಕೊಲೆಗೆ ಯತ್ನಿಸಿದ್ದ. ಇದು ಅಪರಾಧವಾಗಿ ಪೊಲೀಸರು ರಹಮಾನನಿಗೆ ಕೈಕೋಳ ತೊಡಿಸಿ ಬೀದಿಯಲ್ಲಿ ಮೆರವಣಿಗೆಯ ರೀತಿಯಲ್ಲಿ ಕರೆತಂದರು. ಪೊಲೀಸು ಮತ್ತು ರಹಮಾನನ ಹಿಂದೆ ಕುತೂಹಲದಿಂದ ಚಿಕ್ಕ-ಚಿಕ್ಕ ಹುಡುಗರು ಗುಂಪುಗೂಡಿ ನಡೆದರು. ರಹಮಾನನನ್ನು ಠಾಕೂರರ ಬೀದಿಯಲ್ಲಿ ಕರೆತರುತ್ತಿರಲು ಇದನ್ನು ಕಂಡ ಪುಟ್ಟ ಬಾಲಕಿ ಮಿನಿ ಅದನ್ನು ಶಿಕ್ಷೆಯೆಂದು ತಿಳಿಯದೆ ರೂಢಿಯಂತೆ ಕಾಬೂಲಿವಾಲನನ್ನು ಹಾಸ್ಯನುಡಿಗಳಿಂದಲೇ ಮಾತನಾಡಿಸಿದಳು. ರಹಮಾನನನ್ನು ಮಾವನ ಮನೆಗೇ ಕರೆದೊಯ್ಯುತ್ತಿರುವರೆಂದು ಭಾವಿಸಿದಳು. 'ಕಾಬೂಲಿವಾಲ' ಮಾವನ ಮನೆಗೆ ಹೋಗುತ್ತೀಯಾ ಎಂದು ಪ್ರಶ್ನೆ ಮಾಡಿದಳು. ವಿಚಲಿತನಾಗದ 'ರಹಮಾನ್' ಬೇಟೀ ನಾನು ಮಾವನನ್ನು ಹೊಡೆಯಲು ಸಾಧ್ಯವಾಗುತ್ತಿಲ್ಲ. ನನ್ನ ಕೈಗಳನ್ನು ಕಟ್ಟಿಹಾಕಿದ್ದಾರೆ ಎಂದುತ್ತರಕೊಟ್ಟನು. ಆ ಮೇಲೆ ರಹಮಾನ ಸೆರೆಮನೆಗೆ ಸೇರಿ ಸುಮಾರು ಎಂಟು ವರ್ಷಗಳು ಶಿಕ್ಷೆಯನ್ನು ಅನುಭವಿಸಬೇಕಾಯಿತು. ಅಷ್ಟರ ಹೊತ್ತಿಗೆ ಠಾಕೂರರ ಮಗಳು ಬೆಳೆದು ದೊಡ್ಡವಳಾಗಿ ವಧುವಾಗಿದ್ದಳು. ಆಕೆ ಮದುವೆಯ ಏರ್ಪಾಟಾಗಿತ್ತು. ಮಿನಿ ಸರ್ವಾಲಂಕಾರ ಭೂಷಿತೆಯಾಗಿ ಮದುವೆಯ ಮನೆಯ ಸುಮಂಗಲೆಯರ ನಡುವೆ ಸಂಪ್ರದಾಯ ಶಾಸ್ತ್ರಗಳನ್ನು ಆಚರಿಸುತ್ತಿದ್ದಳು. ಕಾಬೂಲಿವಾಲ ರಹಮಾನ ಸೆರೆಮನೆಯಿಂದ ಬಿಡುಗಡೆ ಹೊಂದಿ ಮಿನಿಯನ್ನು ನೋಡಲು ನೇರವಾಗಿ ರವೀಂದ್ರನಾಥ ಠಾಕೂರರ ಮನೆಗೆ ಬಂದನು. ಆ ವೇಳೆಗೆ ಲೇಖಕರ ಮನೆ ಮದುವೆ ಮನೆಯಾಗಿ ವಿವಾಹದ ಚಪ್ಪರ ತಳಿರು ತೋರಣ ಹೂವುಗಳಿಂದ ಅಲಂಕಾರಗೊಂಡಿತು. ರಹಮಾನನಿಗೆ ಎಂಟುವರ್ಷ ಸೆರೆಮನೆಯಲ್ಲಿ ಕಳೆದದ್ದರ ಪರಿವೆ ಇದ್ದಂತೆ ಕಾಣಲಿಲ್ಲ. ಎಳೆಯ 'ಮಿನಿ' ಇನ್ನೂ ಮಗುವಾಗಿಯೇ ಇದ್ದಾಳೆಂಬ ಭಾವ ಮನದಲ್ಲಿ ತುಂಬಿಕೊಂಡಿತ್ತು. ರಹಮಾನನನ್ನು ಬಹು ಪ್ರಯತ್ನಪಟ್ಟು ಗುರುತಿಸಿದ ಕವಿ ರವೀಂದ್ರರು, ತಮ್ಮ ಮನೆಯಲ್ಲಿ ಸಂಭ್ರಮದ ಗಲಾಟೆಯೆಂದೂ, ಈಗ ಯಾರೊಡನೆಯೂ ಮಾತನಾಡಲು ಬಿಡುವಿಲ್ಲವೆಂದು ಹೇಳಿದರು. 'ಮಿನಿ'ಯನ್ನು ಕಂಡು ಸಂತಸಪಡುವ ಕಲ್ಪನೆ ಆತನಿಂದ ಜರ್‍ರನೆ ಇಳಿದುಹೋಯಿತು. ಆದರೂ ರವೀಂದ್ರನಾಥರಲ್ಲಿ ಬೇಡುವ ಧ್ವನಿಯಲ್ಲಿ ಒಮ್ಮೆ 'ಮಿನಿ' ಭೇಟಿಯನ್ನು ನೋಡಿ ಹೋಗುತ್ತೇನೆಂದು ಕೇಳಿಕೊಂಡ. ರವೀಂದ್ರನಾಥರು ಮಗಳೊಬ್ಬಳ ತಂದೆಯಾದ್ದರಿಂದ ಮಮತೆಯ ಒಳಗುದಿಯನ್ನು ಅರ್ಥ ಮಾಡಿಕೊಂಡು ರಹಮಾನನನ್ನು ಇರಲು ಹೇಳಿ ಒಳಗೆ 'ವಿವಾಹ' ಸಮಾರಂಭದಲ್ಲಿದ್ದ ಮಿನಿಗೆ ಹೇಳಿ ಕಳುಹಿಸಿ ಕರೆಸಿದರು. 'ಮಿನಿ' ಆ ವೇಳೆಗೆ ಕಾಬೂಲಿವಾಲನನ್ನು ಮರೆತೇ ಹೋಗಿದ್ದಳು. ರಹಮಾನನನ್ನು ಗುರುತಿಸಲಾಗಲೇ ಇಲ್ಲ. ರಹಮಾನನಿಗೆ ಆಶ್ಚರ್ಯವಾಯಿತು. ಆಗ್ಗೆ ಬಾಲಕಿ ಹರಟೆ ಹೊಡೆದು ಸಲ್ಲಾಪ ಮಾಡುತ್ತಿದ್ದ 'ಮಿನಿ' ಎಲ್ಲಿ? ಈಗ ಕಾಣುವ ವಧುವೆಲ್ಲಿ? ರಹಮಾನನಿಗೆ ತನ್ನ ಮಗಳೂ ಮದುವೆಗೆ ಬಂದಿರುವಳೆಂಬ ಭಾವನೆ ಸ್ಫುರಿಸಿತು. ಜೇಬಿನಲ್ಲಿದ್ದ ಮಗಳ ಹಸ್ತಚಿತ್ರವನ್ನು ತೆಗೆದು ನೋಡಿ ಕಣ್ಣು ತುಂಬಿಕೊಂಡನು. ರವೀಂದ್ರರಿಗೆ ಕಾಬೂಲಿವಾಲನ ಅಂತರಾತ್ಮದ ಸ್ಪಂದನೆ ಅರ್ಥವಾಯಿತು. ಮಗಳು ಮಿನಿಯ ಮದುವೆಯ

ಮೆರವಣಿಗೆಗೆಂದು ಇರಿಸಿಕೊಂಡಿದ್ದ ನೂರು ರೂಪಾಯಿಗಳನ್ನು ರಹಮಾನನಿಗೆ ಕೊಡುತ್ತಾ 'ನೀನು ಕಾಬೂಲಿಗೆ ಹೋಗಿ ನಿನ್ನ ಮಗಳನ್ನು ನೋಡು' ಎಂದು ಸಲಹೆ ಮಾಡಿದರು.

ಸಂಪ್ರದಾಯವನ್ನು ಲೆಕ್ಕಿಸದೆ 'ಮಿನಿ' ವಧುವನ್ನು ಅಪರಿಚಿತನೊಬ್ಬ ಪರದೇಸಿಯ ಮುಂದೆ ನಿಲ್ಲಿಸಿದ್ದಕ್ಕೆ ಕೆಲವರು ಅಸಹನೆಯಿಂದ ಪೇಚಾಡಿದರು. ಮದುವೆಗೆಂದು ತೆಗೆದಿರಿಸಿದ್ದ ಹಣವನ್ನು ಸಂಬಂಧಿಯಲ್ಲದ ದಾರಿಹೋಕನಿಗೆ ಕೊಟ್ಟದ್ದು ಕವಿಯ ಕುಟುಂಬ ವರ್ಗದವರಿಗೆ ಇಷ್ಟವಾಗಲಿಲ್ಲ. ಇವಾವೂ ಕವಿಯ ಭಾವುಕ ಮನಸ್ಥಿತಿಯನ್ನು ಒದಲಾಯಿಸಲು ಸಾಧ್ಯವಾಗಲಿಲ್ಲ. ಮಮತೆ-ವಾತ್ಸಲ್ಯಗಳು ಕಾಲ-ದೇಶ-ಕುಲ-ಸಂಪ್ರದಾಯಗಳಿಗೆ ಮೀರಿದ ಮಾರ್ದ್ರವತೆಯನ್ನು ಹೊಂದಿದುದೆಂದು ಗ್ರಹಿಸಲು ಕವಿಗೆ ಕಷ್ಟವಾಗಲಿಲ್ಲ.

'ಸ್ವಾನುಭಾವ'ದಲ್ಲಿ ಮೂಡಿಬಂದ ಈ ಕತೆ, ರವೀಂದ್ರನಾಥ ಠಾಕೂರರ ಉತ್ತಮ ಕಥೆಗಳಲ್ಲಿ ಒಂದು. 1935ರಲ್ಲಿ ಅಹೋಬಲ ಶಂಕರ ಅವರಿಂದ ಕನ್ನಡಕ್ಕೆ ಅನುವಾದಗೊಂಡು ಇತರ 33, ರವೀಂದ್ರನಾಥ ಠಾಕೂರರ ಕಥೆಗಳ ಕನ್ನಡಾನುವಾದ 'ರವೀಂದ್ರಕಥಾಮಂಜರಿ' ಶೀರ್ಷಿಕೆ ಪಡೆದು ಪ್ರಕಟವಾಗಿತ್ತು. ನಂತರ ಮೂರು ಸಲ ಪುನರ್‌ಮುದ್ರಣಗೊಂಡು 2007ರಲ್ಲಿ ಕರ್ನಾಟಕ ಅನುವಾದ ಅಕಾಡೆಮಿ ವತಿಯಿಂದ ಮತ್ತೆ ಪ್ರಕಟವಾಗಿದೆ.[೪]

ಅಹೋಬಲ ಶಂಕರ ಅವರು ಮೂಲ ಬಂಗಾಳಿಯ ಕಥೆಗೆ ಎಲ್ಲಿಯೂ ಅಪಚಾರವಾಗದಂತೆ ಅನುವಾದಿಸಿ ಕನ್ನಡದ ಕಥಾಸಾಹಿತ್ಯವನ್ನು ಮೌಲ್ಯೀಕರಣಗೊಳಿಸಿದ್ದಾರೆ. ಕಥೆಯನ್ನು ಓದುತ್ತಿದ್ದರೆ ಇದು ಅನುವಾದವೆಂದು ಅನ್ನಿಸದೆ ರವೀಂದ್ರರೇ ಕನ್ನಡದಲ್ಲಿ ಸೊಗಸಾಗಿ ರಚಿಸಿದ್ದಾರೆಂಬಂತೆ ಘನತರವಾಗಿದೆ.

ಯಾವುದೇ ಭಾಷೆ, ಭಾವನೆಗಳು ಹಾಗೂ ಮನುಷ್ಯರ ಗುಣ ಸ್ವಭಾವಗಳ ಆಧಾರದ ಮೇಲೆ ವೈವಿಧ್ಯತೆಯನ್ನು ಹೊಂದುತ್ತಾ ಬೆಳೆಯುತ್ತದೆ. ಇದು ಕನ್ನಡಕ್ಕೂ ಅನ್ವಯವಾಗಿ ಬಂಗಾಳಿ ಅನುವಾದಗಳ ಕೃತಿಗಳಿಂದ ಕನ್ನಡ ಕಥಾಸಾಹಿತ್ಯ ಕಾದಂಬರಿ ಪ್ರಕಾರವನ್ನು ಸೇರಿಸಿ ಸಮೃದ್ಧವಾಗಿದೆಯೆನ್ನಬಹುದು.

ಮಮತೆ-ವಾತ್ಸಲ್ಯ ಇತ್ಯಾದಿ ಗುಣಗಳಿಗೆ ಕಾಲ-ದೇಶ ಹಾಗೂ ಜನಜೀವನದ ಸೀಮಾರೇಖೆಯಿರುವುದಿಲ್ಲ. ಅವು ಸೀಮಾತೀತವಾದುವು. ಮನುಷ್ಯನು ಭಾವುಕ ಸ್ತರದಲ್ಲಿ ವಸುಧೆಯೆಂಬ ಏಕಕುಟುಂಬದ ಸದಸ್ಯನಾಗಿರುತ್ತಾನೆ. ಕಥನ ಮಾಧ್ಯಮವನ್ನು ಬಳಸಿಕೊಂಡು ರಾಷ್ಟ್ರಕವಿ ರವೀಂದ್ರರು ಭಾರತಕ್ಕೆ ಬಹುದೂರವಿರುವ ಆಫ್ಘಾನಿಸ್ತಾನದ ಒಬ್ಬ ಪಠಾಣನ ಪರಿಚಯವನ್ನು ಭಾರತೀಯ ಸಮುದಾಯಕ್ಕೆ ಹೊಂದಿಕೊಳ್ಳುವಂತೆ ಚಿತ್ರಿಸಿದ್ದಾರೆ. ಮನುಷ್ಯ-ಮನುಷ್ಯರನ್ನು ಭಿನ್ನ ಸಂಸ್ಕೃತಿಯವರೆಂದು ಗೆರೆ ಬರೆದು ಗುರುತಿಸಿದರೂ ಮಾನವೀಯ ಗುಣ-ಸ್ವಭಾವಗಳಿಗೆ ಭಿನ್ನತೆಯನ್ನೇ ಹೇಳಬೇಕಾಗುತ್ತದೆ.

---

೪. ರವೀಂದ್ರ ಕಥಾ ಮಂಜರಿ, ಭಾಗ-೧, ಅನು: ಅಹೋಬಲಶಂಕರ, ಕರ್ನಾಟಕ ಅನುವಾದ ಸಾಹಿತ್ಯ ಅಕಾಡೆಮಿ, ಕನ್ನಡಭವನ, ಜೆ.ಸಿ.ರಸ್ತೆ, ಬೆಂಗಳೂರು-೨, ೨೦೦೭.

ಈ ಮಾತಿಗೆ ಪೂರಕವಾಗಿ 2007ರ ಹೊತ್ತಿನಲ್ಲಿ ಕರ್ನಾಟಕ ಅನುವಾದ ಸಾಹಿತ್ಯ ಅಕಾಡೆಮಿಯ ಅಧ್ಯಕ್ಷರಾಗಿದ್ದ ಪ್ರಧಾನ್ ಗುರುದತ್ತ ಅವರು ನೀಡಿರುವ ಅಭಿಪ್ರಾಯವನ್ನು ಇಲ್ಲಿ ಸ್ಮರಿಸಬಹುದು.

"ನಮ್ಮ ನಾಡಿನ ನೆರೆಹೊರೆಯ ಭಾಷೆಗಳಲ್ಲಿನ ಶ್ರೇಷ್ಠ ಸಾಹಿತ್ಯದ, ಶ್ರೇಷ್ಠ ಸಾಹಿತಿಗಳ ಪರಿಚಯ ಬಹುಮಂದಿಗೆ ಇಲ್ಲವೇ ಇಲ್ಲವಾಗಿದೆ. ಪರಸ್ಪರ ಕೊಳು-ಕೊಡೆಯ ಕಾರ್ಯಕ್ರಮಗಳು ಹೆಚ್ಚು ಹೆಚ್ಚಾಗಿ ಹಾಗೂ ವೈವಿಧ್ಯಮಯವಾಗಿ ಆಗಬೇಕಾದ ಅಗತ್ಯವೂ ಇದೆ."[೫]

ರವೀಂದ್ರನಾಥ ಠಾಕೂರರ ಕಥೆಗಳನ್ನು ಸಮೀಕ್ಷೆಗೆ ಒಳಪಡಿಸಿ ಅವಲೋಕನ ಮಾಡಿರುವ ಕನ್ನಡದ ಪ್ರಸಿದ್ಧ ಕತೆಗಾರರಾದ ಮಾಸ್ತಿಯವರು "ಠಾಕೂರರ ಅತ್ಯುತ್ತಮವಾದ ಕತೆಗಳು ಪ್ರಪಂಚದ ಅತ್ಯುತ್ತಮವಾದ ಕತೆಗಳಲ್ಲಿ ಗಣಿಸಲರ್ಹವಾದುವು"[೬] ಎಂದು ಮೌಲಿಕತೆಯನ್ನು ನೀಡುತ್ತಾರೆ. ರವೀಂದ್ರನಾಥ ಠಾಕೂರರ ಕಾಬೂಲಿವಾಲ ಕತೆಯನ್ನು ಕುವೆಂಪು ಅವರು ಅದೇ ಹೆಸರಿನಲ್ಲಿ ಕನ್ನಡಕ್ಕೆ ಭಾಷಾಂತರಿಸಿರುವರು. ದೇ.ಜವರೇಗೌಡರು "'ಕುವೆಂಪು ಅವರ ಮೊದಲ ಕತೆಗಳು' ಎಂಬ ಶೀರ್ಷಿಕೆಯಡಿಯಲ್ಲಿ ಕುವೆಂಪು ಅವರಿಗೆ ಟಾಲ್‌ಸ್ಟಾಯ್, ರವೀಂದ್ರನಾಥ ಠಾಗೂರರು ತುಂಬ ಇಷ್ಟವಾದ ಲೇಖಕರು. ಅವರ ಸಾಹಿತ್ಯದ ಓದಿನ ಪ್ರಭಾವವನ್ನು ಈ ಕತೆಗಳ ಸೃಷ್ಟಿಯ ಹಿಂದೆ ಕಾಣಬಹುದು"[೭] ಎಂದು ಅಭಿಪ್ರಾಯ ಪಡುತ್ತಾರೆ.

### ೮.೨. ರವೀಂದ್ರನಾಥ ಠಾಕೂರರ 'ಮನೆ ಜಗತ್ತು' ಕಾದಂಬರಿ

ರವೀಂದ್ರನಾಥ ಠಾಕೂರರ ಮನೆ ಜಗತ್ತು ಕಾದಂಬರಿಯು ಕೊನೆಯದೆನ್ನಬಹುದಾದ ಹಾಗೂ ಅತ್ಯಂತ ಮಹತ್ವವಾದ ಕಾದಂಬರಿಯಾಗಿದೆ. ಈ ಕಾದಂಬರಿಯಲ್ಲಿ ಮೂರು ಮುಖ್ಯ ಪಾತ್ರಗಳು ಕಾಣಸಿಗುತ್ತವೆ. 'ವಿಮಲೆ', 'ನಿಖಿಲ' ಹಾಗೂ 'ಸಂದೀಪ'. ಪರಂಪರಾನುಗತವಾಗಿ ಬೆಳೆದುಬಂದ ಮೌಲ್ಯಗಳನ್ನು ಕುರಿತಾದ ವಿಶ್ಲೇಷಣೆ ರವೀಂದ್ರನಾಥರ 'ಮನೆ ಜಗತ್ತು' ಕಾದಂಬರಿಯಲ್ಲಿ ಕಾಣಬಹುದು. ಮನೆ ಜಗತ್ತು ಕಾದಂಬರಿಯನ್ನು ಬಂಗಾಳಿಯಿಂದ ಕನ್ನಡಕ್ಕೆ ಅನುವಾದಿಸಿದವರು ಹೆಚ್.ವಿ.ಸಾವಿತ್ರಮ್ಮನವರು. ಕ್ರಿ.ಶ.1955ರಲ್ಲಿ ಪ್ರಥಮ ಮುದ್ರಣವಾಗಿ ಪ್ರಕಟಗೊಂಡ ಪ್ರಸ್ತುತ ಕಾದಂಬರಿಯನ್ನು, ಮೈಸೂರಿನ 'ಕಾವ್ಯಾಲಯ' ಪ್ರಕಾಶನ ಸಂಸ್ಥೆಯವರು ಪ್ರಕಟಿಸಿದ್ದಾರೆ. ಈ ಕಾದಂಬವರಿಗೆ ಮಾಸ್ತಿ ವೆಂಕಟೇಶ ಅಯ್ಯಂಗಾರ್ಯರು ಬೆನ್ನುಡಿ ಬರೆದಿದ್ದಾರೆ. ಈ ಕಾದಂಬರಿ ರಚನೆಗೊಂಡ ಕಾಲಮಾನದಲ್ಲಿ ಭಾರತೀಯ ಜನಸಮುದಾಯ ತನ್ನ ಅಂಧಶ್ರದ್ಧೆಯನ್ನು ತೊರೆದು ನವಜೀವನವೆಂಬ ಆಧುನಿಕ ಬದುಕಿಗೆ ಹಾತೊರೆಯುತ್ತಿತ್ತು. ಗೃಹಿಣಿಯರು ಮನೆಯೆಂಬ ನಾಲ್ಕು ಗೋಡೆಗಳಲ್ಲಿ ಒಂದು ರೀತಿಯ ಸಾತ್ವಿಕ ಸೆರೆಯಲ್ಲಿರುವುದೇ

---

೫. ಪ್ರಧಾನ್ ಗುರುದತ್ತ, ರವೀಂದ್ರ ಕಥಾಮಂಜರಿ, ಪ್ರಸ್ತಾವನೆ, ಪುಟ-IX
೬. ರವೀಂದ್ರನಾಥ ಠಾಕೂರರು, ಮಾಸ್ತಿ ವೆಂಕಟೇಶ ಅಯ್ಯಂಗಾರ್, ಉಷಾ ಸಾಹಿತ್ಯ ಮಾಲೆ, ಮೈಸೂರು, ೧೯೬೧, ಪುಟ-೭೬
೭. ಕುವೆಂಪು ಕಥನ, ಉದ್ದಂಡಯ್ಯ, ವಿಹಾ ಪುಸ್ತಕ ಪ್ರಕಾಶನ, ೨೦೧೫, ಪುಟ-೧೦೨.

ಸೂಕ್ತವೆಂಬ ಭಾವನೆಯನ್ನು ಮೀರಿ, ಹೊರಜಗತ್ತಿನ ಹೊಸ ಬದುಕಿಗೆ ಆಗಷ್ಟೇ ಹೊಂದಿಕೊಳ್ಳಲು ಆರಂಭಿಸಿತ್ತು. ವಿದ್ಯಾಭ್ಯಾಸ ಸ್ತ್ರೀಯರಿಗೆ ಇತಿ-ಮಿತಿಯನ್ನು ಮೀರಬಾರವೆಂಬ ಈರ್ಷ್ಯೆ ತುಂಬಿಕೊಂಡಿದ್ದ ಕಾಲದಲ್ಲಿ ಸಂದೀಪ, ನಿಖಿಲರಂತಹ ಆಧುನಿಕ ವಿಚಾರವಾದಿಗಳು ಮಹಿಳಾ ವಿಮೋಚನೆಯತ್ತ ಆಲೋಚನಾಪರರಾದುದು ಆಧುನಿಕತೆಯ ಸೂಚನೆಯನ್ನು ತೋರಿಸುತ್ತದೆ. ಕಾದಂಬರಿಯ ಮೊದಲ ಅಧ್ಯಾಯದಲ್ಲಿಯೇ ವಿಮಲೆಯೆಂಬ ಗೃಹಿಣಿಯ ಕಥೆ ನಮಗೆ ದೊರೆಯುತ್ತದೆ. "ಮದುವೆಯಾದ ಮೇಲೆ ಬೆಳಗಿನ ಜಾವದಲ್ಲಿ ಸದ್ದಿಲ್ಲದೆ, ಆತನನ್ನೆಚ್ಚರಿಸದೆ, ಪತಿಯ ಪಾದಧೂಳಿಯನ್ನು ತಲೆಯಲ್ಲಿ ಧರಿಸಿದಾಗ ನನ್ನ ಕುಂಕುಮ ಬೆಳಗಿನ ನಕ್ಷತ್ರದಂತೆ ಬೆಳಗುತ್ತಿರುವ ಹಾಗೆ ನನಗೆ ಭಾಸವಾಗುತ್ತಿದ್ದದ್ದು ಈಗಲೂ ನನಗೆ ನೆನಪಿದೆ"[೮] ಪತಿಯೇ ಸರ್ವಸ್ವ ಎಂದು ತಿಳಿದು ಪತಿಭಕ್ತಿಯಲ್ಲಿ ಬದುಕಲು ಇಚ್ಛಿಸಿದರೆ ವಿಮಲೆಯ ಪತಿಯು ಆಕೆ ತನ್ನ ಜೊತೆ ಸಮಾನವಾಗಿ ಹಕ್ಕುಳ್ಳವಳಾಗಿರಲು ಬಯಸುತ್ತಾನೆ.

ಹೆಚ್ಚು ಓದದೆ ಇರುವ ಮನೆಯ ಹೆಂಗಸರಿಗೆ ಇಂಗ್ಲಿಷ್ ಹೆಂಗಸರಿಂದ ಇಂಗ್ಲಿಷ್ ಭಾಷೆ ಮತ್ತು ಕಥೆ ಕಾದಂಬರಿಗಳನ್ನು ಹೇಳಿಸುತ್ತಿದ್ದ ಉದಾಹರಣೆಗಳೂ ಇದ್ದವು. ವಿಮಲೆಯು 'ಗಿಲ್ಬಿ' ಎಂಬ ಒಬ್ಬ ಇಂಗ್ಲಿಷ್ ಮಹಿಳೆಯಿಂದ ಇಂಗ್ಲಿಷ್ ಕಲಿಯಲು ನಿಖಿಲನು ನೇಮಿಸಿದ್ದನು. ವಿಮಲೆಯ ಪತಿ ನಿಖಿಲನು ದೊಡ್ಡ ಜಮೀನ್ದಾರರ ಕುಟುಂಬದಿಂದ ಬಂದವನು. ಬಂಗಾಳದಲ್ಲಿ ಸ್ವದೇಶಿ ಚಳುವಳಿ ನಿಧಾನವಾಗಿ ಆವರಿಸಿಕೊಳ್ಳುತ್ತಿದ್ದ ಕಾಲದಲ್ಲಿ ನಿಖಿಲ ಇಂಗ್ಲಿಷ್ ಶಿಕ್ಷಣ ಪದ್ಧತಿಯನ್ನು ಸ್ವಾಗತಿಸಿ ಅದರಲ್ಲಿ ಎಂ.ಎ. ಪದವಿಯನ್ನು ಗಳಿಸಿದ್ದನು. ತನ್ನ ಪತ್ನಿ ಕಂದಾಚಾರ ಮೌಢ್ಯತೆಯ ಕುಟುಂಬದಿಂದ ಬಂದವಳಾದ್ದರಿಂದ ಆಕೆಯ ವರ್ತನೆ ಕಂದಾಚಾರದಿಂದಲೇ ಕೂಡಿತ್ತು. ಆಕೆಯನ್ನು ಕಂದಾಚಾರದಿಂದ ಮುಕ್ತಗೊಳಿಸುವ ಪ್ರಯತ್ನ ನಿಖಿಲನಿಂದ ನಡೆದೇ ಇತ್ತು. ಸ್ವದೇಶಿ ಚಳುವಳಿ ದಟ್ಟವಾದಾಗ ವಿಮಲೆ ತನ್ನಲ್ಲಿ ವಿದೇಶಿ ಉಡುಪು ವಸ್ತ್ರಗಳನ್ನು ಬೆಂಕಿಗೆ ಹಾಕಬೇಕೆಂದು ಗಂಡನಿಗೆ ಹೇಳಿದಾಗ ಆತ ಸುಡುವುದು ಬೇಡ ಅದನ್ನು ಧರಿಸದಿದ್ದರೆ ಆಯಿತು ಎಂಬ ಹೊಂದಾಣಿಕೆಗೆ ಬಂದಿದ್ದ. ನಿಖಿಲನಿಗೆ ಸ್ವದೇಶಿ ಚಳವಳಿಯ ಬಗ್ಗೆ ಪ್ರೀತಿ, ವಿದೇಶಿ ಶಿಕ್ಷಣದ ಬಗ್ಗೆ ಮೋಹ ಎರಡೂ ಸೇರಿಕೊಂಡಿದ್ದವು. ಗ್ರಾಮೋದ್ಯೋಗವನ್ನು ಪ್ರಾರಂಬಿಸಿದರೂ, ಆಧುನಿಕ ಯಂತ್ರೋಪಕರಣಗಳ ಬಗ್ಗೆ ಆಸಕ್ತಿ ವಹಿಸಿದ್ದನು.

ಸಂದೀಪ ಬಾಬುವಿನ ಮಾತಿನಲ್ಲಿ ಬಂಕಿಮಚಂದ್ರರ "ವಂದೇ ಮಾತರಂ" ಎಂಬ ಗೀತೆಯ ಸಾಲುಗಳು ಸದಾ ಪುನರಾವರ್ತನೆಗೊಳ್ಳುತ್ತಿತ್ತು. ದೇಶದ ಸ್ತ್ರೀ ಸಮುದಾಯವನ್ನು ಸಂಪ್ರೀತಗೊಳಿಸುವ ರೀತಿಯಲ್ಲಿ ಅದು ಆಗಾಗ್ಗೆ ಅನುರಣಿಸತ್ತಲೂ ಇತ್ತು. ನಿಖಿಲನ ಪತ್ನಿ ವಿಮಲೆ ಸ್ವದೇಶಿ ಚಳುವಳಿಗೆ ಬರುವ ಇಂಗಿತವನ್ನು ವ್ಯಕ್ತಗೊಳಿಸುತ್ತಲೇ ಇದ್ದಳು. ಪರದೆಯ ಹಿಂದೆ ಕುಳಿತು ತನ್ನ ಸಂಕೋಚ-ನಾಚಿಕೆಗಳೇ ಹೆಣ್ಣಿನ ಸದ್ಗುಣಗಳೆಂದು ತಿಳಿದಿದ್ದ ವಿಮಲೆ, ನಿಖಿಲನ ಬೆಂಬಲ ಮತ್ತು ಪ್ರೋತ್ಸಾಹದಿಂದ ಸರಳ ಉಡುಪಿನ ಸ್ವದೇಶಿ ಚಳುವಳಿಯಲ್ಲಿ ಒಬ್ಬ ಕಾರ್ಯಕರ್ತೆಯಾಗಲು

೮. ರವೀಂದ್ರನಾಥ ಠಾಕೂರ್ 'ಮನೆ ಜಗತ್ತು' (ಅನು) ಎಚ್.ವಿ.ಸಾವಿತ್ರಮ್ಮ, ಕಾವ್ಯಾಲಯ ಪ್ರಕಾಶನ, ೧೯೭೭, ಪುಟ-೨

ಅಣಿಗೊಳ್ಳುತ್ತಿದ್ದಳು. ಅಷ್ಟರಮಟ್ಟಿಗೆ ಬಂಗಾಳದ ಸ್ತ್ರೀ ಸಮುದಾಯ ಸ್ವದೇಶಿ ಚಳುವಳಿಯಲ್ಲಿ ಪಾಲ್ಗೊಳ್ಳಲು ಮುಂದಾಗಿತ್ತು.

ಬ್ರಿಟಿಷರು ಮತ್ತು ಮುಸಲ್ಮಾನರು ಭಾರತದಲ್ಲಿ ತಮ್ಮ ದುರಾಡಳಿತವನ್ನು ನಡೆಸಿ ಭಾರತದ ಶಾಂತಿ ಸಹಬಾಳ್ವೆಯನ್ನು ಭಂಗಗೊಳಿಸಿವೆ. ಭಾರತವನ್ನು ಪಾರತಂತ್ರ್ಯದ ದಾಸ್ಯ ಸಂಕೋಲೆಯಿಂದ ಮುಕ್ತಗೊಳಿಸಲು ನಡೆಸಿದ ಸ್ವಾತಂತ್ರ್ಯ ಚಳುವಳಿ, ಜಗತ್ತಿನಲ್ಲೇ ವಿಶಿಷ್ಟವಾದುದು. ವಿದೇಶಿ ವಸ್ತುಗಳ ನಿರಾಕರಣೆ, ಕಾನೂನುಭಂಗ ಚಳುವಳಿ, ಇವುಗಳು ಅಹಿಂಸಾತತ್ವದ ಮೇಲೆಯೇ ರೂಪುಗೊಂಡಂತಹವುಗಳು. ಬ್ರಿಟಿಷರು ವಂಗ ದೇಶದ ಕಲ್ಕತ್ತದಲ್ಲಿ ಈಸ್ಟ್ ಇಂಡಿಯಾ ಕಂಪನಿಯನ್ನು ಪ್ರಾರಂಭಿಸಿ ವ್ಯಾಪಾರದ ಉದ್ದೇಶಕ್ಕೆಂದು ಬಂದವರು ರಾಜಕೀಯ ಆಡಳಿತಕ್ಕೆ ತಮ್ಮ ಆಕಾಂಕ್ಷೆಯನ್ನು ವಿಸ್ತರಿಸಿದರು. ಸರಿ ಸುಮಾರು ಮುನ್ನೂರು ವರ್ಷಗಳು ಭಾರತ ಭೂಮಿ ಅನ್ಯರ ಅಧೀನದಲ್ಲಿತ್ತು. ಸ್ವದೇಶಿ ಚಳುವಳಿ ಮೊಟ್ಟ ಮೊದಲು ಪ್ರಾರಂಭವಾದದ್ದು ವಂಗ ದೇಶದಲ್ಲಿಯೇ.

ಬ್ರಿಟಿಷರ ರಾಜಕೀಯ ಸಿದ್ಧಾಂತಗಳು ಭಾರತದ ಪ್ರಾಚೀನ ಸಂಸ್ಕೃತಿಯ ಮೇಲೆ ದುರಾಕ್ರಮಣ ನಡೆಸಿದಂತೆ ಕಂಡವು. ಬ್ರಿಟಿಷರ ದುರಾಡಳಿತದ ವಿರುದ್ಧ ಭಾರತೀಯರು ಸಂಘಟಿತರಾಗಿ ನಡೆಸಿದ ಸ್ವಾತಂತ್ರ್ಯ ಚಳುವಳಿ ಭಾರತೀಯ ಇತಿಹಾಸ ಪುಟಗಳಲ್ಲಿ ಎಂದೂ ಅಳಿಸಿ ಹೋಗದ ಅಧ್ಯಾಯವಾಗಿದೆ. ಕವಿ ರವೀಂದ್ರನಾಥ ಠಾಕೂರರ ಮನೆ–ಜಗತ್ತು ಕಾದಂಬರಿ ಅವರ ಕೊನೆಯ ಕೃತಿ ಹಾಗೂ ತುಂಬಾ ಪ್ರಸಿದ್ಧವಾದ ಕೃತಿಯಾಗಿದೆ. ಪಾತ್ರಗಳ ಗುಣವಿಶೇಷಗಳ ಮತ್ತು ಸ್ವಭಾವಗಳ ಚಿತ್ರಣದ ಮೂಲಕ ಭಾರತೀಯ ಪ್ರಾಚೀನ ಸಂಸ್ಕೃತಿಯನ್ನು ಪರಿಚಯ ಮಾಡಿಕೊಡುತ್ತಾರೆ. ಸ್ವಾತಂತ್ರ್ಯ ಚಳುವಳಿ ಸೌಮ್ಯತೆ ಹಾಗೂ ವೈಚಾರಿಕ ಚರ್ಚೆಯ ರೂಪದಲ್ಲಿ ಮನೆ ಮನೆಗಳಿಗೆ ಪ್ರವೇಶಿಸಿ ಪಾತ್ರಗಳ ಮೇಲೆ ಪ್ರಭಾವ ಬೀರಿತು ಎಂಬುದರ ವಿಶ್ಲೇಷಣೆ ಈ ಕಾದಂಬರಿಯಲ್ಲಿ ಕಂಡುಬರುತ್ತದೆ. ಕವಿ ರವೀಂದ್ರರು, ಸ್ವಾತಂತ್ರ್ಯ ಸಂಗ್ರಾಮವನ್ನು ಎರಡು ರೀತಿಯಲ್ಲಿ ವಿಶ್ಲೇಷಣೆಗೆ ಒಳಗು ಮಾಡಿದ್ದಾರೆ. ಮೊದಲನೆಯದು, ಪರಕೀಯರನ್ನು 'ಕ್ವಿಟ್ ಇಂಡಿಯಾ' ಎಂಬ ಘೋಷವಾಕ್ಯದಲ್ಲಿ ಅಹಿಂಸಾತತ್ವದ ಮೇಲೆ ಚಳುವಳಿ ನಡೆಸುವುದು. ಎರಡನೆಯದು, ಭಾರತೀಯ ಸ್ತ್ರೀ ಸಮುದಾಯಕ್ಕೆ ಧಾರ್ಮಿಕ ಸ್ವಾತಂತ್ರ್ಯ, ವಿವೇಚನಾ ಸ್ವಾತಂತ್ರ್ಯ ಇತ್ಯಾದಿಗಳನ್ನು ನೀಡಿ ಕೌಟುಂಬಿಕ ಹಂತದಲ್ಲಿ ಸ್ತ್ರೀ ಸಮಾನತೆಯನ್ನು ಬಿತ್ತುವುದು. ಕಾದಂಬರಿಯ ನಾಯಕಿ, ವಿಮಲೆ, ಆಕೆಯಪತಿ ನಿಖಿಲ, ನಿಖಿಲನ ಗೆಳೆಯ ಸಂದೀಪ, ಈ ಮೂವರ ಪಾತ್ರಗಳ ಮೂಲಕ ರವೀಂದ್ರರು ಕಾದಂಬರಿಯ ಆಶಯವನ್ನು ಪರಾಮರ್ಶೆ ಮಾಡುತ್ತಾ ಹೋಗುತ್ತಾರೆ. ಕಥಾವಸ್ತು ಸರಳವಾದುದು. ಹೆಚ್ಚು ಘಟನೆಗಳು ಕಂಡುಬರುವುದಿಲ್ಲ. ಕಥಾನಾಯಕ ಅಥವಾ ಕಾದಂಬರಿಯ ಪುರುಷಪಾತ್ರಗಳಲ್ಲಿ ಮುಖ್ಯವಾದುದು 'ನಿಖಿಲ'ನ ಪಾತ್ರ, ಈತ ವಂಗ ಪ್ರದೇಶದಲ್ಲಿ ಜಹಗೀರುದಾರ, ಆತನ ಜಹಗೀರು ಒಂದು ಪುಟ್ಟ ಸಂಸ್ಥಾನದಷ್ಟೇ ದೊಡ್ಡದು. 'ನಿಖಿಲ' ಆಧುನಿಕ ಶಿಕ್ಷಣವನ್ನು ಪಡೆದವನು, ಎಂ.ಎ. ಪದವೀಧರನಾಗಿದ್ದನು. ವಂಗದೇಶದ ಶ್ರೀಮಂತರು ಸಾಮಾನ್ಯವಾಗಿ ದುರ್ವ್ಯಸನಿಗಳು, ಮದ್ಯಪಾನ, ಜೂಜು, ಬಹುಪತ್ನಿತ್ವ

ಮುಂತಾದವುಗಳ ದಾಸರು. ಆದರೆ ನಿಖಿಲ ಆ ರೀತಿಯಾಗಿರಲಿಲ್ಲ. ವಿಮಲನ ಒಲವು ಮಾನವೀಯ ಮೌಲ್ಯಗಳ ಆದರ್ಶಗಳ ಕಡೆಗೆ ತುಡಿಯುತ್ತಿರುತ್ತದೆ. ವಿಚಾರಪರವಾದವನು ಸದಾ ಕಾವ್ಯ, ಸಂಗೀತಾದಿಗಳ ಬಗ್ಗೆ ಮತ್ತು ಜೀವನಗಳ ಬಗ್ಗೆ ಚಿಂತನೆ ನಡೆಸುವ ವಿಚಾರವಾದಿಯಾಗಿದ್ದನು.

"ಧ್ಯೇಯಗಳು ತೋರುವ ಬಿಡುಗಡೆಯನ್ನು ಹುಡುಕುವುದೆ ಪುರುಷರ ಕರ್ತವ್ಯ. ದಾರಿ ತೋರುವ ಧ್ವಜವನ್ನು ನೀಡುವಾಕೆಯೇ ನಮಗೆ ತಕ್ಕ ಸ್ತ್ರೀ. ಮನೆಯಲ್ಲಿ ಮಾಯಾಪಾಶದಿಂದ ಬಿಗಿಯುವ ಸ್ತ್ರೀಯ ಮುಸುಕನ್ನು ಸರಿಸಿ ಅವಳ ನಿಜಸ್ಥಿತಿಯನ್ನು ತಿಳಿಯಬೇಕು. ನಮ್ಮ ಆಸೆ ಅಭಿಲಾಷೆಗಳನ್ನು ಅವಳಿಗೆ ಹೊದಿಸದೆ, ಆದರ್ಶ ಸಾಧನೆಗೆ ಅವಳು ಅಡ್ಡಿಬರದಂತೆ ನೋಡಿಕೊಳ್ಳಬೇಕು".[೯] ವಿವಾಹವೆಂಬುದು ಬಂಧನವಾಗಬಾರದು. ಪತ್ನಿ ಪತಿಯ ಅಧೀನ ಎಂಬುದಕ್ಕಿಂತ, ಪತ್ನಿ–ಜೀವನಸಂಗಾತಿ, ಸ್ನೇಹಿತೆ ಎಂಬ ಭಾವ ಇರಬೇಕೆಂಬ ಆಶಯ ಹೊಂದಿದವನು. ವಿಮಲೆ–ನಿಖಿಲನನ್ನು ವಿವಾಹವಾಗಿ ಅರಮನೆಯನ್ನು ಪ್ರವೇಶಿಸಿದ ಕಾಲದಲ್ಲಿ ಆಕೆ; ನಾಲ್ಕು ಗೋಡೆಗಳ ಮಧ್ಯೆ ಪರದೆಯ ಹಿಂದೆ ಇರಲು ಬಯಸಿದವಳು. ಬೆಳಗೆದ್ದು ಪತಿ ಪಾದವಂದನೆಯಿಂದ ಪುನೀತಳಾಗಬೇಕು ಪತಿಪಾದಧೂಲಿಯೇ ಸತಿಗೆ ಶ್ರೀರಕ್ಷೆ ಎಂದು ತಿಳಿದಿದ್ದವಳು. ನಿಖಿಲನಿಗೆ ವಿಮಲೆಯನ್ನು ಸಂಪ್ರದಾಯದ ಕಟ್ಟುಪಾಡುಗಳಿಂದ ಮುಕ್ತಗೊಳಿಸುವ ಹಂಬಲವುಳ್ಳವನು. ಸದಾ ಪರದೆಯ ಹಿಂದೆ ಇದ್ದು, ಹೊರಜಗತ್ತನ್ನು ಕಂಡು ಕಲ್ಪಿಸಿಕೊಳ್ಳಲು ಅವಕಾಶ ಇಚ್ಛಿಸದ ಸಂಪ್ರದಾಯದ ವಿಮಲೆಯನ್ನು ನಿಖಿಲ ಸದಾ ಆಕ್ಷೇಪಿಸುತ್ತಲೇ ಇರುವನ್ನು 'ಗಿಲ್ಬಿ' ಎಂಬ ಇಂಗ್ಲಿಷ್ ಮಹಿಳೆಯಿಂದ ವಿಮಲೆಗೆ ಇಂಗ್ಲಿಷ್ ಕಾವ್ಯ ಕಥೆ ಕಾದಂಬರಿಗಳನ್ನು ಪರಿಚಯಿಸುವ, ಇಂಗ್ಲಿಷ್ ಭಾಷೆ–ಸಾಹಿತ್ಯದ ಪಾಠ ಹೇಳಿಸಲು ಸಂಬಳಕೊಟ್ಟು ಗೊತ್ತು ಮಾಡಿದ್ದನು. ಹೊರಜಗತ್ತಿನ ಪರಿಚಯವಿಲ್ಲದೆ 'ಸ್ತ್ರೀ ಸಬಲೀಕರಣವಾಗದೆಂಬುದು ನಿಖಿಲನ ನಿರ್ಧಾರವಾಗಿತ್ತು. ವಿವಾಹದ ಮೊದಲ ದಿನಗಳಲ್ಲಿ ಸತಿ–ಪತಿಯರ ಪ್ರೇಮಾನುರಾಗ ಸಂಪ್ರದಾಯದ ಚೌಕಟ್ಟಿನೊಳಗೆ ಬಹುರಮ್ಯವಾಗಿಯೇ ಸಾಗುತ್ತಿತ್ತು, ನಿಖಿಲನಿಗೆ ಒಬ್ಬ ಅಣ್ಣನಿದ್ದನು. ಆತ ಶ್ರೀಮಂತಿಕೆಯ ಲೋಲುಪತೆಯನ್ನು ಎಗ್ಗಿಲ್ಲದೆ ಅನುಭವಿಸಿ ಸುರಾಪಾನದಿಂದ ಶರೀರದ ಹದುಳವನ್ನು ಹಾಳು ಮಾಡಿಕೊಂಡು ರೋಗಪೀಡಿತನಾಗಿ ಅಕಾಲ ವಯಸ್ಸಿಗೇ ಮರಣ ಹೊಂದಿದ್ದ. ಆತನ ಪತ್ನಿ ಅರ್ಥಾತ್ ನಿಖಿಲನ ಅತ್ತಿಗೆ ವಿಧವೆಯಾಗಿ ಹೊರ ಪ್ರಪಂಚಕ್ಕೆ ಮುಖ ತೋರಿಸದೆ ರೂಢಿಗತವಾದ ಪರದೆಯ ಹಿಂದೆಯೇ ಬೆಳಗು–ಬೈಗುಗಳನ್ನು ಕಳೆಯುತ್ತಿದ್ದಳು. ಬಂಗಾಳದಲ್ಲಿ ಸ್ವದೇಶಿ ಚಳುವಳಿ ನಗರ–ಹಳ್ಳಿಗಳೆನ್ನದೆ ಎಲ್ಲೆಡೆ ಆವರಿಸಿಕೊಂಡಿತು. ಚಳುವಳಿಗಾರರು ತಮ್ಮ ಕ್ರಾಂತಿಕಾರಕ ಭಾಷಣಗಳಿಂದ, ದೇಶ ಪ್ರೇಮದ ವೈಭವೀಕರಣದ ಮಾತುಗಳಿಂದ ಜನರ ಮನಸ್ಸುಗಳನ್ನು ಸೂಜಿಗಲ್ಲಿನಂತೆ ಸೆಳೆಯುತ್ತಿದ್ದರು. ಸ್ವಾತಂತ್ರ್ಯ ಚಳುವಳಿಗಾರರ ಭಾಷಣ ಕೇಳಲು ಜನ ಮುಗಿಬೀಳುತ್ತಿದ್ದರು. ಇಂತಹ ಚಳುವಳಿಗಾರರಲ್ಲಿ 'ಸಂದೀಪ'ನೆಂಬ ಹೋರಾಟಗಾರ, ಜಹಗೀರುದಾರ,

---

೯. ರವೀಂದ್ರನಾಥ ಠಾಕೂರ್ 'ಮನೆ ಜಗತ್ತು', (ಅನು) ಎಚ್.ವಿ.ಸಾವಿತ್ರಮ್ಮ, ಕಾವ್ಯಾಲಯ ಪ್ರಕಾಶನ, ೧೯೭೭, ಪುಟ–೯೬

ನಿಖಿಲನ ಸ್ನೇಹವನ್ನು ಸಂಪಾದಿಸಿ ತನ್ನ ರೋಚಕವಾದ ಮಾತುಗಳಿಂದ ಜನರನ್ನು ಮರುಳುಗೊಳಿಸುತ್ತಾನೆ. ಇವನ ಪರಿಚಯವನ್ನು ಕವಿ ಈ ರೀತಿ ಚಿತ್ರಿಸುತ್ತಾರೆ. "ಸಂಪತ್ತು ನನ್ನದಾಗಬೇಕಾಗಿತ್ತು. ಪುನಃ ಪುನಃ ನನ್ನ ಅನೇಕ ಅಪೇಕ್ಷೆಗಳು ದುಡ್ಡಿನ ಅಭಾವದಿಂದ ತಡೆಗಟ್ಟಿ ನಿಲ್ಲಬೇಕಾಗಿವೆ. ಇದು ನನಗೆ ತಕ್ಕುದಲ್ಲ. ಇದು ನನ್ನ ವಿಧಿಯ ಅನ್ಯಾಯವಲ್ಲ: ಹೇಯ ಅಭಿರುಚಿ! ನನ್ನಂತಹವನು ಮನೆ ಬಾಡಿಗೆಗಾಗಲಿ, ಮಧ್ಯಮ ತರಗತಿಯ ರೈಲುಗಾಡಿಯ ಟಿಕೆಟ್ಟಿಗಾಗಲಿ ಒದ್ದಾಡುವುದು ಬರಿಯ ತೊಂದರೆಯಲ್ಲ – ಅಸಹ್ಯ!"[೧೦] ಈತನಿಗೆ ಸ್ಫೂರ್ತಿದೇವತೆ ಹಾಗೂ ಪ್ರೇರಕ ಶಕ್ತಿದೇವತೆಯನ್ನಾಗಿ 'ದುರ್ಗಾ' ದೇವತೆಯನ್ನು ಬಳಸಿಕೊಳ್ಳುತ್ತಾನೆ. ಬಂಗಾಳದ ಮಹಿಳಾ ಸಮೂಹವೆಲ್ಲ ದುರ್ಗೆಯ ಅಪರಾವತಾರವೆಂಬ ದಿನದಿಂದ ದಿನಕ್ಕೆ 'ಸಂದೀಪನ' ಭಾಷಣಗಳು ಸಮುದಾಯದ ಮೇಲೆ ಪ್ರಭಾವ ಬೀರಿ ರೂಪಿಸುತ್ತದೆ. ಆತನಿಗೂ ಸಾವಿರ ಸಂಖ್ಯೆಯ ಅನುಯಾಯಿಗಳು ಸೃಷ್ಟಿಗೊಳ್ಳುತ್ತಾರೆ. ಜನಪ್ರಿಯತೆಯ ಪ್ರವಾಹಕ್ಕೆ ನಿಖಿಲನ ಪತ್ನಿ 'ವಿಮಲೆ'ಯೂ ಒಳಗಾಗುತ್ತಾಳೆ. ವಿಮಲೆಯ ಪತಿ ನಿಖಿಲನಿಗೂ, ಸಂದೀಪನಿಗೂ, ಸ್ವದೇಶೀ ಚಳುವಳಿಯ ಬಗ್ಗೆ ಚರ್ಚೆ, ವಾದಗಳು ದಿನನಿತ್ಯ ನಡೆಯುತ್ತಲೇ ಇರುತ್ತವೆ. ವಿಮಲೆ ಸಂದೀಪನ ವಾದ ವೈಖರಿ, ಆತನ ವಿನಯಶೀಲ ವರ್ತನೆ ತನ್ನ ಗಂಡ ನಿಖಿಲನಿಗೆ ಸ್ನೇಹದಿಂದಿರುವ ಕಾರಣಕ್ಕೆ ಸಂದೀಪನ ಭಾಷಣ ಕೇಳಲು ವಿಮಲೆ ಮೊದಮೊದಲು ಮುಖದ ಪರದೆಯನ್ನು ಬಳಸಿದರೂ ಒಂದೆರಡು ದಿನಗಳ ನಂತರ ಪರದೆಯನ್ನು ಬಿಟ್ಟು ಹೊರಜಗತ್ತಿಗೆ ತನ್ನ ಮುಖವನ್ನು ತೋರಿಸುವ ಹಾಗೂ ತನ್ನ ಕಣ್ಣುಗಳಿಂದ ಹೊರಪ್ರಪಂಚವನ್ನು ನೋಡುವ ಉತ್ಸಾಹಕ್ಕೆ ಒಳಗಾಗಿ ಬಿಡುತ್ತಾಳೆ. ಸಂದೀಪ ಮಾತುಮಾತಿಗೆ ಸ್ವದೇಶಿ ಚಳುವಳಿಗೂ, ಬಂಗಾಳದ ಮಾತೃದೇವತೆ ದುರ್ಗೆಗೂ ಅವಿನಾಭಾವದ ಮಾತುಗಳನ್ನಾಡಿ ವಿಮಲೆಯ ಮನಸೆಳೆಯುತ್ತಾನೆ. ವಿಮಲೆ ಸಂದೀಪನನ್ನು ಗೌರವದಿಂದ ತನ್ನ ಮನೆಗೆ ಭೋಜನಕ್ಕೆ ಕರೆಯುವ ಹಂತಕ್ಕೆ ಪ್ರಭಾವಿತಳಾಗುತ್ತಾಳೆ. ಚತುರ ಭಾಷಣಕಾರನಾದ ಸಂದೀಪ ವಿಮಲೆಯೊಡನೆ ಕೊಂಚ ಹೆಚ್ಚಿನ ರೀತಿಯಲ್ಲಿ ಸಲುಗೆಯನ್ನು ಬೆಳೆಸುತ್ತಾನೆ.

ನಿಖಿಲ ಮತ್ತು ಸಂದೀಪರು ಚಿಕ್ಕಂದಿನ ಕಾಲದಿಂದಲೂ ಸಂಗಾತಿಗಳು. ಇಬ್ಬರ ಮನೋಧರ್ಮಗಳು ಬೇರೆ ಬೇರೆಯವು. ಅಭಿಪ್ರಾಯ ಭೇದಗಳ ಕಾರಣದಿಂದ ಆಗಾಗ್ಗೆ ಸ್ನೇಹಿತರಿಬ್ಬರ ನಡುವೆ ತೀವ್ರವಾದ ಚರ್ಚೆಗಳು ನಡೆಯುತ್ತಿದ್ದವು. ಬಂಗಾಳ ದೇಶವು ಶಾಕ್ತೇಯರ ನಾಡು, ದುರ್ಗೆ ಇಲ್ಲಿನ ಶಕ್ತಿದೇವತೆ, ಸತ್ಯ–ನ್ಯಾಯಗಳನ್ನು ನಂಬಿ ಸುಖಬಾಳನ್ನು ನಿರೀಕ್ಷಿಸಬಾರದು. ನ್ಯಾಯ–ನೀತಿ–ಸತ್ಯಗಳನ್ನು ಧ್ಯೇಯಾದರ್ಶಗಳನ್ನಾಗಿ ಇದಿರಿಟ್ಟು ಕೊಡಲು ಯಾವ ಸಾಮ್ರಾಜ್ಯವೂ ಹುಟ್ಟಿಬೆಳೆದಿಲ್ಲ. ಕ್ರಾಂತಿಯಿಂದ ಸುಖ ಸಾಮ್ರಾಜ್ಯದ ಸ್ಥಾಪನೆಯಾಗಬೇಕೆಂಬುದು ಸಂದೀಪನ ವಾದ.

---

೧೦. ರವೀಂದ್ರನಾಥ ಠಾಕೂರ್ 'ಮನೆ ಜಗತ್ತು', (ಅನು) ಎಚ್.ವಿ.ಸಾವಿತ್ರಮ್ಮ, ಕಾವ್ಯಾಲಯ ಪ್ರಕಾಶನ, ೧೯೭೭, ಪುಟ–೧೦೩

ಆತುರ ನಿರ್ಧಾರದಿಂದ ಯಾವ ಫಲವನ್ನು ಪಡೆಯಲು ಸಾಧ್ಯವಿಲ್ಲ ಎಂಬ ವಾದವನ್ನು ನಿಖಿಲ ಮುಂದಿಟ್ಟುಕೊಂಡು ಒಂದು ಮುಖದಲ್ಲಿ ಸ್ವದೇಶಿ ಚಳುವಳಿಗೆ ಬೆಂಬಲವನ್ನು, ಅದೇ ಕಾಲಕ್ಕೆ ಕೈಗಾರಿಕೆಗಳ ಸ್ಥಾಪನೆಗೆ ಒಲವನ್ನು ವಿದೇಶಿ ಬಟ್ಟೆಗಳನ್ನು ಸುಡುವುದರಿಂದ ಹುಂಬತನವಾಗುತ್ತದೆಯೇ ಹೊರತು ಇದರಿಂದ ರಾಷ್ಟ್ರೀಯ ನಷ್ಟವೆಂಬುದು ನಿಖಿಲನ ವಾದ. ಶಕ್ತಿಯಾರಾಧನೆಯ ವೈಭವೀಕರಣದ ಭಾಷಣಕ್ಕೆ ಪ್ರಚೋದಿತಳಾದ ವಿಮಲೆ ಸಂದೀಪನ ವಾದ ಸರಣಿಯನ್ನು ಒಪ್ಪಿ ಆತನ ಅನುಯಾಯಿಯಂತೆ ವರ್ತಿಸುತ್ತಾಳೆ.

ವಿಮಲೆ; ಅದಮ್ಯವಾದ ಜೀವನೋತ್ಸಾಹ, ಬದುಕಿನಲ್ಲಿ ಅಸಾಧಾರಣವಾದ ಸಾಧನೆಯನ್ನು ಮಾಡಬೇಕೆಂಬ ಉತ್ಕಟವಾದ ಬಯಕೆ, ಇಂತಹ ಮನಸ್ಥಿತಿಯನ್ನು ಕಂಡು ಅದಕ್ಕೆ ಪೂರಕವಾಗಿ ಸಂದೀಪ ವಿಮಲೆಯನ್ನು ಅನನ್ಯ ರೀತಿಯಲ್ಲಿ ಹೊಗಳುತ್ತಾನೆ. ವಿಮಲೆಯನ್ನು ರಾಣಿಯೆಂದೂ, ದುರ್ಗೆಯ ಅಪರಾವತಾರವೆಂದೂ, ವಂಗದೇಶದ ಸ್ತ್ರೀ ಸಮುದಾಯದ ಪ್ರತಿನಿಧಿಯೆಂದೂ ಹೊಗಳಿ ಅಟ್ಟಕ್ಕೇರಿಸುತ್ತಾನೆ. ಸ್ವದೇಶಿ ಚಳುವಳಿಯ ಕಾರ್ಯಕಲಾಪಗಳಲ್ಲೆಲ್ಲಾ ವಿಮಲೆಯ ಸಲಹೆ ಸ್ಫೂರ್ತಿ ಸಂಜೀವಿನಿಯೆಂದೂ ಬಿಂಬಿಸುತ್ತಾನೆ. ವಿಮಲೆಯ ಉತ್ಸಾಹದ ಮನಃಸ್ಥಿತಿ ಸಂದೀಪನಿಗೆ ಮರುಳಾಗುತ್ತದೆ. ಸಂದೀಪನ ದೇಶಪ್ರೇಮದ ಒಳಗೊಳಗೆ ಸ್ವಾರ್ಥಿ ಪ್ರೇಮದ ತಿರುಳಿದೆಯೆಂದು ತಿಳಿಯಲಾರದೇ ಹೋಗುತ್ತಾಳೆ. ನಿಖಿಲನಿಂದ ದಿನದಿಂದ ದಿನಕ್ಕೆ ದೂರವಾಗುತ್ತಾಳೆ. ಸಂದೀಪನಿಗೆ ಹತ್ತಿರವಾಗುತ್ತಾಳೆ.

ಸಂಸಾರ ಬಂಧದಲ್ಲಿ ಯಾವುದನ್ನು ಮಾಡಬಾರದಿತ್ತೋ ಅಂತಹ ಕಳ್ಳತನದ ಕೃತ್ಯಕ್ಕೂ ವಿಮಲೆ ಮುಂದಾಗುತ್ತಾಳೆ. ನಾರಿ ತನ್ನ ಮನೆಯಲ್ಲಿ ಕಳ್ಳತನ ಮಾಡಬಾರದೆಂಬ ನೀತಿ ಮಾತಿದ್ದರೂ, ದೇಶಪ್ರೇಮವೆಂಬ ಭ್ರಾಂತಿಗೆ ಒಳಗಾಗಿ ತನ್ನ ಗಂಡನ ದ್ರವ್ಯವನ್ನೆ ಅಪಹರಿಸಿ ಸಂದೀಪನಿಗೆ ನೀಡುತ್ತಾಳೆ. "ಪೆಟ್ಟಿಗೆಯಲ್ಲಿದ್ದ ಒಂದು ಖಾನೆಯಲ್ಲಿ ಹಣವಿತ್ತು. ಕಾಗದದ ಹಣವಲ್ಲ; ಕಾಗದದಲ್ಲಿ ಸುತ್ತಿದ್ದ ಚಿನ್ನದ ನಾಣ್ಯಗಳು. ಎಣಿಸಲು ಹೊತ್ತಿರಲಿಲ್ಲ. ಅಲ್ಲಿದ್ದ ಇಪ್ಪತ್ತು ಸುರುಳಿಗಳನ್ನೂ ಸೆರಗಿನಲ್ಲಿ ಕಟ್ಟಿಕೊಂಡೆ. ಎಷ್ಟು ಭಾರ! ದುಷ್ಕೃತ್ಯದ ಭಾರ ನನ್ನ ಹೃದಯವನ್ನು ಪುಡಿ ಮಾಡುತ್ತಿತ್ತು".[೧೧] ತನ್ನ ಕೃತ್ಯಕ್ಕೆ ಬಿಸಿರಕ್ತದ ತರುಣ ಅಮೂಲ್ಯನನ್ನು ಬಳಸಿಕೊಂಡು ಆತನು ಕೇಡಿಗೊಳಗಾಗುವನೆಂಬ ಭಯ ಹುಟ್ಟಿ ವಿಷಾದಪಟ್ಟು ದುಃಖಿಸುತ್ತಾಳೆ.

ನಿಖಿಲನ ಅತ್ತಿಗೆ ವಿಮಲೆಯ ನಡಾವಳಿಗಳನ್ನು ಸೂಕ್ಷ್ಮವಾಗಿ ಗಮನಿಸಿ, ತನ್ನ ಮೈದುನ ನಿಖಿಲನಿಗೆ ಸೂಚ್ಯವಾಗಿ ಹೇಳುತ್ತಾಳೆ. ನಿಖಿಲನ ಗುರುವೂ ಸಹ. ಸಂದೀಪನ ಡೋಂಗಿ ದೇಶಪ್ರೇಮವನ್ನು ಪತ್ತೆ ಹಚ್ಚಿ ಸಲುಗೆಯ ಮುಂದಿನ ಕೇಡುಗಳನ್ನು ವಿವರಿಸಿ ಸಂದೀಪನನ್ನು ದೂರವಿರಿಸುವಂತೆ ಸಲಹೆ ಮಾಡುತ್ತಾನೆ. ನಿಖಿಲನಿಗೆ ಪತ್ನಿ ವಿಮಲೆಯ ಬಗ್ಗೆ ಅಪಾರವಾದ ನಂಬಿಕೆ, ಆಕೆ ಸಂಪ್ರದಾಯದ ವರ್ತುಲದಿಂದ ಮುಕ್ತಳಾದಳೆಂಬ ಹರ್ಷಕ್ಕೆ, ವಿಮಲೆಯ

---

೧೧. ರವೀಂದ್ರನಾಥ ಠಾಕೂರ್ 'ಮನೆ ಜಗತ್ತು', (ಅನು) ಎಚ್.ವಿ.ಸಾವಿತ್ರಮ್ಮ, ಕಾವ್ಯಾಲಯ ಪ್ರಕಾಶನ, ೧೯೭೭, ಪುಟ-೧೩೦

ವರ್ತನೆಯನ್ನು ಆಕ್ಷೇಪಿಸುವುದಿಲ್ಲ. ಇದು ಸಂದೀಪನಿಗೂ ಆಶ್ಚರ್ಯವುಂಟು ಮಾಡುತ್ತದೆ. ನಿಖಿಲನ ತಾಳ್ಮೆ, ವಿವೇಕಪೂರ್ಣವಾದ ನಿರ್ಧಾರಗಳಿಂದ ಆತ ನಮ್ಮ ಮನಸ್ಸಿನಲ್ಲಿ ಆದರ್ಶ ವ್ಯಕ್ತಿಯಾಗಿ ಸ್ಥಿರವಾಗಿ ನಿಲ್ಲುತ್ತಾನೆ.

ದೇಶ ಪ್ರೇಮದ ಉಮೇದಿನಲ್ಲಿ ವಿಮಲೆ ತಳೆಯುವ ದುಡುಕು ನಿರ್ಧಾರಗಳು ನಮಗೆ ಆಕೆಯ ಬಗ್ಗೆ ಕನಿಕರವುಂಟು ಮಾಡುತ್ತವೆ.

ವಿಮಲೆಯ ಮನಃಸ್ಥಿತಿಯೂ, ದೇಶದ ವಿಪ್ಲವಗಳೂ ಒಂದೇ ಆದಂತೆ ಭಾಸವಾಗುತ್ತದೆ. ಕವಿ ರವೀಂದ್ರರು ಮನೆ ಜಗತ್ತು ಕಾದಂಬರಿಯಲ್ಲಿ ಸಂದೀಪನೆಂಬ ಸ್ವಾತಂತ್ರ ಚಳುವಳಿಯ ನಾಯಕನ 'ಮಾರ್ಜಾಲ ಸನ್ಯಾಸತ್ವವನ್ನು' ಬಹುನವುರಾದ ರೀತಿಯಲ್ಲಿ ನಮಗೆ ಕಟ್ಟಿಕೊಡುತ್ತಾರೆ.

ಭಾರತ ಸ್ವಾತಂತ್ರ್ಯ ಸಂಗ್ರಾಮದ ಕಥಾವಸ್ತು ಕೇವಲ ಬಂಗಾಳಕ್ಕೆ ಅನ್ವಯಿಸದೆ ಸಮಸ್ತ ಭಾರತದ ವಸ್ತು ಸ್ಥಿತಿಯ ದಾಖಲೆಯಾಗಿದೆ. ಚಳುವಳಿಯ ರೂಪರೇಷೆಗಳು ಎಲ್ಲ ಭಾರತೀಯ ಪ್ರದೇಶಗಳಿಗೂ ಅನ್ವಯವಾಗುತ್ತದೆ. ಗೃಹಿಣಿಯರಿಗೆ ನೀಡಲಾಗುವ ವಿಚಾರ ಹಾಗೂ ಧಾರ್ಮಿಕ ಮತ್ತು ಸಾಮಾಜಿಕ ಸ್ವಾತಂತ್ರ್ಯಗಳು ಸ್ವೇಚ್ಛಾಚಾರಗಳಾಗಿ ಪರಿವರ್ತಿತವಾಗಬಾರದೆಂಬ ಮಾತುಗಳೂ ಕೇಳಿ ಬರುತ್ತವೆ. ಓದುಗರು, ನಿಖಿಲ ಮತ್ತು ಸಂದೀಪರ ವೈಚಾರಿಕ ಜಿಜ್ಞಾಸೆಗಳನ್ನು ಅರ್ಥ ಮಾಡಿಕೊಳ್ಳಲು ಕೊಂಚ ಕಷ್ಟವೆನಿಸಿದರೂ, ತೀರಾ ಸಂಕೀರ್ಣವೆನಿಸದೆ ಸರಳತೆಯನ್ನು ಮೈಗೂಡಿಸಿಕೊಳ್ಳುತ್ತದೆ.

ಕಾದಂಬರಿಯಲ್ಲಿ ಮನೆಯೊಳಗಡೆ ಮತ್ತು ಹೊರಗಡೆ ನಡೆಯುವ ಸಂಘರ್ಷಗಳು ನಾಟಕೀಯತೆಗಿಂತ ಓದುಗರನ್ನು ವೈಚಾರಿಕವಾದ ಆಯಾಮದತ್ತ ಸೆಳೆಯುತ್ತವೆ. ಹಾಗೆ ನೋಡಿದರೆ ಸ್ತ್ರೀ ಸ್ವಾತಂತ್ರ್ಯದ ಸುಳುಹುಗಳು ಈ ಕಾದಂಬರಿಯಲ್ಲಿ ಸೂಚ್ಯವಾಗಿ ಅಲ್ಲಲ್ಲಿ ಚರ್ಚಿತವಾಗಿವೆ. ಸ್ತ್ರೀ–ಪುರುಷನೊಡನೆ ಹಂಚಿಕೊಳ್ಳಬಹುದಾದ ಸಮಾನತೆಯನ್ನು ಇಲ್ಲಿ ಗೊಂದಲಕ್ಕೆ ಆಸ್ಪದವಿಲ್ಲದೆ ವಿಶ್ಲೇಷಿಸಲಾಗಿದೆ. ಸಮಾನತೆ ಅನುಕರಣ ಸಿದ್ಧಾಂತದ ಮೇಲೆ ನಿಲ್ಲಬಾರದು. ಸ್ತ್ರೀ–ಪುರುಷನನ್ನು ಅನುಕರಿಸುವುದು ಸಮಾನತೆಯೆನಿಸುವುದಿಲ್ಲ ಸಮಾನತೆ, ಶೈಕ್ಷಣಿಕವಾಗಿ, ಸಾಮಾಜಿಕವಾಗಿ, ಉಂಟಾಗಬೇಕು. ಸ್ತ್ರೀಯರನ್ನು ಅಶಕ್ತರೆಂದೋ ಅಬಲೆಯರೆಂದೋ ಲೇಬಲ್ ಅಂಟಿಸಿ ಅನುಕಂಪೆಯ ಆಧಾರದಲ್ಲಿ ಸಮಾನತೆ ಇರಬಾರದು. ಸ್ತ್ರೀತನದ ಬೆಳವಣಿಗೆಯಲ್ಲಿಯೇ ಹಂತಹಂತವಾದ ಮಜಲುಗಳಲ್ಲಿ ಸಮಾನತೆ ಸೃಷ್ಟಿಗೊಳ್ಳಬೇಕು. ಇಂತಹ ಅನೇಕ ವಿಚಾರಗಳು ಪಾತ್ರಗಳ ವಾದಸರಣಿಯನ್ನು ವ್ಯಕ್ತಗೊಳ್ಳುತ್ತಾ ಹೋಗಿವೆ. ದೇಶಪ್ರೇಮಿಗಳಲ್ಲಿ ಸಂದೀಪನಂತಹ ಸೋಗಲಾಡಿಗಳು ಇರುತ್ತಾರೆಂಬುದು ಬಹುಸೊಗಸಾದ ರೀತಿಯಲ್ಲಿ ವರ್ಣಿಸಲಾಗಿದೆ.

ಸ್ವದೇಶಿ ಚಳುವಳಿ, ಸ್ವಾತಂತ್ರ್ಯ ಚಳುವಳಿಗಳಿಗೆ ಪ್ರಾದೇಶಿಕ ಭಿನ್ನತೆ ಇರುವುದಿಲ್ಲ. ಇವು ಸಾರ್ವತ್ರಿಕವಾದ ಆಯಾಮವನ್ನು ಹೊಂದುತ್ತವೆ. ಸಂದೀಪನ ದೇಶಪ್ರೇಮ ಟೊಳ್ಳುತನದ್ದು,

ನಿಖಿಲನ ದೇಶಪ್ರೇಮ ವಿಳಂಬ ಧೋರಣೆಯದ್ದಾದರೂ ಶಾಶ್ವತವಾದುದು ಎಂಬುದು ಕಾದಂಬರಿಯಲ್ಲಿ ಧ್ವನಿತವಾಗಿದೆ.

ರವೀಂದ್ರನಾಥ ಠಾಕೂರರ ಸ್ವದೇಶಿ ಚಳುವಳಿಯು ವಸ್ತುವಾಗಿ ಉಳ್ಳದ್ದು 'ಮನೆ ಜಗತ್ತು'. ಕನ್ನಡ ಕಾದಂಬರೀ ಕ್ಷೇತ್ರದಲ್ಲಿ ರವೀಂದ್ರನಾಥರ ಪ್ರಭಾವಕ್ಕೆ ಒಳಗಾದ ಅನೇಕ ಕಾದಂಬರಿಕಾರರು ಸ್ವಾತಂತ್ರ್ಯ ಹೋರಾಟದ ವಸ್ತುವನ್ನು ಬಳಸಿಕೊಂಡು ಹಲವಾರು ಕಾದಂಬರಿಗಳು ಬಂದಿರುವುದನ್ನು ಕಾಣಬಹುದು. ಶಿವರಾಮ ಕಾರಂತರ 'ನಾವು ಕಟ್ಟಿದ ಸ್ವರ್ಗ', ಬಸವರಾಜ ಕಟ್ಟಿಮನಿಯವರ 'ಮಾಡಿ ಮಡಿದವರು' ಮುಂತಾದವನ್ನು ಇಲ್ಲಿ ಹೆಸರಿಸಬಹುದು.

ವೈಚಾರಿಕ ಚರ್ಚೆಗೆ ತಕ್ಕಂತಹ ಪಾತ್ರಗಳನ್ನು ಸೃಷ್ಟಿಸಿಕೊಂಡು ಕಾದಂಬರಿಯಲ್ಲಿ ನಿರೂಪಿಸಿರುವ ರೀತಿ ಅರ್ಥಪೂರ್ಣವಾಗಿದೆ.

### ೮.೩. ರವೀಂದ್ರನಾಥ ಠಾಕೂರರ 'ಗೋರಾ' : ಧಾರ್ಮಿಕತೆಯ ಸಂಘರ್ಷ

ರವೀಂದ್ರನಾಥ ಠಾಕೂರರ 'ಗೋರಾ' ಕಾದಂಬರಿಯನ್ನು ಕನ್ನಡದಲ್ಲಿ ಗಣೇಶ ಶರ್ಮ ಮತ್ತು ಹೆಚ್.ವಿ. ಸಾವಿತ್ರಮ್ಮ ಇಬ್ಬರು ಅನುವಾದ ಮಾಡಿದ್ದಾರೆ. ಗಣೇಶಶರ್ಮರು ೧೯೭೬ರಲ್ಲಿ ಮಾಡಿದ್ದಾರೆ. ಹೆಚ್.ವಿ. ಸಾವಿತ್ರಮ್ಮನವರು ಇದಕ್ಕಿಂತ ಮುಂಚೆಯೇ ಇದನ್ನು 'ಗೋರಾ' ಎಂಬ ಹೆಸರಿನಿಂದಲೇ ಅನುವಾದ ಮಾಡಿದ್ದು, ಇದು ಎರಡನೆಯ ಮುದ್ರಣವಾಗಿ ೧೯೯೭ರಲ್ಲಿ ಪ್ರಕಟವಾಗಿದೆ. ಬಂಗಾಳದ ಬ್ರಹ್ಮಸಮಾಜ, ವೈದಿಕ ಸಮಾಜ, ದೇಶೀಯತೆ, ರಾಷ್ಟ್ರೀಯತೆ, ಧಾರ್ಮಿಕಕವಿ ಹಿಂದೂ ಧರ್ಮದ ಹಿಂದುತ್ವದ ಪ್ರತಿಪಾದನೆ, ಪ್ರೀತಿ-ಪ್ರೇಮ, ಅಂತರ್‌ಜಾತಿ ವಿವಾಹ, ಅಂತರ್‌ಧರ್ಮೀಯ ವಿಚಾರಗಳು ಹೀಗೆ ಈ ಕಾದಂಬರಿಯಲ್ಲಿ ಬರುವ ವಿಚಾರಗಳಿಂದಾಗಿ ಇದೊಂದು ರಾಷ್ಟ್ರೀಯ ಹಾಗೂ ಧಾರ್ಮಿಕ ಪ್ರತಿಪಾದನೆಯ ಕಾದಂಬರಿಯಾಗಿದೆ. ಇದರ ವಸ್ತು ಚೆದುರಿದಂತಿದ್ದು, ಕೆಲವು ಅಸಂಭಾವ್ಯ ಸಂಗತಿಗಳೂ ಇವೆ.

ವಿನಯಭೂಷಣ ಕಾಲೇಜಿನ ವಿದ್ಯಾಭ್ಯಾಸವನ್ನು ಮುಗಿಸಿದ ಒಬ್ಬ ತರುಣ. ಆತ ಒಂದು ದಿನ ತನ್ನ ಮನೆಯ ಕೊಠಡಿಯಲ್ಲಿ ಕುಳಿತಿದ್ದಾಗ ಕಿಟಕಿಯಿಂದ ಹೊರಗೆ ಎರಡು ಗಾಡಿಗಳಿಗೆ ಅಪಘಾತವಾಗಿ ಅದರಲ್ಲಿ ಒಬ್ಬ ವೃದ್ಧನಿಗೆ ಗಾಯವಾಗುವುದನ್ನು ನೋಡುವಲ್ಲಿಂದ ಈ ಕಾದಂಬರಿ ಆರಂಭವಾಗುತ್ತದೆ. ಆಗ ವಿನಯ ಎದ್ದು ಹೊರಗೆ ಹೋಗಿ ಆ ಗಾಯಗೊಂಡ ವೃದ್ಧನಿಗೆ ನೆರವಾಗುತ್ತಾನೆ. ಅಲ್ಲಿಂದ ಆ ವೃದ್ಧನಿಗೂ ವಿನಯನಿಗೂ ಸ್ನೇಹ ಬೆಳೆದು, ವಿನಯ ಆಗಾಗ ಆ ವೃದ್ಧನ ಮನೆಗೆ ಹೋಗಿ ಬರುವುದನ್ನು ಇಟ್ಟುಕೊಳ್ಳುತ್ತಾನೆ. ಆ ವೃದ್ಧ 'ಬ್ರಹ್ಮಸಮಾಜ'ಕ್ಕೆ ಸೇರಿದ ಮನುಷ್ಯ. ಆದರೆ ವಿನಯನಾದರೋ 'ಪೂರ್ವಸಂಪ್ರದಾಯದ' ಬ್ರಾಹ್ಮಣ.

ವಿನಯನ ಆಪ್ತ ಗೆಳೆಯ ಗೋರಾ. ಗೋರಾನೂ ಒಬ್ಬ ಸಂಪ್ರದಾಯಶರಣ. ಗೋರಾ ಪೂರ್ವಾಚಾರದ ಎಲ್ಲಾ ಪದ್ಧತಿಗಳನ್ನೂ ಯಾವುದೇ ಪೂರ್ವಗ್ರಹವಿಲ್ಲದೆ, ಆಲೋಚಿಸದೆ ಒಪ್ಪಿಕೊಳ್ಳಬೇಕು ಎಂದು ವಾದ ಮಾಡುವ ಸ್ವಭಾವದವನು. ಆದರೆ ವಿನಯ ಆಗಾಗ ಬ್ರಹ್ಮಸಮಾಜದ

ಜನರ ಮನೆಗೆ ಹೋಗುವುದು ಇಷ್ಟವಾಗದು. ಆ ಬ್ರಹ್ಮಸಮಾಜದವರ ಮನೆಯಲ್ಲಿರುವ ತರುಣಿಯರ ಮಾತನಾಡಿಸಲು ವಿನಯ ಹೋಗುವನೆಂಬುದು ಗೋರಾನ ನಂಬಿಕೆ. ಪ್ರೌಢ ಕನ್ನೆಯರೂ ತರುಣರೂ ಜೊತೆಜೊತೆಯಾಗಿ ಓಡಾಡಿ ನಂತರ ಅವರು ಮದುವೆಯಾಗುವ ಪದ್ಧತಿಯು ಪಾಶ್ಚಾತ್ಯರಿಂದ ಅನುಕರಣೆ ಮಾಡಿದ್ದು ಎಂಬುದು ಗೋರಾನ ತಿಳುವಳಿಕೆ; ಆ ಪ್ರಕ್ರಿಯೆ ಅವಿವೇಕತನದ್ದು ಎಂಬುದು ಅವನ ಭಾವನೆ.

ಗೋರಾನ ತಾಯಿ ಆನಂದಮಯಿ; ಆಕೆ ತಿಳುವಳಿಕೆ ಇರುವ ಹೆಂಗಸು. ಉದಾರ ಮನಸ್ಸಿನವಳು. ಆಕೆ ವಿನಯನ ಪರ; ವಿನಯ ಮಾಡುತ್ತಿರುವುದು ಸರಿ ಎಂದು ವಾದಿಸುವಳು. ಆಕೆಯ ಗಂಡ ಕೃಷ್ಣ ದಯಾಳ. ಆತ ತನ್ನ ಯೌವನದ ಕಾಲದಲ್ಲಿ ಅನಾಚಾರದಲ್ಲಿ ನಡೆದುಕೊಂಡವನು. ಈಗ ಆತ ವೃದ್ಧನಾಗುತ್ತಾ ಹೊರಟಂತೆಲ್ಲಾ ಆಚಾರವಂತನಾಗುತ್ತಿದ್ದಾನೆ. ಗೋರಾ ದೇಶಭಕ್ತ. ಆದರೆ ದೇಶವೆಂದರೆ ಎಲ್ಲ ಜನರೂ ಒಟ್ಟಿಗೆ ಸೇರಬೇಕೆಂದು ಆತ ಗೋರಾನಿಗೆ ಹೇಳುತ್ತಾನೆ. ಆದರೆ ಗೋರಾ ಅವನ ಈ ಮಾತನ್ನು ಒಪ್ಪುವುದಿಲ್ಲ. ತನ್ನ ಅಭಿಪ್ರಾಯಗಳನ್ನು ಒಪ್ಪಿ ಬರುವವರು ಮಾತ್ರ 'ದೇಶಭಕ್ತರು' ಎಂಬುದು ಅವನ ಸಿದ್ಧಾಂತ. ಗೋರಾನದು ಒಂದು ರೀತಿಯಲ್ಲಿ ಅತಿಯಾದ ಹಿಂದುತ್ವ ಪ್ರತಿಪಾದನೆ. ಆದರೆ ಇವನ ಉತ್ಸಾಹವನ್ನು ಮಾತ್ರ ಕೃಷ್ಣ ದಯಾಳು ಬೆಂಬಲಿಸುವುದಿಲ್ಲ.

ಒಂದು ದಿನ ಕೃಷ್ಣ ದಯಾಳು ಗೋರಾನನ್ನು ತನ್ನ ಬಳಿಗೆ ಕರೆದು, ತನ್ನ ಹಳೆಯ ಸ್ನೇಹಿತ ಪರೇಶಬಾಬುವಿನ ಮನೆಗೆ ಹೋಗಿ ಬರಲು ಹೇಳುತ್ತಾನೆ. ಈ ಪರೇಶಬಾಬು ಸಹ ವಿನಯನಿಗೆ ಗೊತ್ತಿರುವ ಒಬ್ಬ ಬ್ರಹ್ಮ ಸಮಾಜದ ವೃದ್ಧ. ಈತ ತನಗೆ ಒಬ್ಬ ಮಗ ಮತ್ತು ಮೂವರು ಹೆಣ್ಣು ಮಕ್ಕಳಿದ್ದರೂ ಸುಚರಿತೆ ಎಂಬ ಒಬ್ಬ ಹುಡುಗಿಯನ್ನು ಸಾಕಿಕೊಂಡಿರುತ್ತಾನೆ. ಪರೇಶಬಾಬು ಒಬ್ಬ ವಿವೇಕಿ ಮತ್ತು ಗುಣಶಾಲಿ ಎಂದು ಹೆಸರು ಗಳಿಸಿದವನು. ಈ ಸುಚರಿತೆಯನ್ನು ಬ್ರಹ್ಮಸಮಾಜದ ಹರಣ ಎಂಬ ಯುವಕನಿಗೆ ಕೊಟ್ಟು ಮದುವೆ ಮಾಡುವುದೆಂದು ಪರೇಶಬಾಬು ಮನೆಯವರೆಲ್ಲರ ಯೋಚನೆಯಾಗಿರುತ್ತದೆ.

ಕೃಷ್ಣ ದಯಾಳು ಹೇಳಿದಂತೆ ಗೋರಾ ಒಂದು ದಿನ ಪರೇಶಬಾಬು ಮನೆಗೆ ಹೋಗುತ್ತಾನೆ. ಆಗ ಅವನು ಪರೇಶಬಾಬುವಿನ ಮನೆಗೆ ದೋಣಿಯಲ್ಲಿ ಹೋಗುವಾಗ ದೋಣಿಯಲ್ಲಿ ಒಂದು ಘಟನೆಯನ್ನು ನೋಡುತ್ತಾನೆ. ಒಬ್ಬ ಇಂಗ್ಲಿಷಿನವನು ಮತ್ತು ಒಬ್ಬ ಇಂಗ್ಲಿಷ್ ಬಲ್ಲ ಬಂಗಾಳಿಯು ಒಟ್ಟಿಗೆ ಸೇರಿಕೊಂಡು ಬಂಗಾಳಿ ಜನರನ್ನು ಹೀಯಾಳಿಸುತ್ತಿದ್ದುದ್ದನ್ನು ಕಂಡ ಗೋರಾ ಅವರ ಮೇಲೆ ಸಿಟ್ಟಿಗೇಳುತ್ತಾನೆ. ತನ್ನ ದೇಶದ ಜನರನ್ನು ನಿಂದಿಸುವುದು ಅವನಿಗೆ ಇಷ್ಟವಾಗದು, ಸಹಿಸಲಾಗದು. ಕೋಪ ಬಂದು ಅವರನ್ನು ಬೈಯುತ್ತಾನೆ. ಆಗ ಅವರಿಬ್ಬರಲ್ಲಿ ಇಂಗ್ಲಿಷಿನವನು ಗೋರನ ಸಿಟ್ಟಿಗೆ, ಮಾತಿಗೆ ಉತ್ತರ ಕೊಡದೆ ನಿರುತ್ತರನಾಗುತ್ತಾನೆ. ಆತ ದೋಣಿಯಿಂದ ಇಳಿದು ಹೋಗುವಾಗ ತಾನು ಮಾತನಾಡಿದ್ದು ತಪ್ಪಾಯ್ತು ಎಂಬಂತೆ ಗೋರಾನ ಬಳಿ ಕ್ಷಮೆ ಕೇಳಿ ಹೊರಟು ಹೋಗುತ್ತಾನೆ.

ಅಲ್ಲಿಂದ ಗೋರಾ ಪರೇಶಬಾಬುವಿನ ಮನೆಗೆ ಬಂದಾಗ ಈ ವಿಷಯ ಅಲ್ಲಿ ಚರ್ಚೆಗೆ ಬರುತ್ತದೆ. ಆಗ ಅಲ್ಲಿದ್ದ ಹರಣ "ಬಂಗಾಳಿಗಳು ಇಂಗ್ಲಿಷರಷ್ಟು ಗಟ್ಟಿಗರಲ್ಲ"[೧೨] ಎಂದು ವಾದಿಸುತ್ತಾನೆ. ಆಗ ಗೋರಾ ಹರಣನ ಮೇಲೆ ಸಿಟ್ಟಿಗೇಳುತ್ತಾನೆ. ಹರಣನ ಮಾತನ್ನು ಗೋರಾ ಒಪ್ಪಲಾರ. ಆದರೆ ಅಲ್ಲಿದ್ದ ಸುಚರಿತೆಗೆ ಗೋರಾನ ಪೂರ್ವದ ಅಂಧಶ್ರದ್ಧೆಯ ವಿಚಾರಗಳು ಇಷ್ಟವಾಗದು. ಆದರೆ ಅವಳಿಗೆ ದೇಶದ ಮೇಲೆ ಮಾತ್ರ ಅಚಲವಾದ ಪ್ರೀತಿ ಪ್ರೇಮವಿದ್ದರಿಂದ, ಗೋರಾನ ದೇಶಾಭಿಮಾನದ ಭಾಗವನ್ನು ಮಾತ್ರ ಆಕೆ ಒಪ್ಪಿಕೊಳ್ಳುತ್ತಾಳೆ.

ಹೀಗಿರುವಲ್ಲಿ ಗೋರಾನ ಅಣ್ಣ ತನ್ನ ಮಗಳನ್ನು ವಿನಯನಿಗೆ ಕೊಟ್ಟು ಮದುವೆ ಮಾಡಿಸು ಎಂದು ಗೋರಾನ ದುಂಬಾಲು ಬೀಳುತ್ತಾನೆ. ಆದರೆ ಗೋರಾನಿಗೆ ಅದು ಒಪ್ಪಿತವಿಲ್ಲ. ವಿನಯನು ವಿಚಾರಶೀಲನಾಗಿರುವ ಸಂಭವವಿಲ್ಲ ಎಂಬುದು ಗೋರಾನ ಅನ್ನಿಸಿಕೆ. ಅಂಥ ವ್ಯಕ್ತಿಗೆ ತನ್ನ ಮಗಳನ್ನು ಕೊಡುವುದು ಬೇಡ ಎಂದು ಗೋರಾ ತನ್ನ ಅಣ್ಣನಿಗೆ ಹೇಳುತ್ತಾನೆ. ಧರ್ಮದ ಸನಾತನ ಪದ್ಧತಿಗಳಿಗೆ ಸಂಬಂಧಿಸಿದಂತೆ ವಿನಯ ಮತ್ತು ಗೋರಾನ ನಡುವೆ ಮೊದಲಿನಿಂದಲೂ ಭಿನ್ನಾಭಿಪ್ರಾಯವಿದ್ದೇ ಇರುತ್ತದೆ. ಆದರೆ ಆನಂದಮಯಿಯ ಅಪೇಕ್ಷೆಯಂತೆ ಅವರಿಬ್ಬರೂ ವಿಶ್ವಾಸದಿಂದ ನಡೆದುಕೊಂಡು ಬರುತ್ತಿರುತ್ತಾರಷ್ಟೆ.

ನಡುವೆ ವಿನಯ ಸುಚರಿತೆಯ ಪರಿಚಯದಿಂದ ತನಗೆ ತನ್ನ ಅಂತರಂಗದಲ್ಲಾದ ಸಂಸ್ಕಾರವನ್ನು ಗೋರಾನಿಗೆ ನಿವೇದಿಸುತ್ತಾನೆ. ಆಗ ಗೋರಾನಿಗೆ ಅವನ ಮೇಲೆ ಇನ್ನಷ್ಟು ಅನುಮಾನ ಬರುತ್ತದೆ. ಆದರೆ ತನಗೆ ದೇಶದ ಪ್ರೇಮ ಮುಖ್ಯವೆಂದು ಭಾವಿಸುತ್ತಾನೆ. "ಒಂದು ವ್ಯಕ್ತಿಯ ಪ್ರೇಮಕ್ಕಾಗಿ ದೇಶದ ಪ್ರೇಮವನ್ನು ಬಲಿ ಕೊಡಬಾರದು"[೧೩] ಎಂದು ಅವನಿಗೆ ಸೂಚಿಸಿ, ಕೊನೆಗೆ ಗೋರಾ ವಿನಯನಿಗೆ ತನ್ನ ಅಣ್ಣನ ಮಗಳನ್ನು ಮದುವೆ ಮಾಡಿಕೋ ಎಂದು ಸೂಚಿಸುತ್ತಾನೆ. ವಿನಯ ಅದಕ್ಕೆ ಒಪ್ಪುತ್ತಾನೆ. ಆದರೆ ವಿನಯನಿಗೆ ನಿಜವಾಗಿಯೂ ಇದು ಇಷ್ಟವಿರುವುದಿಲ್ಲ. ಆದರೂ ವಿನಯ ಆಗಾಗ ಪರೇಶಬಾಬು ಮನೆಗೆ ಹೋಗಿ ಬರುವುದನ್ನು ಗೋರಾ ಹಿಂಬಾಲಿಸುತ್ತಿರುತ್ತಾನೆ. ಕೊನೆಗೆ ಗೋರಾನೇ ಹೀಗೆ ಹೋಗಿ ಬರುತ್ತಾ ಇರುವಾಗ ಸುಚರಿತೆಯ ಗುಣಕ್ಕೆ ಸೋಲುತ್ತಾನೆ. ಆಕೆಗೂ ಗೋರಾನ ವಿಷಯದಲ್ಲಿ ಹೆಚ್ಚಿನ ಗೌರವ ಉಂಟಾಗುತ್ತದೆ. ಮದುವೆಯಾಗಕೂಡದೆಂದು ನಿರ್ಧರಿಸಿದ್ದ ಗೋರಾ ಈ ವರ್ತುಲದಿಂದ ತಪ್ಪಿಸಿಕೊಳ್ಳಲು ದೇಶಾಂತರ ಹೋಗಿ ಬಿಡುವುದೆಂದು ನಿರ್ಧರಿಸುತ್ತಾನೆ.

ಈ ಸಂದರ್ಭದಲ್ಲಿ ಒಂದು ವಿಶಿಷ್ಟ ಘಟನೆ ನಡೆಯುತ್ತದೆ. ಒಬ್ಬ ಇಂಗ್ಲಿಷ್ ಮ್ಯಾಜಿಸ್ಟ್ರೇಟ್‌ನ ಮನೆಯಲ್ಲಿ ಒಂದು ನಾಟಕವನ್ನು ಅಭಿನಯಿಸಲು ಪರೇಶಬಾಬುವಿನ ಮನೆಯವರು ಒಪ್ಪಿಕೊಂಡಿರುತ್ತಾರೆ. ಆ ನಾಟಕದಲ್ಲಿ ವಿನಯನನ್ನು ಒಬ್ಬ ನಟನನ್ನಾಗಿ ಅವರು ಸೇರಿಸಿಕೊಂಡಿರುತ್ತಾರೆ.

---

೧೨. ರವೀಂದ್ರನಾಥ ಠಾಕೂರ್ 'ಮನೆ ಜಗತ್ತು', (ಅನು) ಎಚ್.ವಿ.ಸಾವಿತ್ರಮ್ಮ, ಕಾವ್ಯಾಲಯ ಪ್ರಕಾಶನ, ೧೯೭೭, ಪುಟ-೧೬೯.

೧೩. ಅದೇ, ಪುಟ ೨೧೧.

ಆ ಸಂದರ್ಭದಲ್ಲಿ ಪರೇಶಬಾಬುವಿನ ಮೂರನೆಯ ಮಗಳು ಲಲಿತೆಗೂ ಈ ವಿನಯನಿಗೂ ಪ್ರೇಮಾಂಕುರವಾಗಿರುತ್ತದೆ. ಇವರೆಲ್ಲಾ ಆ ಮ್ಯಾಜಿಸ್ಟ್ರೇಟ್‌ನ ಮನೆಗೆ ನಾಟಕವಾಡುವುದಕ್ಕೆಂದು ಬಂದಿರುವ ಸಮಯಕ್ಕೆ ಸರಿಯಾಗಿ ಗೋರಾ ತಾನು ದೇಶಯಾತ್ರೆ ಹೊರಟಿರುವ ವಿಷಯವನ್ನು ತಿಳಿಸಲು ಅಲ್ಲಿಗೆ ಬರುತ್ತಾನೆ. ಆ ಪ್ರಾಂತದ ಕೆಲವು ನೀಲಿ ತೋಟಗಳಲ್ಲಿ ಕೆಲಸ ಮಾಡುತ್ತಿದ್ದ ಪರದೇಶದ ಮಾಲೀಕರಿಗೂ, ದೇಶೀಯ ಕೂಲಿ ಕಾರ್ಮಿಕರಿಗೂ ಮನಸ್ತಾಪಗಳಿರುತ್ತವೆ. ಅದು ಆಗ ಮುಷ್ಕರಕ್ಕೆ ತಿರುಗುತ್ತದೆ. ಅಲ್ಲಿಗೆ ಬಂದ ಗೋರಾ ಕೂಲಿಕಾರರ ಪರ ವಹಿಸಿ ಮಾಲೀಕರಿಗೆ ಅನುಕೂಲ ಮಾಡುತ್ತಾನೆ. ಆಗ ಮ್ಯಾಜಿಸ್ಟ್ರೇಟ್‌ನನ್ನು ಪ್ರತಿಭಟಿಸುತ್ತಾನೆ. ಆ ಸಂದರ್ಭದಲ್ಲಿದ್ದ ವಿದ್ಯಾರ್ಥಿಗಳನ್ನು ಪೊಲೀಸಿನವರು ಹೊಡೆಯುತ್ತಾರೆ. ಆಗ ಗೋರಾ ವಿದ್ಯಾರ್ಥಿಗಳ ಪರ ವಹಿಸಿ ಪೋಲೀಸಿನವರನ್ನು ತಡೆಯುತ್ತಾನೆ. ಆಗ ಪೊಲೀಸಿನವರು ಗೋರಾನನ್ನು ಹಿಡಿದು ಅವನನ್ನು ಅಪರಾಧಿಯನ್ನಾಗಿ ಮಾಡಿ ಕೋರ್ಟ್‌ಗೆ ಒಯ್ಯುತ್ತಾರೆ. ಆಗ ಆ ಇಂಗ್ಲಿಷ್ ಮ್ಯಾಜಿಸ್ಟ್ರೇಟ್ ಗೋರಾನಿಗೆ ಶಿಕ್ಷೆ ವಿಧಿಸಿ ಜೈಲಿಗೆ ಹಾಕಿಸುತ್ತಾನೆ.

ಇಂತಹ ಪ್ರಕ್ಷುಬ್ಧ ಸ್ಥಿತಿಯಲ್ಲಿ ಆ ಮ್ಯಾಜಿಸ್ಟ್ರೇಟ್‌ನ ಮನೆಯಲ್ಲಿ ನಾಟಕ ಆಡುವುದು ಹೇಗೆ ಎಂದು ಪಾತ್ರಧಾರಿಯಾದ ಲಲಿತೆ ಹಿಂದಕ್ಕೆ ಸರಿಯುತ್ತಾಳೆ. ಅಲ್ಲಿಂದ ವಿನಯನೂ ಲಲಿತೆಯೂ ಕಲ್ಕತ್ತೆಗೆ ಬಂದುಬಿಡುತ್ತಾರೆ. ಆದರೆ ಹರಣ ಆಂಗ್ಲಪ್ರೇಮಿ. ಅವನು ಸಹಜವಾಗಿ ಇಂಗ್ಲಿಷ್ ಮ್ಯಾಜಿಸ್ಟ್ರೇಟ್ ಪರ. ಅವನಿಗೆ ಇವರ ವರ್ತನೆ ಅಸಹ್ಯವೆನ್ನಿಸುತ್ತದೆ. ಅಲ್ಲದೆ ಆತ ಬ್ರಾಹ್ಮಣ ಸಮಾಜದಲ್ಲಿ ಶ್ರದ್ಧಾವಂತ. ಪರೇಶಬಾಬು ಬ್ರಾಹ್ಮಣರನ್ನು ತನ್ನ ಮನೆಯೊಳಕ್ಕೆ ಸೇರಿಸಿಕೊಂಡು ಬ್ರಾಹ್ಮಣ ಸಮಾಜದ ಶುದ್ಧತೆಗೆ ಭಂಗ ತರುತ್ತಿದ್ದಾನೆಂದು ಹರಣ ಭಾವಿಸಿ ಅಲ್ಲಿ ಗಲಭೆ ಹಚ್ಚುತ್ತಾನೆ.

ಎಲ್ಲರೂ ಅಲ್ಲಿಂದ ಹೊರಟು ಬಂದಮೇಲೆ ಲಲಿತೆ ಮತ್ತು ಸುಚರಿತೆಯರು ಆನಂದಮಯಿಯ ಮನೆಗೆ ಬರುತ್ತಾರೆ. ಅಲ್ಲಿ ಅವರಿಬ್ಬರೂ ಆನಂದಮಯಿಯನ್ನು ಪರಿಚಯ ಮಾಡಿಕೊಳ್ಳುತ್ತಾರೆ. ಆ ವೇಳೆಗೆ ಸುಚರಿತೆಯ ಚಿಕ್ಕಮ್ಮ ಪರೇಶಬಾಬುವಿನ ಮನೆಗೆ ಬಂದು ತಂಗಿರುತ್ತಾಳೆ. ಈಕೆ ಪೂರ್ವಾಚಾರದ ಬ್ರಾಹ್ಮಣ ಸ್ತ್ರೀ. ಈಕೆಯ ಜೊತೆಯಲ್ಲಿರುತ್ತಾ ಸುಚರಿತ ಬ್ರಾಹ್ಮಣ ಸಮಾಜದ ಪದ್ಧತಿಗಳನ್ನು, ಸಂಪ್ರದಾಯಗಳನ್ನು ಬಿಡದಿದ್ದರೂ ಆಚಾರವಂತರ ವಿಷಯದಲ್ಲಿ ಆಕೆ ಸಹನೆಯಿಂದ, ಗೌರವದಿಂದ ನಡೆದುಕೊಳ್ಳುತ್ತಿರುತ್ತಾಳೆ.

ಪರೇಶಬಾಬು ತಮ್ಮ ಮನೆಯಲ್ಲಿ ಹಿಂದೂ ಆಚಾರವನ್ನು, ಹಿಂದುತ್ವವನ್ನು ಒಪ್ಪಿಕೊಂಡಿದ್ದಾರೆಂದು ಹರಣ ಗಲಾಟೆ ಮಾಡುತ್ತಾನೆ. ಕೊನೆಗೆ ಇದರಿಂದ ಸುಚರಿತೆಯೂ ಆಕೆಯ ಚಿಕ್ಕಮ್ಮನೂ ಅಲ್ಲಿಂದ ಕಾಲ್ತೆಗೆದು ಬೇರೆ ಮನೆಗೆ ಹೋಗುತ್ತಾರೆ. ಲಲಿತೆ ಸುಚರಿತೆಯ ನೆರವಿನಿಂದ ಒಂದು ಪಾಠಶಾಲೆಯನ್ನು ತೆರೆಯಲು ಹೊರಡುತ್ತಾಳೆ. ಸುಚರಿತೆಯ ಮೇಲಿನ ಸಿಟ್ಟಿನಿಂದ ಹರಣ ಶಾಲೆ ಆಗದ ಹಾಗೆ ಮಾಡುತ್ತಾನೆ.

ಇದರಿಂದ ಪರೇಶಬಾಬು ನೊಂದುಕೊಳ್ಳುತ್ತಾನೆ. ತಾನು ಪರೇಶಬಾಬುವಿನ ಮನೆಗೆ ಹೋಗಿ ಬಂದು ಮಾಡುತ್ತಿದ್ದರಿಂದ ಅವರ ಮನೆಯ ಹೆಣ್ಣುಮಕ್ಕಳ ವಿಷಯ ಬೀದಿಗೆ ಬರುವಂತಾಯಿತೆಂದು ವಿಷಾದಿಸುತ್ತಾನೆ. ಕೊನೆಗೆ ಆತ ಸುಲಲಿತೆಯನ್ನು ಮದುವೆ ಮಾಡಿಕೊಳ್ಳಲು ಯೋಚಿಸುತ್ತಾನೆ.

ಈ ವೇಳೆಗೆ ಗೋರಾನಿಗೆ ಸೆರೆಮನೆಯಿಂದ ಬಿಡುಗಡೆಯಾಗಿ ಆತ ಬರುತ್ತಾನೆ. ಅವನಿಗೂ ಸುಚರಿತೆಗೂ ನಡುವೆ ಪರಿಚಯ, ಆಸಕ್ತಿ, ಆಕರ್ಷಣೆ ಬೆಳೆಯುತ್ತದೆ. ವಿನಯ ಲಲಿತೆಯನ್ನು ಮದುವೆಯಾಗುವುದಕ್ಕಾಗಿ 'ಬ್ರಹ್ಮಸಮಾಜ'ಕ್ಕೆ ಸೇರಲು ಅಪೇಕ್ಷೆ ಪಡುತ್ತಾನೆ. ತನಗೆ ಉಪದೇಶ ಮಾಡಬೇಕೆಂದು ಪರೇಶಬಾಬುವನ್ನು ಆತ ಕೋರಿಕೊಳ್ಳುತ್ತಾನೆ. ಆದರೆ ಪರೇಶಬಾಬು ತನ್ನ ಸಂಸಾರದ ಸ್ವಾರ್ಥ ಪ್ರಯೋಜನಕ್ಕಾಗಿ ತಾನು ಉಪದೇಶ ಮಾಡುವುದಿಲ್ಲವೆಂದು ನಿರಾಕರಿಸುತ್ತಾನೆ. ಕೊನೆಗೆ ವಿನಯ ಬ್ರಹ್ಮಸಮಾಜಕ್ಕೆ ಸೇರದೆಯೇ ಲಲಿತೆಯನ್ನು ಮದುವೆ ಮಾಡಿಕೊಳ್ಳಲು ವ್ಯವಸ್ಥೆ ಮಾಡಿಕೊಳ್ಳುತ್ತಾನೆ. ಆದರೆ ವಿನಯ ಮದುವೆಯಲ್ಲಿ 'ವಿಗ್ರಹಾರಾಧನೆ' ಅವಶ್ಯಕವೆಂದು ಹೇಳಿದಾಗ ಲಲಿತೆ ಅದನ್ನು ಧಿಕ್ಕರಿಸುತ್ತಾಳೆ. ಆಮೇಲೆ ವಿನಯ ಆ ಆರಾಧನೆಯನ್ನು ತ್ಯಜಿಸುತ್ತಾನೆ. ಆಮೇಲೆ ಇಬ್ಬರಿಗೂ ಮದುವೆಯಾಗುತ್ತದೆ.

ಸುಚರಿತೆಯ ಚಿಕ್ಕಮ್ಮ ಆಕೆಯನ್ನು ತನ್ನ ದೂರದ ಸಂಬಂಧಿ ಕೈಲಾಸನನ್ನು ಮದುವೆಯಾಗುವಂತೆ ಒತ್ತಾಯಿಸುತ್ತಾಳೆ. ಆದರೆ ಸುಚರಿತೆ ಅದಕ್ಕೆ ಒಪ್ಪುವುದಿಲ್ಲ. ಈ ಮಧ್ಯೆ ಕೃಷ್ಣ ದಯಾಳು ಕಾಯಿಲೆ ಬೀಳುತ್ತಾನೆ. ಗೋರಾನನ್ನು ಕರೆದು ಆತನಿಗೆ ತಾನು ಅದುವರೆಗೂ ಮುಚ್ಚಿಟ್ಟಿದ್ದ ಸತ್ಯವನ್ನು ಹೇಳುತ್ತಾನೆ. "ನಿನ್ನ ತಂದೆ ಐರ್ಲೆಂಡು ದೇಶದವನು. ಆ ರಾತ್ರಿ ನೀನು ಹುಟ್ಟಿದಾಗ ನಿಮ್ಮ ತಾಯಿ ಸತ್ತಳು ನಾವು ಸಾಕಿಕೊಂಡೆವು"[೧೪] ಎಂದನು. ಆಗ ಗೋರಾನಿಗೆ ಇದೆಲ್ಲಾ ತನ್ನ ಜೀವನವೆಲ್ಲಾ ವಿಚಿತ್ರ ಕನಸಿನಂತೆ ತೋರತೊಡಗಿತು. ಈ ಸಂದರ್ಭದ ಅವನ ಮನಸ್ಸಿನ ಸ್ಥಿತಿಯನ್ನು ರವೀಂದ್ರರು ಹೀಗೆ ಚಿತ್ರಿಸುತ್ತಾರೆ: "ಚಿಕ್ಕಂದಿನಿಂದ ಅವನ ಜೀವನದ ತಳಹದಿ ಧೂಳಾಗಿತ್ತು. ಹಿಂದಿನ ದಿನಗಳು ಅಸ್ತಿತ್ವವನ್ನು ಕಳೆದುಕೊಂಡು, ಆತುರದಿಂದ ಅಷ್ಟು ಕಾಲ ನಿರೀಕ್ಷಿಸುತ್ತಿದ್ದ ಉಜ್ವಲ ಭವಿಷ್ಯ ಮಾಯವಾಗಿತ್ತು. ಕಮಲಪತ್ರದ ಮೇಲಿನ ಕ್ಷಣಿಕ ಹಿಮಕಣದಂತೆ ತನ್ನ ಜೀವನವೆಂದು ಅವನಿಗೆ ತೋರಿತು. ಅವನಿಗೆ ತಾಯಿಯಿಲ್ಲ, ತಂದೆಯಿಲ್ಲ, ದೇಶವಿಲ್ಲ, ಜನಾಂಗವಿಲ್ಲ, ಮನೆತನವಿಲ್ಲ, ದೇವರೂ ಇಲ್ಲ. ಮಿಕ್ಕುದು ಒಂದೇ ಒಂದು, ಅಗಾಧವಾದ ಶೂನ್ಯತೆ. ತನ್ನ ಮುಂದಿನ ದಿಕ್ಕಿನ ಅರಿವನ್ನೇ ಕಳೆದುಕೊಂಡು ಆ ಶೂನ್ಯತೆಯ ನಡುವೆ ಗೋರಾ ಮಾತಿಲ್ಲದೆ ಮೌನವಾದನು."[೧೫]

ಹಿಂದೆ ಆಂಗ್ಲರನ್ನು ನೋಡಿದಾಗ ಅವನ ಮೈಯಲ್ಲಿ ರೋಷ ಉಕ್ಕುತ್ತಿತ್ತು. ಈಗ ಅವನ ಮೈಯಲ್ಲಿರುವುದು ಆಂಗ್ಲರ ರಕ್ತವೇ ಎಂದು ತಿಳಿದಾಗ ಆತನಿಗೆ ಅವರೆಲ್ಲಾ ತನ್ನ ಸಮೀಪದ

---

೧೪. ರವೀಂದ್ರನಾಥ ಠಾಕೂರು, ಗೋರಾ (ಅನು) ಹೆಚ್.ವಿ. ಸಾವಿತ್ರಮ್ಮ, ಕಾವ್ಯಾಲಯ ಪ್ರಕಾಶನ, ೧೯೯೭, ಪುಟ ೪೭೨.
೧೫. ಅದೇ, ಪುಟ ೪೭೩.

ಬಂಧುಗಳೇ ಅನ್ನಿಸತೊಡಗಿತು. ಸಿಪಾಯಿಗಳ ದಂಗೆಯ ಕಾಲದಲ್ಲಿ ಒಬ್ಬ ಐರಿಷ್ ಸೈನಿಕನ ಹೆಂಡತಿ ಕೃಷ್ಣ ದಯಾಳು ಮನೆಯಲ್ಲಿ ಅವಿತುಕೊಂಡಿದ್ದಳೆಂದೂ, ತುಂಬಿದ ಗರ್ಭಿಣಿ ಈ ಮಗುವನ್ನು ಹೆತ್ತು ಸತ್ತಳೆಂದೂ, ಮಕ್ಕಳಿಲ್ಲದೆ ಇದ್ದ ಆನಂದಮಯಿ ಈ ಮಗುವನ್ನು ತೆಗೆದುಕೊಂಡು ತನ್ನದೆಂಬಂತೆ ಸಾಕಿದಳೆಂದೂ ಹೇಳುತ್ತಾನೆ.

ಗೋರಾ ಹಿಂದೂಧರ್ಮದ ಪ್ರಚಂಡ ಸೇವಕ. ಆದರೆ ಅವನು ಹುಟ್ಟಿನಿಂದ ಹಿಂದೂ ಅಲ್ಲ, ಆಂಗ್ಲ. ಅವನ ಹುಟ್ಟು ತಿಳಿದ ಮೇಲೆ ಸಂಪ್ರದಾಯ ಬಂಗಾಳದ ಸಮಾಜ ಅವನನ್ನು ಹಿಂದೂ ದೇವಾಲಯಗಳಿಗೆ ಬಿಡುತ್ತದೆಯೇ? ಒಟ್ಟಾರೆ ಗೋರಾ ಕೃಷ್ಣ ದಯಾಳುವಿನ ಮಾತನ್ನು ಕೇಳಿದ ಮೇಲೆ ಯಾವುದೋ ಬಂಧನದಿಂದ ಬಿಡುಗಡೆಯಾದಂತೆ ಸಂಭ್ರಮಿಸುತ್ತಾನೆ. "ಇದುವರೆಗೆ ನನಗೆ ಪೂರ್ವಾಚಾರದ ಜನ ಮಾತ್ರ ಒಪ್ಪುವಂತಿದ್ದರು; ಇಂದಿನಿಂದ ಒಟ್ಟು ಇಂಡಿಯಾ ದೇಶವೇ ನನ್ನದು"[೧೬] ಎನ್ನುವನು. ಈಗ ಆತ ವಿಶ್ವಮಾನವ. ಜಾತಿ, ಧರ್ಮ, ಕಟ್ಟುಕಟ್ಟಳೆಯನ್ನು ಮೀರಿದ ಮಾನವ.

ನಂತರ ಗೋರಾ ಸುಚರಿತೆಯನ್ನು ಕಂಡು, ಆಕೆಗೆ "ನಾನಿನ್ನು ನಿನ್ನ ಗುರುವಲ್ಲ. ನನ್ನ ಕೈ ಹಿಡಿದು ನಿನ್ನ ಗುರೂಪದೇಶ ಬಾಬುವಿನ ಬಳಿಗೆ ಕರೆದೊಯ್ಯಿ"[೧೭] ಎಂದು ಹೇಳಿ ಅವಳ ಕೈ ಹಿಡಿದು ಕೇಳಿಕೊಳ್ಳುವನು. ಮುಂದೆ ಅವರಿಬ್ಬರಿಗೂ ಮದುವೆ ಆಗುವುದು. ಕೊನೆಗೆ ಗೋರಾ ಸಾಯಂಕಾಲ ಮನೆಗೆ ಹಿಂತಿರುಗಿದಾಗ ಆನಂದಮಯಿ ತನ್ನ ಕೋಣೆಯ ಮುಂದಿನ ಪಡಸಾಲೆಯಲ್ಲಿ ಸುಮ್ಮನೆ ಕುಳಿತ್ತಿರುತ್ತಾಳೆ. ಆಕೆಯ ಬಳಿಗೆ ಆತ ಹೋಗಿ ಎದುರಿಗೆ ಕುಳಿತು ಗೋರಾ ತನ್ನ ತಲೆಯನ್ನು ಆಕೆಯ ಪಾದದ ಮೇಲಿಟ್ಟು ನಮಸ್ಕರಿಸುವನು. ಆಗ ಆನಂದಮಯಿ ಅವನನ್ನೆತ್ತಿ ಮುದ್ದಿಸುವಳು. ಆಗ ಗೋರಾ, "ಅಮ್ಮಾ, ನೀನು ನನ್ನ ತಾಯಿ. ಇಷ್ಟುದಿನ ಹುಡುಕಿಕೊಂಡು ಅಲೆದ ತಾಯಿ ಮನೆಯಲ್ಲಿ ನನ್ನ ಕೋಣೆಯಲ್ಲೇ ಇದ್ದಾಳೆ. ನಿನಗೆ ಜಾತಿಯಿಲ್ಲ, ಭೇದವಿಲ್ಲ, ದ್ವೇಷವಿಲ್ಲ. ನೀನೇ ನಮ್ಮ ಯೋಗಕ್ಷೇಮದ ಮೂರ್ತಿ! ನೀನೇ ಇಂಡಿಯಾ"[೧೮] ಎಂದು ಹೇಳುವನು.

ಠಾಕೂರರು ಆನಂದಮಯಿ ಪಾತ್ರದಲ್ಲಿ ಭಾರತಾಂಬೆಯನ್ನು ಕಾಣುತ್ತಾರೆ. ಗೋರಾನ ಕಣ್ಣಿನಲ್ಲಿ ಆಕೆ 'ಇಂಡಿಯಾ' ಧರ್ಮವೂ, ದೇಶವೂ ಉದ್ಧಾರವಾಗಬೇಕಾದರೆ ಏನು ಮಾಡಬೇಕು ಎಂಬುದಕ್ಕೆ ಇದೊಂದು ಮಾದರಿ. ಇಲ್ಲಿನ ಪಾತ್ರಗಳು, ತಮ್ಮ ತಮ್ಮ ಅಭಿಪ್ರಾಯ, ವಾದ, ವಿವಾದಗಳನ್ನು ನೇರವಾಗಿ, ಸ್ವತಂತ್ರವಾಗಿ ಅಭಿವ್ಯಕ್ತಪಡಿಸುತ್ತವೆ. ಕಥೆಯು ಸ್ವಾರಸ್ಯವಾಗಿದ್ದು ಕುತೂಹಲಕರವಾಗಿ ಬೆಳೆಯುತ್ತಾ ಹೋಗುತ್ತದೆ. ಠಾಕೂರರು ಇದರಲ್ಲಿ ಅನೇಕ ವಿಚಾರಗಳನ್ನು

---

೧೬. ರವೀಂದ್ರನಾಥ ಠಾಕೂರು, ಗೋರಾ (ಅನು) ಹೆಚ್.ವಿ. ಸಾವಿತ್ರಮ್ಮ, ಕಾವ್ಯಾಲಯ ಪ್ರಕಾಶನ, ೧೯೯೭, ಪುಟ ೪೭೭.
೧೭. ಅದೇ, ಪುಟ ೪೭೮.
೧೮. ಅದೇ, ಪುಟ ೪೭೯.

ಕುರಿತು ವಿಚಾರ ಮಾಡಿದ್ದಾರೆ. ಆದರೆ ಬ್ರಾಹ್ಮಣನ ಮನೆಯಲ್ಲಿ ವಯಸ್ಸಿಗೆ ಬರುವವರೆಗೂ ಬೆಳೆದ ಗೋರಾನ ಹುಟ್ಟಿನ ಗುಟ್ಟನ್ನು ಕಾದಂಬರಿಯಲ್ಲಿ ಕೊನೆಯವರೆಗೂ ಕಾಯ್ದಿಟ್ಟುಕೊಂಡಿದ್ದು ಕಥೆಯ ಸಂಭಾವ್ಯತೆಗೆ ಸರಿ ಅನ್ನಿಸದು. ಆದರೆ ಗೋರಾನ ಪಾತ್ರವು ಇಂದಿನ ಹಿಂದುತ್ವದ ಪ್ರತಿಪಾದನೆಯ ಚರ್ಚೆಯ ಸಂದರ್ಭದಲ್ಲಿ ವಾಚಕರೆಲ್ಲಾ ಮತ್ತೊಮ್ಮೆ ಓದಲೇಬೇಕಾದ ಪ್ರಸ್ತುತ ಕಾದಂಬರಿಯಾಗಿದೆ. ಇದರಲ್ಲಿ ಠಾಕೂರರ ಸಾರ್ವಕಾಲೀಕವಾದ ಸತ್ಯವೊಂದು ಧ್ವನಿಪೂರ್ಣವಾಗಿ ಆಗಲೇ ಅಭಿವ್ಯಕ್ತವಾಗಿರುವುದು ಇದರ ವಿಶೇಷ.

## ೮.೪. ರವೀಂದ್ರನಾಥ ಠಾಕೂರರ ಪ್ರಬಂಧಗಳು

ರವೀಂದ್ರನಾಥ ಠಾಕೂರರು ಕವಿ, ನಾಟಕಕಾರ, ಕಾದಂಬರಿಕಾರ. ಶಿಕ್ಷಣತಜ್ಞ ಹಾಗೆಯೇ ಉತ್ತಮ ಪ್ರಬಂಧಗಳನ್ನು ಮತ್ತು ಭಾಷಣಗಳನ್ನು ನೀಡಿ ಖ್ಯಾತರಾಗಿದ್ದಾರೆ. ನೋಬೆಲ್ ಬಹುಮಾನ ಪಡೆದ ಭಾರತೀಯ ಕವಿಯಾದ ಅವರು ಪ್ರಪಂಚದ ಹಲವಾರು ದೇಶಗಳಲ್ಲಿ ಹಲವಾರು ವಿಷಯಗಳನ್ನು ಕುರಿತು ಭಾಷಣ ಮಾಡಿದ್ದಾರೆ. ಆ ಭಾಷಣಗಳನ್ನು ಪ್ರಬಂಧ ರೂಪದಲ್ಲಿ ಬರೆದು ಇಂಗ್ಲಿಷ್ ಭಾಷೆಯಲ್ಲಿ ಮಾತ್ರವಲ್ಲದೆ ದೇಶಿ ಭಾಷೆಗಳಲ್ಲಿಯೂ ಅನೇಕ ಪತ್ರಿಕೆಗಳಲ್ಲಿ, ನಿಯತಕಾಲಿಕೆಗಳಲ್ಲಿ ಪ್ರಕಟವಾಗಿವೆ; ನಂತರ ಅವುಗಳು ಪುಸ್ತಕ ರೂಪದಲ್ಲಿಯೂ ಬಂದಿವೆ. ಇಂತಹ ಹತ್ತಾರು ಪ್ರಬಂಧಗಳಲ್ಲಿ, ಲೇಖನಗಳಲ್ಲಿ ಮತ್ತು ಭಾಷಣಗಳಲ್ಲಿ ಆಯ್ದು ಕನ್ನಡಕ್ಕೆ ಅನುವಾದಿಸಿದ ಮುಖ್ಯ ಎರಡು ಗ್ರಂಥಗಳು ನಮ್ಮ ಗಮನಕ್ಕೆ ಬರುತ್ತವೆ. (೧) ನಿಬಂಧಮಾಲಾ – ಭಾಗ ೧, ಇದನ್ನು ಕನ್ನಡಕ್ಕೆ ಅನುವಾದಿಸಿದವರು ಸ್ವಾಮಿ ಶಂಕರಾನಂದ ಸರಸ್ವತಿ ಅವರು, ಇದನ್ನು ಕೇಂದ್ರ ಸಾಹಿತ್ಯ ಅಕಾಡೆಮಿಯು ೧೯೬೬ರಲ್ಲಿ ಪ್ರಕಟಿಸಿದೆ. (೨) ನಿಬಂಧಮಾಲಾ – ಭಾಗ ೨, ಇದನ್ನು ಎ.ಆರ್. ಕೃಷ್ಣಶಾಸ್ತ್ರಿಗಳು ಕನ್ನಡಕ್ಕೆ ಅನುವಾದ ಮಾಡಿ ಪ್ರಕಟಿಸಿದ್ದಾರೆ. 'ನಿಬಂಧಮಾಲಾ–ಭಾಗ ೧ರಲ್ಲಿ ಕಾಲಕಾಲಕ್ಕೆ ಠಾಕೂರರು 'ಮಹಾಪುರುಷರ ಚರಿತೆ', 'ಇತಿಹಾಸ', 'ಧರ್ಮ', 'ಶಿಕ್ಷಣ', 'ಸಮಾಜ', 'ರಾಷ್ಟ್ರ ನೀತಿ', 'ಗ್ರಾಮ ಸುಧಾರಣೆ' ಮತ್ತು 'ಅರ್ಥನೀತಿ' ಎಂಬ ಆರೇಳು ಅಧ್ಯಾಯಗಳಲ್ಲಿ ಮಂಡಿಸಿದ ವಿಭಿನ್ನವಾದ ಚಿಂತನೆಗಳು ಅಡಗಿವೆ. ಈ ಪ್ರಧಾನ ಅಧ್ಯಾಯಗಳಲ್ಲಿ ಬರುವ ಒಳ ಅಧ್ಯಾಯಗಳ ವಿಷಯಗಳನ್ನೆಲ್ಲಾ ಲೆಕ್ಕ ಹಾಕಿದರೆ ಮೂವತ್ತಾರು ವಿಷಯಗಳ ಮೇಲೆ ಮಾತನಾಡಿದ ಮಹತ್ವದ ಪ್ರಬಂಧಗಳು ಇಲ್ಲಿವೆ. ಬುದ್ಧ, ರಾಜಾರಾಮ ಮೋಹನರಾಯ, ವಿದ್ಯಾಸಾಗರ, ಗಾಂಧೀಜಿ ಅವರ ಜೀವನ ಚರಿತ್ರೆ ಮತ್ತು ಅವರ ವಿಚಾರಧಾರೆಗಳನ್ನು ಕುರಿತು 'ಮಹಾಪುರುಷರ ಚರಿತ್ರೆ' ಎಂಬ ವಿಭಾಗದಲ್ಲಿ ಬಹು ಸೂಕ್ಷ್ಮವಾಗಿ ಮತ್ತು ಪರಿಣಾಮಕಾರಿಯಾಗಿ ವಿಚಾರಗಳನ್ನು ಕ್ರೋಡೀಕರಿಸಿದ್ದಾರೆ. ಈ ಕೃತಿಗೆ ಮುನ್ನುಡಿ ಬರೆದ ವಿದ್ವಾಂಸರಾದ ವಿ. ಸೀತಾರಾಮಯ್ಯನವರು ಹೀಗೆ ಹೇಳುತ್ತಾರೆ : ೬೦–೬೫ ವರ್ಷಗಳ ಅವಧಿಯಲ್ಲಿ ಬಂಗಾಳಿ ಗದ್ಯವೂ ಅವರ ಗದ್ಯಶೈಲಿಯೂ ಹೇಗೆ ಮಾರ್ಪಟ್ಟವು ಎಂಬ ಚಿತ್ರಣವನ್ನು ರವೀಂದ್ರರ ಈ ३೬ ಲೇಖನಗಳಲ್ಲಿಯೂ ಕಾಣಬಹುದಾಗಿದೆ. ಇಲ್ಲಿನ ಅತಿ ಮುಂಚಿನ ಲೇಖನ ರಾಜಾಮೋಹನರಾಯರನ್ನು ಕುರಿತ ೧೮೮೫ರಲ್ಲಿ ಬರೆದ ಲೇಖನವಾದರೆ,

ಅತಿ ಈಚೆಗೆ ರವೀಂದ್ರರು ಬರೆದ 'ಸಭ್ಯಾತಾರ ಸಂಕಟ' ಎಂಬ ಲೇಖನವು ೧೯೪೧ನೆಯ ವರ್ಷಕ್ಕೆ ಸೇರಿದ್ದಾಗಿದೆ'[೯] ಎಂದಿದ್ದಾರೆ. ಹೀಗೆ ಚಾರಿತ್ರಿಕವಾಗಿ ರವೀಂದ್ರರ ಗದ್ಯಶೈಲಿಯ ವೈಶಿಷ್ಟ್ಯತೆಗೆ ಮಾತ್ರವಲ್ಲದೆ ಬಂಗಾಳಿ ಸಾಹಿತ್ಯದ ಗದ್ಯದ ವಿಕಾಸಕ್ಕೆ ಇದು ಸಾಕ್ಷಿಯಾಗಿದೆ.

ಎ.ಆರ್. ಕೃಷ್ಣಶಾಸ್ತ್ರಿಗಳು (೧೮೯೦-೧೯೬೮) ತಮ್ಮ ಕುಟುಂಬದಲ್ಲಿ ನಡೆದ ಸಾವು ನೋವುಗಳಿಂದ ತುಂಬಾ ನೊಂದವರು. ಬೋಧನೆ, ವಿಮರ್ಶೆ, ಸಂಪಾದನೆ, ಶಾಸ್ತ್ರಸಾಹಿತ್ಯ, ಅನುವಾದ ಕ್ಷೇತ್ರಗಳಲ್ಲಿ ಉತ್ತಮ ಕೆಲಸ ಮಾಡಿದವರು. ಅವರ 'ಶ್ರೀಪತಿಯ ಕಥೆಗಳು' ಅವರ ವೈಯಕ್ತಿಕ ಬದುಕಿನ ಯಾತನೆಗಳನ್ನು ಮನೋಜ್ಞವಾಗಿ ಚಿತ್ರಿಸಿವೆ. ಅವರು ಆರಂಭದಲ್ಲಿ ಕನ್ನಡದ ಕಟ್ಟಾಳು. ಅವರು ನಿವೃತ್ತಿಯಾಗಿ ಎಪ್ಪತ್ತೈದನೆಯ ವಯಸ್ಸಿನಲ್ಲಿಯೂ ಠಾಕೂರರ 'ನಿಬಂಧ ಮಾಲಾ' ಪ್ರಬಂಧಗಳನ್ನು ಅನುವಾದಿಸಿದರು. ಅವರ 'ವಚನ ಭಾರತ', 'ಭಾಸ', 'ಧರ್ಮಾಮೃತ', 'ಸಂಸ್ಕೃತ ನಾಟಕ', 'ಕಥಾಮೃತ', 'ಬಂಕಿಮಚಂದ್ರ' ಗ್ರಂಥಗಳು ಅವರ ವಿದ್ವತ್ ಪಾಂಡಿತ್ಯಕ್ಕೆ ಸಾಕ್ಷಿಯಾಗಿವೆ. 'ಬಂಕಿಮಚಂದ್ರ' (೧೯೬೦) ಅವರಿಗೆ ಕೇಂದ್ರ ಸಾಹಿತ್ಯ ಅಕಾಡೆಮಿ ಬಹುಮಾನವನ್ನು (೧೯೬೧) ತಂದುಕೊಟ್ಟ ಕೃತಿ. ಇದು ಅವರ ಪ್ರತಿಭೆ, ಪಾಂಡಿತ್ಯಕ್ಕೆ ದ್ಯೋತಕವಾಗಿದೆ. ಕನ್ನಡಕ್ಕೆ ಇನ್ನೂ ಬಂಗಾಳಿ ಸಾಹಿತ್ಯ ಪರಿಚಯವಿಲ್ಲದ ಕಾಲದಲ್ಲಿ (ಸ್ವಲ್ಪ ಮಟ್ಟಿಗೆ ಬಿ. ವೆಂಕಟಾಚಾರ್ಯರ ಅನುವಾದಗಳ ಮೂಲಕ ಇದು ಆರಂಭವಾಗಿತ್ತು) ಕನ್ನಡಕ್ಕೆ ಅದರ ಪರಿಚಯವನ್ನು ತಮ್ಮ 'ಬಂಕಿಮಚಂದ್ರ' ಕೃತಿಯ ಮೂಲಕ ಮಾಡಿಕೊಟ್ಟು ತೌಲನಿಕ ಅಧ್ಯಯನಕ್ಕೆ ಪ್ರವೇಶವನ್ನು ಮಾಡಿದರು. ಬಂಗಾಳದ ಬಂಕಿಮಚಂದ್ರರ ಮೂಲ ಬಂಗಾಳಿ ಭಾಷೆಯ ಕೃತಿಗಳನ್ನೆಲ್ಲಾ ಮೂಲದಲ್ಲೇ ಅಧ್ಯಯನ ಮಾಡಿ ಎ.ಆರ್.ಕೃ. ಅವರು ಈ ಗ್ರಂಥವನ್ನು ಕನ್ನಡಕ್ಕೆ ರಚಿಸಿಕೊಟ್ಟರು. ಬಂಗಾಳಿ ಸಾಹಿತ್ಯದ ಸಂಕ್ಷಿಪ್ತ ಚರಿತ್ರೆ, ಬಂಕಿಮಚಂದ್ರರ ಜೀವನಚರಿತ್ರೆ, ಅವರ ಕವಿತೆಗಳು, ಅವರ ಮೊದಲು ಬರೆದ ಕಾದಂಬರಿ ವಿಷವೃಕ್ಷ, ಕೃಷ್ಣಕಾಂತನ ಉಯಿಲು, ರಜನೀ, ಮೂರು ಕಿರು ಕಾದಂಬರಿಗಳು, ಐತಿಹಾಸಿಕ ಕಾದಂಬರಿಗಳ ಪೀಠಿಕೆ, ದುರ್ಗೇಶನಂದಿನಿ, ಕಪಾಲಕುಂಡಲಾ, ಮೃಣಾಲಿನಿ, ಚಂದ್ರಶೇಖರ, ರಾಜಸಿಂಹ ಆನಂದಮಠ, ದೇವೀ ಚೌಧುರಾಣಿ, ಸೀತಾರಾಮ, ವಂಗದರ್ಶನ ಪ್ರಚಾರ ಹಾಗೂ ಅವರ ಕೆಲವು ವಿಶಿಷ್ಟ ವಿಚಾರಗಳನ್ನೆಲ್ಲಾ ಕುರಿತು ಎ.ಆರ್.ಕೃ. ಅವರು ಸುಮಾರು ಮೂವತ್ತು ಅಧ್ಯಾಯಗಳಲ್ಲಿ ಬರೆದ ಒಂದು ಬೃಹತ್ ಗ್ರಂಥ ಇದಾಗಿದೆ. ಕುವೆಂಪು ಅವರು ಹೇಳುವ ಹಾಗೆ, ಇದುವರೆಗೆ ಕನ್ನಡದಲ್ಲಿ ಬಂದ 'ನಾಡೋಜ ಪಂಪ' ಕೃತಿಯನ್ನು ಬಿಟ್ಟರೆ ಮತ್ತೊಂದು ಉತ್ತಮಗ್ರಂಥ 'ಬಂಕಿಮ ಚಂದ್ರ.'

ಬಂಕಿಮಚಂದ್ರರ ಜೀವನ, ಸಾಧನೆ, ಸಾಹಿತ್ಯಗಳನ್ನು ವಿಮರ್ಶಿಸುವಲ್ಲಿ ತೋರಿಸುವ ಶಾಸ್ತ್ರಿಗಳ ಶ್ರಮ, ಶ್ರದ್ಧೆ, ಪಾಂಡಿತ್ಯಗಳು ಮಹತ್ವಪೂರ್ಣವಾಗಿವೆ. ಇದೊಂದು 'ಮಹಾವಿಮರ್ಶಾ ಕೃತಿ' ಎಂದು ಕುವೆಂಪು ಅವರು ಈ ಗ್ರಂಥದ ಮುನ್ನುಡಿಯಲ್ಲಿ ಹೇಳಿರುವ ಮಾತು ಸಮಂಜಸವಾಗಿಯೇ

---

೧೯. ರವೀಂದ್ರನಾಥ ಠಾಕೂರ್, ನಿಬಂಧಮಾಲಾ, ಭಾಗ ೧, ಮುನ್ನುಡಿ ವಿ. ಸೀತಾರಾಮಯ್ಯ, ಪುಟ xiii

ಇದೆ. ಬಂಕಿಮಚಂದ್ರರ ಜೀವನದ ಎಳೆ ಎಳೆಯನ್ನೂ ಚಿತ್ರಿಸಿರುವ ರೀತಿಯಲ್ಲಿ, ಕಾದಂಬರಿಗಳ ಪಾತ್ರಗಳನ್ನು ವಿಶ್ಲೇಷಿಸಿರುವ ಕ್ರಮದಲ್ಲಿ ಕೃಷ್ಣಶಾಸ್ತ್ರಿಗಳ ವಿಮರ್ಶನ ಪ್ರಜ್ಞೆ ಎದ್ದುಕಾಣುತ್ತದೆ.

ಕನ್ನಡಕ್ಕೆ ಹೀಗೆ ಬಂಕಿಮಚಂದ್ರರ ಸಾಹಿತ್ಯವನ್ನು ಸಮಗ್ರವಾಗಿ ಪರಿಚಯಿಸಿದ ಕೃಷ್ಣಶಾಸ್ತ್ರಿಗಳು ರವೀಂದ್ರನಾಥ ಠಾಕೂರರ ಪ್ರಬಂಧಗಳನ್ನು, ಲೇಖನಗಳನ್ನು, ಭಾಷಣಗಳನ್ನು ಕನ್ನಡಕ್ಕೆ ತಮ್ಮ 'ನಿಬಂಧಮಾಲಾ ಭಾಗ ೨'ರಲ್ಲಿ ತಮ್ಮ ಕೊನೆಯ ದಿನಗಳಲ್ಲಿ ಸೊಗಸಾಗಿ ಅನುವಾದಿಸಿಕೊಟ್ಟಿದ್ದಾರೆ. ಹಾಗೆಯೇ 'ನಿಬಂಧಮಾಲಾ ೨'ರಲ್ಲಿರುವ ಬರಹಗಳು ಕೂಡ ಆರಂಭದಲ್ಲಿ ಕನ್ನಡದ ಪರಿಸರದಲ್ಲಿ ಶಿಕ್ಷಣ, ಧರ್ಮ, ಸಾಮಾಜಿಕತೆ, ಸಾಹಿತ್ಯ, ಕಲೆ ಇತ್ಯಾದಿಗಳ ಬಗ್ಗೆ ಹೊಸ ಪ್ರಜ್ಞೆಯಿಂದ ಆಲೋಚಿಸುವಂತೆ ಮಾಡಿದ್ದು ಐತಿಹಾಸಿಕವಾಗಿಯೂ ಸತ್ಯ. ರವೀಂದ್ರರ ಕೆಲವು ಬರಹಗಳ ವಸ್ತು, ಮನೋಧರ್ಮ, ತಾತ್ವಿಕತೆ ಮತ್ತು ಅವುಗಳ ದಾರ್ಶನಿಕತೆಯ ಬಗ್ಗೆ ಇಲ್ಲಿ ಪರಿಶೀಲಿಸಬಹುದಾಗಿದೆ.

ರವೀಂದ್ರರು ಉತ್ತಮ ಚಿಂತಕರು. ತಮ್ಮ ಭಾಷಣಗಳನ್ನು ಬರೆದು ಓದುತ್ತಿದ್ದರಂತೆ. ಅವರು ಒಬ್ಬ ಉತ್ತಮ ಭಾವಗೀತಕಾರ. ಕುವೆಂಪು ಅವರು ಹೇಳುವ ಹಾಗೆ ಅವರು 'ಮಹಾಕವಿ' ಅಲ್ಲ. ರವೀಂದ್ರರ 'ಗೀತಾಂಜಲಿ' ಒಂದು ಭಾವಗೀತೆಗಳ ಗುಚ್ಛ, ಹಾಗೆಯೇ ದ.ರಾ. ಬೇಂದ್ರೆಯವರ 'ನಾಕುತಂತಿ' ಕೃತಿ ಕೂಡ ಒಂದು ಭಾವಗೀತೆಗಳ ಗುಚ್ಛ. ಬೇಂದ್ರೆ ಮಹಾಕವಿ ಅಲ್ಲ. ಅವರೊಬ್ಬ ಅತ್ಯುತ್ತಮ ಭಾವಗೀತಕಾರ. ಬೇಂದ್ರೆಯವರಿಗೆ ಬಹುಶಃ ಈ ಕಾರಣದಿಂದ ರವೀಂದ್ರರ ಸಾಹಿತ್ಯ ಬಹು ಹತ್ತಿರಕ್ಕೆ ಬಂದಿರಬೇಕು. ರವೀಂದ್ರರದಾಗಲೀ, ಬೇಂದ್ರೆಯವರದಾಗಲೀ ಯಾವ ಮಹಾಕಾವ್ಯವೂ ಇಲ್ಲ. ಆದರೆ ಅವರು ಬರೆದ ಖಂಡಕಾವ್ಯಗಳಿವೆ.

ರವೀಂದ್ರರು ೧೯೧೨ರಲ್ಲಿ ಬರೆದು ಪ್ರಕಟಿಸಿದ 'ಆಧುನಿಕ ಇತಿಹಾಸ' ಎಂಬ ಬರಹ ಭರತ ವರ್ಷದ ಇತಿಹಾಸದಲ್ಲಿ ನಡೆದ ಆರ್ಯರ ಮತ್ತು ಆದಿವಾಸಿಗಳ ಮಧ್ಯದ ಸಂಘರ್ಷವನ್ನು ವಿವರಿಸುತ್ತದೆ. ಆರ್ಯರು ಆದಿವಾಸಿಗಳನ್ನು ಕೊಲೆ ಮಾಡಿ ಮುಗಿಸಲು ನಡೆಸಿದ ಯಾಗ, ಯಜ್ಞಗಳನ್ನು ಈ ಬರಹ ವಿವರಿಸುತ್ತದೆ. ಆಮೇಲೆ ಆರ್ಯರು ಅನಿವಾರ್ಯವಾಗಿ ತಮ್ಮ ಬ್ರಾಹ್ಮಣಿಕೆಯ ಸಂಪ್ರದಾಯಗಳನ್ನು ಉಳಿಸಿಕೊಂಡು ಆದಿವಾಸಿಗಳ ಜೊತೆ ಸಹಿಷ್ಣುತೆಯಿಂದ ಬಾಳಲು ಯತ್ನಿಸಿದರು ಎಂದು ಊಹೆ ಮಾಡುತ್ತಾರೆ. ಇತಿಹಾಸದ ಕಾಲಘಟ್ಟಗಳಲ್ಲಿ ಭರತವರ್ಷವು ಹೊಸ ಹೊಸ ವಿಚಾರಗಳನ್ನು, ಪಂಥಗಳನ್ನು ಕಂಡುಕೊಂಡಿದೆ ಎನ್ನುವುದು ರವೀಂದ್ರರ ನಂಬಿಕೆ. ಉತ್ತಮ ನಾಯಕರು ಜನ್ಮ ತಾಳಿ ಸತ್ಯವಾದದ್ದನ್ನು, ಸುಂದರವಾದುದನ್ನು ರಕ್ಷಿಸಬೇಕು ಎಂದು ಹೇಳುವ ಅದರ ಸಂದೇಶ ಎಲ್ಲಾ ಕಾಲಕ್ಕೂ ಒಪ್ಪತಕ್ಕದ್ದೇ ಆಗಿದೆ. ಹೀಗೆ ಈ ಬರಹವು ಅನೇಕ ವಿಚಾರಗಳಲ್ಲಿ ಚಿಂತನೆಗೆ ಕಾರಣವಾಗುತ್ತದೆ.

ಕೃಷ್ಣ ಆರ್. ಕೃಪಲಾನಿ ಅವರು 'ರವೀಂದ್ರನಾಥ ಠಾಕೂರರ' ಜೀವನ ಚರಿತ್ರೆಯನ್ನು ಇಂಗ್ಲಿಷಿನಲ್ಲಿ ಬರೆಯುತ್ತಾ ಅದರ ಪುಟ ೧೬೧ರಲ್ಲಿ, ೧೯೬೨ರಲ್ಲಿ, ಠಾಕೂರರು ಒಮ್ಮೆ ಬರೆದದ್ದನ್ನು

ಹೀಗೆ ದಾಖಲಿಸುತ್ತಾರೆ : "ನಮ್ಮದು ಮೂಲಭೂತ ಸಂಕಲ್ಪಶೀಲತೆಯೇ ಇಲ್ಲದ, ದೇವರು ಕೈ ಬಿಟ್ಟಿರುವ ದುರದೃಷ್ಟವಂತ ದೇಶ. ಇಲ್ಲಿ ಆಲೋಚಿಸುವ, ಭಾವಿಸುವ ಮತ್ತು ಸಂಕಲ್ಪಿಸುವ ಶಕ್ತಿಗಳು ಕ್ಷಯಗ್ರಸ್ತವಾಗಿವೆ. ಪೂರ್ಣವಾಗಿ ಮತ್ತು ನಿಜವಾಗಿ ಬದುಕುವ ಸಾಹಸದ, ದೊಡ್ಡ ಹೋರಾಟದ ಅರಿವೇ ಇಲ್ಲ. ಸ್ತ್ರೀ ಪುರುಷರೆಲ್ಲರೂ ಬರೀ ತಿನ್ನುವ, ಕುಡಿಯುವ, ಯಾಂತ್ರಿಕವಾಗಿ ಕೆಲಸ ಮಾಡುವ, ಸಿಗರೇಟು, ಬೀಡಿ ಸೇದುವ, ನಿದ್ದೆ ಹೊಡೆಯುವ ಹಾಗೂ ಕೊನೆಯಿಲ್ಲದೇ ಕಿಚಗುಟ್ಟುವ ನೆರಳುಗಳಂತೆ ಸುಳಿದಾಡುತ್ತಿದ್ದಾರೆ. ನಮ್ಮ ವಿಚಾರಶೈಲಿ ಬಾಲಿಶ; ಭಾವನೆಗಳು ಸುಲಭವಾಗಿ ಭಾವಾತಿರೇಕದ ಕೆಳಮಟ್ಟಕ್ಕೆ ಇಳಿಯುತ್ತವೆ. ಪ್ರೌಢ ಹೋರಾಟದ ಮತ್ತು ತುಂಬು ಜೀವನದ ಅಭಾವವಿದೆ" (ಅನು: ಪಿ. ಶ್ರೀನಿವಾಸರಾವ್, ೧೯೬೭).

ಭಾರತೀಯರ ಜೀವನ ಶೈಲಿಯ ಬಗ್ಗೆ ಹೀಗೆ ಪ್ರಸ್ತಾಪಿಸುವ ಠಾಕೂರರ ಈ ಮಾತುಗಳಲ್ಲಿ ಸ್ವಲ್ಪಮಟ್ಟಿನ ಉತ್ಪ್ರೇಕ್ಷೆಯಿದ್ದರೂ ಅದರಲ್ಲಿರುವ ಸತ್ಯಾಂಶವನ್ನು ನಿರಾಕರಿಸಲಾಗದು. ಭಾರತೀಯ ಸಂಸ್ಕೃತಿ ಮತ್ತು ಅದರ ವಿಭಿನ್ನ ವ್ಯಕ್ತರೂಪಗಳಲ್ಲಿ ಆಸಕ್ತಿಯುಳ್ಳ ಯಾರೇ ಆದರೂ ಭಾರತೀಯರ ಜೀವನ ಪರಿಸರದಲ್ಲಿ ಯಾವುದು ಇಂತಹ ಅರ್ಥಪೂರ್ಣ ಬದಲಾವಣೆಯನ್ನುಂಟು ಮಾಡಿತು ಎಂಬ ಪ್ರಶ್ನೆಯನ್ನು ಇಂದು ಕುರಿತು ಚಿಂತಿಸಬೇಕಾಗುತ್ತದೆ. ರವೀಂದ್ರನಾಥರನ್ನು ಕೆರಳಿಸಿದ ಈ ಭಾರತೀಯ ಜೀವನ ಸ್ಥಿತಿಯನ್ನು ಭಾರತದಲ್ಲಿ ಬ್ರಿಟಿಷರ ಆಗಮನ, ಆಡಳಿತ, ಅಧಿಕಾರದ ವಿಸ್ತರಣದಿಂದ ಉಂಟಾದ ಸಾಮಾಜಿಕ – ರಾಜಕೀಯ ಬದಲಾವಣೆಗೆ ಸಂಬಂಧಿಸಿದುದ್ದಾಗಿದೆ. ಈ ಹಿನ್ನೆಲೆಯಲ್ಲಿ ರವೀಂದ್ರನಾಥರ ಬರಹಗಳನ್ನು ನೋಡಿದಾಗ ಅವರು ಆಧುನಿಕತೆಯ ಪರವಾಗಿದ್ದರೋ ಅಥವಾ ಸನಾತನದ ಪರವಾಗಿದ್ದರೋ ಎಂಬ ಶಂಕೆ ಬರುವುದು ಸಹಜ. ಆದರೆ ಬದುಕಿನ ಇಂತಹ ವೈರುಧ್ಯಗಳನ್ನು, ವೈದೃಶ್ಯಗಳನ್ನು ಗ್ರಹಿಸುವುದೇ ಮಹಾನ್ ಲೇಖಕರ ಮನೋಧರ್ಮವಾಗುವುದರಿಂದ ಅವರ ಈ ವೈರುಧ್ಯಗಳನ್ನು ಅವರ ಬರಹಗಳ ಹಿನ್ನೆಲೆಯಲ್ಲಿಯೇ ಪರಿಭಾವಿಸಬೇಕಾಗುತ್ತದೆ.

ಇತಿಹಾಸದ ಮುಂಬರಿವಿನಲ್ಲಿ ಹೊಸದಾಗಿ ತಲೆ ಎತ್ತುವ ಸಂದರ್ಭಗಳಿಗೆ ತಕ್ಕ ಹೊಸ ಹೊಸ ವಿಚಾರಗಳನ್ನು ಅದಕ್ಕೆ ಪರಿಹಾರಗಳನ್ನು ಭರತವರ್ಷ ಕಂಡುಕೊಳ್ಳಬಲ್ಲದು ಎಂಬುದು ರವೀಂದ್ರರ ನಂಬಿಕೆ. ಲೋಕದ ಕಲ್ಯಾಣಕ್ಕಾಗಿ ಪೂರ್ವ – ಪಶ್ಚಿಮ ದೇಶಗಳಲ್ಲಿ ಮೈತ್ರಿ ಭಾವನೆಯನ್ನು ಬೆಳೆಸುವುದು ಅವಶ್ಯಕವೆನ್ನುತ್ತಾರೆ. ಹೊಸ ವಿಜ್ಞಾನದ ಯುಗ ಬಂದಿದೆ, ಹೊಸ ಅಧ್ಯಾತ್ಮದ ಯುಗ ಬಂದಿದೆ. ಅದಕ್ಕೆ ಹೊಸ ದೃಷ್ಟಿ ಬೇಕಾಗಿದೆ. ಒಂದೊಂದು ರಾಷ್ಟ್ರವೂ ಒಟ್ಟು ಲೋಕದ ಕಲ್ಯಾಣವನ್ನು ಕಾಯಲು ಉತ್ಸುಕವಾಗಬೇಕೆನ್ನುತ್ತಾರೆ. ಮನುಷ್ಯ ಮನುಷ್ಯರ ನಡುವೆ ಉಚ್ಚ, ನೀಚದ ಭೇದ ಬೇಡ! ಇತಿಹಾಸದ ಉದ್ದಕ್ಕೂ ಬೆನ್ನ ಬಿಡದೆ ಬೆಂಬತ್ತಿರುವ ಬಡತನವನ್ನು ನಿರ್ಮೂಲನ ಮಾಡುವುದು ಹೇಗೆ ಎಂದು ಈ ಕವಿ ಯೋಚಿಸಿದ್ದಾರೆ. ಅಮೆರಿಕ, ಜಪಾನ್, ರಷ್ಯಾ, ಇಟಲಿ ಹೀಗೆ ಅನೇಕ ದೇಶಗಳಲ್ಲಿ ರವೀಂದ್ರರು ನೀಡಿದ ತಮ್ಮ ಅನೇಕ ಭಾಷಣಗಳಲ್ಲಿ ಪ್ರಪಂಚದ ಜೀವನಕ್ರಮವನ್ನು ಕುರಿತು ಮಾತನಾಡಿದ್ದಾರೆ.

ರವೀಂದ್ರನಾಥರು ತಮ್ಮ ಬರಹಗಳಲ್ಲಿ, ಭಾಷಣಗಳಲ್ಲಿ, ಪ್ರಬಂಧಗಳಲ್ಲಿ ರಾಷ್ಟ್ರೀಯತೆಯನ್ನು ದುಷ್ಟ ಮಾಡಿದ ಮನೋಧರ್ಮವೇ ರಾಷ್ಟ್ರಗಳನ್ನು ನಿರ್ಮಾಣ ಮಾಡಿದ 'ಪ್ರಪಂಚ ಸಂಸ್ಥೆ'ಯನ್ನೂ ದುಷ್ಟ ಮಾಡಿ ಅದು ಲೋಕಶಾಂತಿಯನ್ನು ಕಾಯಲಾರದಂತೆ ಮಾಡುವುದೆಂದು ಪ್ರತಿಪಾದಿಸುತ್ತಾರೆ. ೧೯೩೧ರಲ್ಲಿ ಲಂಡನ್ ನಗರದಲ್ಲಿ ಇವರಿಗೆ ನೀಡಿದ ಸತ್ಕಾರ ಕೂಟದಲ್ಲಿ ಈ ತಿಳುವಳಿಕೆಯ ಕಾರಣಗಳನ್ನು ಕುರಿತು ಮಾತನಾಡುತ್ತಾರೆ.

ರವೀಂದ್ರನಾಥರು ಭಾರತ ಜೀವನದಿಂದ ಲೋಕಜೀವನಕ್ಕೆ ಕಾಲಿಟ್ಟ ರೀತಿಯಲ್ಲಿ ಲೋಕಜೀವನದಿಂದ ತತ್ವಕ್ಕೆ ಧರ್ಮಕ್ಕೆ ಹೆಜ್ಜೆ ಇಡುತ್ತಾರೆ. ಅವರು ಜೀವನ ಎನ್ನುವುದು ಅವಿಭಾಜ್ಯ ಏಕ ವಸ್ತು, ಅದನ್ನು ಅಸಂಪೃಕ್ತ ಚತುಷ್ಕಗಳಾಗಿ ಭಾಗಿಸಿಲು ಬರುವುದಿಲ್ಲ. ಆದ್ದರಿಂದ ರಾಜಕೀಯವು ಮನುಕುಲದಿಂದ ಅತ್ಯುನ್ನತ ಕ್ಷೇಮವನ್ನು ಸಾಧಿಸಬೇಕಾದರೆ ಅದು ಅಧ್ಯಾತ್ಮದಿಂದ ಅವಿಷ್ಟವಾಗಬೇಕು ಎಂದು ಪ್ರತಿಪಾದಿಸುತ್ತಾರೆ. ಅವರು ಪಾಶ್ಚಾತ್ಯ ದೇಶಗಳಲ್ಲಿ ನೀಡಿದ ಉಪನ್ಯಾಸದ ಬರಹಗಳಲ್ಲಿ ಭಾರತೀಯ ತತ್ವವಿಚಾರವನ್ನು ಕುರಿತು ಮಾತನಾಡುತ್ತಾರೆ. ಈ ಉಪನ್ಯಾಸಗಳಲ್ಲಿ 'ಜೀವ ವಿಶ್ವಗಳ ಸಂಬಂಧ', 'ಆತ್ಮವಿಜ್ಞಾನ', 'ಕೆಟ್ಟುದೆಂಬ ಸಮಸ್ಯೆಗಳ ವಿಚಾರ', 'ಮಾಯೆಯ ವಿಚಾರ', 'ಭಕ್ತಿಯೋಗ', 'ಕರ್ಮಯೋಗ', 'ಸೌಂದರ್ಯಯೋಗ' ವಿಷಯಗಳನ್ನು ಕುರಿತು ಮಾತನಾಡಿದ್ದಾರೆ. ಅಲ್ಲಿ ಇಂದ್ರಿಯಗಳಿಗೂ ಭೌತಶಾಸ್ತ್ರಕ್ಕೂ ಇರುವ ಅಸಂಬದ್ಧತೆಯ ಗ್ರಹಿಕೆಗಳ ಬಗ್ಗೆ ಹೇಳಿದ್ದಾರೆ. ಭಾರತೀಯ ತತ್ವಶಾಸ್ತ್ರದಿಂದ, ಪಾಶ್ಚಾತ್ಯ ಕವಿಗಳ ಕಾವ್ಯಗಳಿಂದ ಅನೇಕ ದೃಷ್ಟಾಂತಗಳನ್ನು ಕೊಟ್ಟು ಈ ಪರಿಕಲ್ಪನೆಗಳನ್ನೆಲ್ಲಾ ತಮ್ಮ ಈ ಎಲ್ಲಾ ಉಪನ್ಯಾಸಗಳಲ್ಲಿ ರವೀಂದ್ರನಾಥರು ವಿವರಿಸಿದ್ದಾರೆ.

ರವೀಂದ್ರನಾಥರು 'ಕಲೆ'ಯನ್ನು ಕುರಿತು ಬರೆದ ಲೇಖನ ತುಂಬಾ ಪ್ರಸಿದ್ಧವಾದುದು. 'ಕಲೆಯೆಂದರೇನು?' ಎಂಬ ಪ್ರಶ್ನಾರ್ಥಕವಾಗಿಯೇ ಆ ಪ್ರಬಂಧ ಆರಂಭವಾಗುತ್ತದೆ. ಮನುಷ್ಯ ತಾನು ಪ್ರಪಂಚದಲ್ಲಿ ಅನುಭವಿಸಿದ್ದು ಕಾವ್ಯದಲ್ಲಿ ಆಕಾರವನ್ನು ಪಡೆದಾಗ 'ಕಲೆ'ಯಾಗುತ್ತದೆ; ಆಗ ಕಲೆ ಸೃಷ್ಟಿಯಾಗುತ್ತದೆ. ಹಾಗಾಗಿ ಕಲೆ ಎನ್ನುವುದು ತನಗಾಗಿ ತಾನೇ ಅಪೇಕ್ಷಣೀಯವಾದದ್ದು. ಅಲ್ಲದೆ ಬೇರೆ ಏನೊಂದು ಪ್ರಯೋಜನ ಪಡೆಯುವುದಕ್ಕಾಗಿ ಕವಿ ಅದನ್ನು ಸೃಷ್ಟಿಸುವುದಿಲ್ಲ. ಕಲೆಯಲ್ಲಿ ಸೌಂದರ್ಯ ಮೈವೆತ್ತುತ್ತದೆ. ಸೌಂದರ್ಯವನ್ನು ಸೃಷ್ಟಿಸುವುದಕ್ಕಾಗಿ ಕಲೆ ಹುಟ್ಟಿಕೊಳ್ಳುವುದಿಲ್ಲ. ಕಲೆ ಹೇಳುವ ಶಬ್ದದಲ್ಲಿ ಜೀವಂತಿಕೆ ಇರಬೇಕು. ಕಲೆ ವಸ್ತುವಿನ ಆಂತರ್ಯದ ತತ್ವವಾಗಿರುತ್ತದೆಯೇ ಹೊರತು ಬರೀ ಅದರ ಹೊರಗಣವನ್ನು ವರ್ಣನೆ ಮಾಡುವುದಾಗಿರುವುದಿಲ್ಲ – ಎಂದು ಕಲೆಯ ಮಹತ್ವವನ್ನು ರವೀಂದ್ರನಾಥರು ಆ ಬರಹದಲ್ಲಿ ತಾತ್ವಿಕವಾಗಿ ನಿರೂಪಿಸುತ್ತಾರೆ.

ರವೀಂದ್ರನಾಥ ಠಾಕೂರರ 'ಸಾಹಿತ್ಯ'ದ ಬಗೆಗಿನ ಪರಿಕಲ್ಪನೆ, ಚಿಂತನೆ ವಿಶಿಷ್ಟ ಬಗೆಯಿಂದ ಕೂಡಿದೆ. ಸಾಹಿತ್ಯವನ್ನು ಕುರಿತ ತಮ್ಮ ಹಲವಾರು ಪ್ರಬಂಧಗಳಲ್ಲಿ ಸಾಹಿತ್ಯದ ಉದ್ದೇಶ, ಸಾಹಿತ್ಯದ ರುಚಿ, ಸೌಂದರ್ಯ ಕಲ್ಪನೆ, ಸಾಹಿತ್ಯಗಳ ತುಲನ ನಿರ್ಮಾಣ ಮುಂತಾದ ಹತ್ತಾರು ಸಂಗತಿಗಳ ಬಗ್ಗೆ ಗಾಢವಾಗಿ ಚರ್ಚಿಸಿದ್ದಾರೆ, ಚಿಂತಿಸಿದ್ದಾರೆ. ಮಾನವ ತನ್ನಲ್ಲೇ ಒಂದು ಲೋಕವನ್ನು

ನಿರ್ಮಿಸಿಕೊಳ್ಳುತ್ತಾನೆ. ಸ್ವಭಾವ ಸೂಕ್ಷ್ಮವಾದಂತೆ ಈ ಲೋಕ ಹೆಚ್ಚು ಸ್ಫಟಿಕವಾಗುತ್ತದೆ. ಇದರಲ್ಲಿ ವಸ್ತುಸ್ಥಿತಿ ಮುಖ್ಯವಲ್ಲ. ಅದನ್ನು ಕುರಿತ ಅನುಭವ ಮುಖ್ಯ. ಈ ಒಳಗಿನ ಲೋಕವನ್ನು ಚಿತ್ರಿಸಲು ಮನುಷ್ಯ ಕಲೆಯನ್ನು ಆಶ್ರಯಿಸುತ್ತಾನೆ. ಹಾಗಾಗಿ ಕಲೆಗಳಲ್ಲಿ ಸಾಹಿತ್ಯವೂ ಒಂದು ಎಂಬ ತಮ್ಮ ಅಭಿಪ್ರಾಯವನ್ನು ನಿಖರವಾಗಿ ಮಂಡಿಸುತ್ತಾರೆ.

ರವೀಂದ್ರನಾಥ ಠಾಕೂರರು ಸಾಹಿತ್ಯವನ್ನು ಕುರಿತು ಸಾಹಿತಿ ರಚಿಸುವುದು ಹಕ್ಕಿ ಹಾಡುವಂತೆ ಬರೀ ಅವನೇ ಹಾಡಿಕೊಳ್ಳುವುದಕ್ಕೆ, ತೃಪ್ತಿಪಡುವುದಕ್ಕೆ ಅಲ್ಲ; ಆ ಸಾಹಿತ್ಯ ರಚನೆಯೆಲ್ಲಾ ಓದುವವರನ್ನು, ವಾಚಕರನ್ನು, ಸಹೃದಯರನ್ನು ಕುರಿತದ್ದಾಗಿದೆ ಎಂದು ಹೇಳುವ ಚಿಂತನೆ ಇಂದಿಗೂ ನಿಜವಾಗಿದೆ. ಇವತ್ತಿನ ಆಧುನಿಕ ಥಿಯರಿ, 'ರೀಡರ್ಸ್ ರೆಸ್ಪಾನ್ಸ್' ಥಿಯರಿಗೆ ಇದು ಸಹವರ್ತಿಯಾಗಿದೆ. ಸಾಹಿತಿ ತನ್ನ ಅನುಭವಕ್ಕೆ 'ಇತರ ಹೃದಯಗಳ ಒಪ್ಪಿಗೆ'ಯನ್ನು ಬಯಸುತ್ತಾನೆಂದು ಹೇಳುವ ಅವರ ಈ ಮಾತಿನಲ್ಲಿ ಇನ್ನಷ್ಟು ಇದು ಸ್ಪಷ್ಟವಾಗಿ ಕಾಣುತ್ತದೆ. ಸಾಹಿತಿ ತನ್ನೊಳಗಿನ ಸತ್ಯವನ್ನು ಹೊರಗಿನ ಸತ್ಯವಾಗಿ ಮಾಡುತ್ತಾನೆಂದರೆ ಆತ ತನ್ನ ಆತ್ಮವನ್ನೂ ವಿಸ್ತರಿಸಿಕೊಳ್ಳುತ್ತಿರುತ್ತಾನೆ ಎನ್ನುತ್ತಾರೆ ರವೀಂದ್ರರು. ಕಾಳಿದಾಸನ 'ಕುಮಾರ ಸಂಭವ' ಮತ್ತು 'ಶಾಕುಂತಲ' ಕೃತಿಗಳನ್ನು ಈ ನಿಟ್ಟಿನಿಂದಲೇ ಅವರು ವ್ಯಾಖ್ಯಾನ ಮಾಡುತ್ತಾರೆ ಮತ್ತು 'ಪ್ರಣಯದ ಅವಸ್ಥೆಯನ್ನು ಚಿತ್ರಿಸಿದ್ದು ಕಾಳಿದಾಸನ ವಿಶಿಷ್ಟ ಲಕ್ಷಣ' ಎಂದು ಹೇಳುವ ರವೀಂದ್ರರು ತಮ್ಮ 'ಚಿತ್ರಾಂಗದಾ' ನಾಟಕದಲ್ಲಿ ಕೂಡ ಇಂತಹದ್ದೇ ವಿಷಯದ ವಿನ್ಯಾಸದಲ್ಲಿ ತೊಡಗುವುದನ್ನು ಕಾಣುತ್ತೇವೆ.

ರವೀಂದ್ರನಾಥ ಠಾಕೂರರು ವಿದ್ಯೆ, ಶಿಕ್ಷಣದ ಬಗ್ಗೆ ತಮ್ಮದೇ ಆದ ವಿಶಿಷ್ಟ ಚಿಂತನೆಗಳನ್ನು ಹೊಂದಿದ್ದರು. ಅದು ಬಹುಮಟ್ಟಿಗೆ ಪ್ರಾಚೀನ ಕಾಲದ ಗುರುಪರಂಪರೆಯ ವಿದ್ಯೆಗೆ ಹತ್ತಿರವಾದುದು. ಅದಕ್ಕಾಗಿ 'ಶಾಂತಿನಿಕೇತ'ನ ಎಂಬ ಶಿಕ್ಷಣ ಸಂಸ್ಥೆಯನ್ನೇ ಸ್ಥಾಪಿಸಿದರು ಅಲ್ಲಿ 'ಶಾಂತಿ, ವಿಶ್ವ, ಭಾರತಿ' ಈ ಮೂರೂ ಕಲ್ಪನೆಗಳು ವಿಲೀನಗೊಂಡಿದ್ದವು. 'ನನ್ನ ಶಾಲೆ' ಎಂಬ ಅವರ ಈ ಲೇಖನದಲ್ಲಿ ಶಾಂತಿನಿಕೇತನದ ಶಾಲೆಯ ವಿಷಯವನ್ನು ವಿವರಿಸಿದ್ದಾರೆ. ಮನುಷ್ಯ ತನಗೆ ಸಹಜವಾದ ಆವರಣದಲ್ಲಿ ಬೆಳೆಯಬೇಕು. ಅವನ ಬಾಳಿನ ಸಹಜ ಪ್ರವೃತ್ತಿಗಳನ್ನು ವಿನಿಯೋಗಿಸಬೇಕು. ಆದರೆ ನಮ್ಮ ದೇಶದ ಶಾಲೆಗಳಲ್ಲಿ ಇದಕ್ಕೆ ಬಹಳ ಅಡ್ಡಿ ಇದೆ. ಮಕ್ಕಳು ಮಣ್ಣಿನಲ್ಲಿ ಆಡಬಾರದು ಎನ್ನುತ್ತೇವೆ. ಪಾಠ ಕಲಿಬೇಕು, ಬಾಯಿಪಾಠ ಮಾಡಿ ಒಪ್ಪಿಸಬೇಕು, ಹೇಳಿದಂತೆ ಕೇಳಬೇಕು ಇತ್ಯಾದಿಗಳಲ್ಲಿ ಅವರನ್ನು ಬಂಧಿಸುತ್ತೇವೆ. ಮಗು ಮರವೆಂದರೇನು ಎಂಬುದನ್ನು ಪುಸ್ತಕದಲ್ಲಿ ಕಲಿಬೇಕು, ಅದು ನಿಜ ಜೀವನದಲ್ಲಿ ಮರವನ್ನು ಹತ್ತುವುದಕ್ಕೆ ಬಿಡುವುದಿರಲಿ, ಅದನ್ನು ಮುಟ್ಟಿಸಿಕೊಳ್ಳಬಾರದೆಂದು ನಿರ್ಬಂಧ ಹೇರುತ್ತೇವೆ. ನಾನು ಬಾಲ್ಯದಲ್ಲಿ ಇದನ್ನೆಲ್ಲಾ ಅನುಭವಿಸೇ ಬಂದೆ. ಆದರೆ ತಮ್ಮ ಶಾಲೆಯಲ್ಲಿ ಕಲಿಯುವ ಮಕ್ಕಳು ಇದರಿಂದ ವಂಚಿತರಾಗಬಾರದು ಎನ್ನುತ್ತಾರೆ. ಅವರು ಅಲ್ಲಿ ಸರ್ವ ಸ್ವತಂತ್ರರು. ಪೂರ್ವದಲ್ಲಿ 'ತಪೋವನ'ಗಳಲ್ಲಿ ಬಾಲಕರು ಬೆಳೆಯುತ್ತಿದ್ದದ್ದೇ ಹಾಗೆ. ಅವರು ಗುರುವಿನ ಸಾನ್ನಿಧ್ಯದಲ್ಲಿದ್ದು ಅವರಿಂದ ತಿಳಿವನ್ನು, ವಿವೇಕವನ್ನು ಪಡೆಯುತ್ತಿದ್ದರು. ಆದರೆ ಆಧುನಿಕ ಇಂಗ್ಲೀಷರ ವಿದ್ಯಾಭ್ಯಾಸದ ಕ್ರಮದಿಂದ

ಇದೆಲ್ಲಾ ನಾಶವಾಗಿದೆ ಎಂದು ತಮ್ಮ ಅತೃಪ್ತಿ, ಅಸಂತೋಷವನ್ನು ಅವರು ವ್ಯಕ್ತಪಡಿಸುತ್ತಾರೆ. ವಿದ್ಯೆಯ ಮುಖ್ಯ ಉದ್ದೇಶ ಮನುಷ್ಯ ತನ್ನ ಮನಸ್ಸಿನ ಗುರಿಯನ್ನು ಹರಡಲು, ಮೇಲಕ್ಕೇರಲು, ಅನಂತವನ್ನು ಸಾರಲು ಅದಕ್ಕಾಗಿ ಕಲಿಯಬೇಕು. ಅವರಿಗೆ ಕಲಿಯಲು ಅನುವು ಮಾಡಬೇಕೇ ಹೊರತು, ಕಲಿಸಲು ಹೋಗಬಾರದು ಎನ್ನುತ್ತಾರೆ. ಈ ತತ್ವವನ್ನೇ ಚಂದ್ರಶೇಖರ ಕಂಬಾರ ಅವರು ಕನ್ನಡ ವಿಶ್ವವಿದ್ಯಾಲಯದಲ್ಲಿ 'ಇದು ಕಲಿಸುವ ಸಂಸ್ಥೆ ಅಲ್ಲ, ಕಲಿಯಲು ಅನುವು ಮಾಡಿಕೊಡುವ ಸಂಸ್ಥೆ' ಎಂಬ ಧ್ಯೇಯ ವಾಕ್ಯವನ್ನಾಗಿ ಮಾಡಿದ್ದಾರೆ. ಮನುಷ್ಯ ನಿಜವಾಗಿ ಮನುಷ್ಯನಾಗಲು ಕಲಿಯಬೇಕಾಗಿದೆ. ಶಿಕ್ಷಣದ ಮುಖ್ಯ ಸಾರ ಗುರಿಯ ಉನ್ನತಿ, ವಿಸ್ತಾರ, ಅಶ್ರಾಂತ ಶಕ್ತಿ, ಅದಮ್ಯ ಸಂಕಲ್ಪ. ಇಂತಹ ಪೂರ್ಣಜೀವನವನ್ನು ಸಾಧಿಸುವುದೇ ಮುಖ್ಯ ಧ್ಯೇಯ. ಉಳಿದದ್ದೆಲ್ಲಾ ಅದಕ್ಕೆ ವಿಧೇಯ. ಮಾನವ ತನ್ನನ್ನು ತಾನು ತಿಳಿಯಬೇಕು – ಹೀಗೆ ರವೀಂದ್ರರು ಶಿಕ್ಷಣದ ತಿರುಳು, ಧ್ಯೇಯ, ಅದರ ಉದ್ದೇಶಗಳನ್ನು ಇಂದಿಗೂ ಪ್ರಸ್ತುತವಾಗುವ ರೀತಿಯಲ್ಲಿ ಮಂಡಿಸಿದ್ದಾರೆ. ಈ ಮಾದರಿಯ ಶಿಕ್ಷಣ ದೇಶದ ನಾನಾ ಕಡೆ ಅಲ್ಲಲ್ಲಿ ಕಂಡುಬರುವುದುಂಟು. ಇದರ ಹಿಂದೆ ರವೀಂದ್ರರ ಶಿಕ್ಷಣದ ಬಗೆಗಿನ ಚಿಂತನೆಗಳ ಪ್ರಭಾವವಿದೆ. ಆದರೆ ದುರಂತ ಎಂದರೆ ಟಾಲ್‌ಸ್ಟಾಯ್, ಠಾಕೂರ್, ಗಾಂಧೀಜಿ, ರಾಧಾಕೃಷ್ಣನ್, ಕುವೆಂಪು ಮುಂತಾದ ಸಾಹಿತಿಗಳು ಶಿಕ್ಷಣದ ಬಗ್ಗೆ ಮಂಡಿಸುವ ಚಿಂತನೆಗಳನ್ನು ನಮ್ಮ ಶಿಕ್ಷಣತಜ್ಞರು ಗಂಭೀರವಾಗಿ ತೆಗೆದುಕೊಳ್ಳುವುದಿಲ್ಲ. ಇಂದು ಶಿಕ್ಷಣ ತಜ್ಞರೆಂದರೆ ಬಂಡವಾಳಶಾಹಿಗಳು, ಕೈಗಾರಿಕೋದ್ಯಮಿಗಳು, ಐಟಿ, ಬಿಟಿ ಸಂಸ್ಥೆಗಳನ್ನು ನಡೆಸುವವರೇ ಎಂಬ ಅವಿವೇಕದ ತಿಳುವಳಿಕೆ ನಮ್ಮ 'ಪಕ್ಷಬದ್ಧ ರಾಜಕಾರಣ'ದಲ್ಲಿ ಬೇರೂರಿಬಿಟ್ಟಿದೆ.

ರವೀಂದ್ರನಾಥ ಠಾಕೂರರು ಸ್ತ್ರೀಯ ಸ್ಥಾನಮಾನದ ಬಗ್ಗೆ ಕುರಿತು ಸಾಕಷ್ಟು ಚಿಂತನೆ ಮಾಡಿದ್ದಾರೆ. ಸ್ತ್ರೀಯ ಶಕ್ತಿ ಆದ್ಯಶಕ್ತಿಯ ಅಂಶ. ಮನೆಯನ್ನು, ಸಮಾಜವನ್ನು, ಕುಟುಂಬವನ್ನು ಕಟ್ಟಿ ನಿಲ್ಲಿಸುವ ಹೊಣೆ ಆಕೆಯದು. ಆಕೆ ಹೆಂಡತಿ, ಒಡತಿ, ತಾಯಿ ಎಲ್ಲವೂ ಹೌದು ಎಂದೆಲ್ಲಾ ತಮ್ಮ ಬರಹಗಳಲ್ಲಿ ಅವರು ವಿವರಿಸಿದ್ದಾರೆ. ಇಂದು ಆಧುನಿಕ ಸಮಾಜದಲ್ಲಿ ಸ್ತ್ರೀಯರ ಸ್ಪರ್ಧೆಯನ್ನು ಮತ್ತು ಪಾಲ್ಗೊಳ್ಳುವಿಕೆಯನ್ನು ಗುರುತಿಸಿದ್ದಾರೆ. ಸ್ತ್ರೀ ಯಾವುದೇ ಅವಕಾಶಗಳಿಂದ ವಂಚಿತಳಾಗಬಾರದು, ಅವರಿಗೆ ಅವಕಾಶಗಳನ್ನು ನಾಗರಿಕ ಸಮಾಜ ಸೃಷ್ಟಿಸಬೇಕು ಎಂದು ಅವರು ಅಭಿಪ್ರಾಯಪಡುವುದು ಸಹಜವಾಗಿದೆ.

ರವೀಂದ್ರರಿಗೆ ಸೃಜನಶೀಲತೆಯ ಶಕ್ತಿಯಷ್ಟೇ ವಿಮರ್ಶಕನ ಶಕ್ತಿಯೂ ಬಲಿಷ್ಠವಾದುದು ಎಂಬ ನಂಬಿಕೆ ಇತ್ತು. ಅವರು ತಮ್ಮ ಕಾವ್ಯಗಳಲ್ಲಿ, ಕಾದಂಬರಿಗಳಲ್ಲಿ, ನಾಟಕಗಳಲ್ಲಿ ಪ್ರತಿಪಾದಿಸುವ ವಿಷಯಗಳ ವ್ಯಾಖ್ಯೆಯ ಥರ ಅವರ ಪ್ರಬಂಧಗಳು ಇವೆ. ಈ ಹಲವಾರು ಸಂಬಂಧಗಳು ಅವರ ಒಟ್ಟು ಸಾಹಿತ್ಯವನ್ನು ಅರ್ಥಮಾಡಿಕೊಳ್ಳಲು, ವಿಶ್ಲೇಷಣೆ ಮಾಡಿಕೊಳ್ಳಲು ತುಂಬಾ ಸಹಕಾರಿಯಾಗಿವೆ. ಅವರಲ್ಲಿನ ಸೃಜನಶೀಲತೆಯಷ್ಟೇ ಅವರ ವಿಮರ್ಶಾನ ಶಕ್ತಿ ಕೂಡ ಈ ಪ್ರಬಂಧಗಳಲ್ಲಿ ಅಭಿವ್ಯಕ್ತವಾಗಿದೆ.

ರವೀಂದ್ರನಾಥ ಠಾಕೂರರು ಅಪ್ರತಿಮ ಭಾರತೀಯ ಲೇಖಕ. ವಿಶ್ವಮಟ್ಟದಲ್ಲಿ ತಮ್ಮ ಕಾವ್ಯ (ಗೀತಾಂಜಲಿ)ಕ್ಕಾಗಿ ನೋಬೆಲ್ ಬಹುಮಾನ ಪಡೆದ ಕವಿ. ಸಾಹಿತ್ಯಕ್ಕಾಗಿ ಭಾರತದ ಲೇಖಕರಿಗೆ ನೋಬೆಲ್ ಬಹುಮಾನ ಪಡೆದಿರುವವರಲ್ಲಿ ಇವರೆ ಮೊದಲಿಗರು, ಇವರೇ ಇದುವರೆಗೂ ಕಡೆಯವರು. 'ಬಾಲಸಾಹಿತ್ಯ'ದಿಂದ ಹಿಡಿದು 'ಪ್ರೌಢಸಾಹಿತ್ಯ'ದ ತನಕ ರಚನೆ ಮಾಡಿದ ಭಾರತದ ಅಸಾಧಾರಣ ಪ್ರತಿಭಾವಂತ ಕವಿಯೆಂದರೆ ರವೀಂದ್ರರು. ಇವರ ಸಾಹಿತ್ಯವನ್ನು ಕುರಿತು ಅನುವಾದಗಳ ಮೂಲಕ ಕನ್ನಡಕ್ಕೆ ಬಂದ ಸಂದರ್ಭ ಮತ್ತು ಆ ಸಂದರ್ಭದ ಪರಿಸರವನ್ನು ಬದಲಾವಣೆ ಮಾಡಿದ ಅದರ ಪ್ರಭಾವ ಮತ್ತು ಪ್ರೇರಣೆಯನ್ನು ಅವರ ಕೃತಿಗಳ ಅನುವಾದಗಳ ಮೂಲಕವೇ ಪರಿಶೀಲಿಸುವ ಪ್ರಯತ್ನವನ್ನು ಮಾಡಲಾಗಿದೆ. ಪ್ರಸ್ತುತ ಮಹಾಪ್ರಬಂಧದಲ್ಲಿ ರವೀಂದ್ರರ, ಬಂಕಿಮರ ಮತ್ತು ಶರಶ್ಚಂದ್ರರ ಬಂಗಾಳಿ ಸಾಹಿತ್ಯವು ಕನ್ನಡಕ್ಕೆ ಅನುವಾದವಾಗಿ ಬರುವುದರ ಮೂಲಕ ಆರಂಭದ ಕನ್ನಡದ ಪರಿಸರದ ಪರಿವರ್ತನೆಗೆ ಸಾಂಸ್ಕೃತಿಕವಾಗಿ ಮತ್ತು ಸಾಹಿತ್ಯಿಕವಾಗಿ ಹೇಗೆ ಕಾರಣವಾದವು ಎಂಬುದನ್ನು ಇಲ್ಲಿ ಪರಿಶೀಲನೆಗೂ ಮೌಲ್ಯಮಾಪನಕ್ಕೆ ಗುರಿಮಾಡಲಾಗಿದೆ.

ಅಧ್ಯಾಯ – ಒಂಬತ್ತು

# ಶರಶ್ಚಂದ್ರ ಚಟರ್ಜಿ ಕಥನ ಮತ್ತು ಕನ್ನಡದ ಪರಿಸರ

ಅಧ್ಯಾಯ – ಒಂಬತ್ತು

# ಶರಶ್ಚಂದ್ರ ಚಟರ್ಜಿ ಕಥನ ಮತ್ತು ಕನ್ನಡದ ಪರಿಸರ

## ೯.೧. ಪರಿಸರ ಮತ್ತು ಬದುಕು

ಭಾರತೀಯ ಸಾಹಿತ್ಯದಲ್ಲಿ ಬಂಗಾಳಿ ಸಾಹಿತ್ಯಕ್ಕೆ ಒಂದು ವಿಶಿಷ್ಟ ಸ್ಥಾನವಿದೆ. ವಸಾಹತು ಕಾಲದ ಪೂರ್ವ ಮತ್ತು ಉತ್ತರದ ಎರಡೂ ಕಾಲಘಟ್ಟಗಳಲ್ಲಿ ಸೃಷ್ಟಿಯಾಗಿರುವ ಬಂಗಾಳಿ ಸಾಹಿತ್ಯವು ಭಾರತೀಯ ಇತರೆ ಪ್ರಾದೇಶಿಕ ಸಾಹಿತ್ಯಗಳಲ್ಲಿ ತನ್ನದೇ ಆದ ಅನನ್ಯತೆಯನ್ನು ಅನಾವರಣಗೊಳಿಸಿದೆ. ಸಾಮಾಜಿಕವಾಗಿ ಮತ್ತು ವೈಚಾರಿಕವಾಗಿ ಬಂಗಾಳಿ ಸಾಹಿತ್ಯವು ತನ್ನ ಸೃಷ್ಟಿಯತ್ತ ಅಸ್ಮಿತೆಯನ್ನು ಸದಾ ಕಾಯ್ದುಕೊಂಡಿದೆ. ಅಲ್ಲದೆ, ಬಂಗಾಳಿ ಸಾಹಿತ್ಯದ ಪ್ರಭಾವ ಭಾರತದ ಇತರೇ ದೇಸಿ ಸಾಹಿತ್ಯದ ಮೇಲೆ ಕೂಡ ಅಗಾಧವಾಗಿಯೇ ಆಗಿದೆ; ಅದರಲ್ಲೂ ಕನ್ನಡದ ಆಧುನಿಕ ಸಾಹಿತ್ಯದ ಮೇಲೆ ಅದರ ಪ್ರಭಾವ ಇನ್ನೂ ಗಾಢವಾಗಿಯೇ ಆಗಿದೆ. ಮೊದಲಿಗೆ ಬಂಗಾಳಿ ಕಥೆ, ಕಾದಂಬರಿಗಳ ಅನುವಾದಗಳ ಮೂಲಕ ಕನ್ನಡ ಸಾಹಿತ್ಯ ಲೋಕಕ್ಕೆ ಇದು ಪ್ರವೇಶ ಮಾಡಿದೆ. ಬಿ. ವೆಂಕಟಾಚಾರ್ಯ, ಅಹೋಬಲ ಶಂಕರ, ಹೆಚ್.ವಿ. ಸಾವಿತ್ರಮ್ಮ, ಮ. ವೆಂಕಟೇಶ, ಕುಮಾರಪ್ಪ ಮುಂತಾದ ಹಲವಾರು ಲೇಖಕರು ಬಂಗಾಳಿಯಿಂದ ಕನ್ನಡಕ್ಕೆ ಅನುವಾದದ ಮೂಲಕ ಕೆಲಸ ಮಾಡಿ ಕನ್ನಡ ಸಾಹಿತ್ಯದ ವೈಚಾರಿಕತೆ ಹಾಗೂ ಸಾಮಾಜಿಕತೆಯ ವಿಸ್ತರಣೆಗೆ ಕಾರಣರಾಗಿದ್ದಾರೆ. ಬಂಗಾಳಿ ಸಾಹಿತ್ಯದ ಪ್ರಭಾವದಿಂದ ವಿ.ಎಂ. ಇನಾಂದಾರ್, ಎಸ್.ಎಲ್. ಭೈರಪ್ಪ, ಯು.ಆರ್. ಅನಂತಮೂರ್ತಿ, ಶಾಂತಿನಾಥ ದೇಸಾಯಿ ಹಾಗೂ ಪ್ರಗತಿಶೀಲ ಸಾಹಿತಿಗಳು ಮುಂತಾದ ಅನೇಕ ಕನ್ನಡದ ಲೇಖಕರು ತಮ್ಮ ಸೃಜನಶೀಲವಾದ ಕಥೆ, ಕಾದಂಬರಿಗಳಲ್ಲಿ ಹೊಸ ದೃಷ್ಟಿಕೋನವನ್ನು ತಂದುಕೊಂಡಿದ್ದಾರೆ.

ಬಂಗಾಳಿ ಸಾಹಿತ್ಯದಲ್ಲಿ ಪ್ರಮುಖ ಲೇಖಕರಾದ ಬಂಕಿಮಚಂದ್ರ ಚಟರ್ಜಿ (೧೮೩೮–೧೮೯೪), ರವೀಂದ್ರನಾಥ ಠಾಕೂರರು (೧೮೬೧–೧೯೪೧), ಶರಶ್ಚಂದ್ರ ಚಟರ್ಜಿ (೧೮೭೬–೧೯೩೮), ಆಶಾಪೂರ್ಣದೇವಿ (೧೯೦೯–೧೯೯೫) ಮತ್ತು ಮಹಾಶ್ವೇತಾದೇವಿ (೧೯೨೬–೨೦೧೬) ಇವರು ಬಂಗಾಳಿ ಕಥೆ, ಕಾದಂಬರಿ ಸಾಹಿತ್ಯದ ಲೋಕದಲ್ಲಿ ಅಭಿಜಾತ ಸಾಮ್ರಾಟರಾಗಿದ್ದಾರೆ. ಅಷ್ಟೇ ಅಲ್ಲದೆ ಇವರು ಭಾರತೀಯ ಲೇಖಕರ ಸ್ಥಾನದಲ್ಲಿ ವಿಶಿಷ್ಟ ಸ್ಥಾನ

ಪಡೆದಿರುವುದರ ಜೊತೆಗೆ ವಿಶ್ವದ ಮಹತ್ವದ ಸಾಹಿತಿಗಳ ಸಾಲಿನಲ್ಲಿ ಕೂಡ ನಿಲ್ಲಬಲ್ಲ ಅಪೂರ್ವ ಲೇಖಕರಾಗಿದ್ದಾರೆ. ಇವರ ಸಾಹಿತ್ಯ ಕೃತಿಗಳು ಬಹುಮಟ್ಟಿಗೆ ಕನ್ನಡಕ್ಕೆ ಅನುವಾದವಾಗಿ ಬಂದಿರುವುದರ ಮೂಲಕ ಕನ್ನಡ ಸಾಂಸ್ಕೃತಿಕ ಪರಿಸರ ಹಾಗೂ ಸಾಹಿತ್ಯ ಲೋಕವನ್ನು ವೈಚಾರಿಕವಾಗಿ, ಸಾಮಾಜಿಕವಾಗಿ ಮತ್ತು ಸಾಹಿತ್ಯಕವಾಗಿ ವಿಸ್ತರಿಸಿವೆ.

ಪ್ರಸ್ತುತ ಅಧ್ಯಯನದಲ್ಲಿ ಆರಂಭದಲ್ಲಿ ತಿಳಿಸಿದಂತೆ ಮುಖ್ಯವಾಗಿ ಬಂಕಿಮರು, ರವೀಂದ್ರರು ಮತ್ತು ಶರಶ್ಚಂದ್ರರ ಕಥನ ಸಾಹಿತ್ಯದ ಕನ್ನಡದ ಅನುವಾದಗಳನ್ನು ಕುರಿತು ವಿಶ್ಲೇಷಿಸುವುದನ್ನು ಇಲ್ಲಿ ಮಾಡಲಾಗಿದೆ. ಹಿಂದಿನ ಅಧ್ಯಾಯಗಳಲ್ಲಿ ಬಂಕಿಮಚಂದ್ರರು ಮತ್ತು ರವೀಂದ್ರನಾಥರ ಕೃತಿಗಳ ಕನ್ನಡ ಅನುವಾದಗಳನ್ನು ಮತ್ತು ಅವುಗಳ ಸಾಮಾಜಿಕ, ಸಾಂಸ್ಕೃತಿಕ ಹಾಗೂ ಸಾಹಿತ್ಯಕ ಪ್ರಭಾವ, ಪ್ರೇರಣೆ, ಒತ್ತಾಸೆಗಳನ್ನು ಕುರಿತು ಚರ್ಚಿಸಲಾಗಿದೆ. ಸ್ತ್ರೀವಾದಿ ನೆಲೆಯಿಂದ ಆಶಾಪೂರ್ಣದೇವಿ ಮತ್ತು ಮಹಾಶ್ವೇತಾದೇವಿ ಅವರ ಕಥನಗಳನ್ನು ಕುರಿತು ಅಧ್ಯಯನ ಮಾಡುವುದಕ್ಕೆ ಬೇರೆಯದೇ ಅವಕಾಶವಿದೆ. ಮಹಾಶ್ವೇತಾದೇವಿ ಅವರು ಬರೀ ಸ್ತ್ರೀವಾದಿ ಲೇಖಕಿ ಮಾತ್ರವಲ್ಲದೆ 'ಆಕ್ಟಿವಿಸ್ಟ್' ಆಗಿದ್ದವರು. ಹಾಗಾಗಿ ಅವರ ಕಥನ ಸಾಹಿತ್ಯಕ್ಕೆ ವಿಭಿನ್ನವಾದ ಆಯಾಮಗಳಿವೆ. ಶರಶ್ಚಂದ್ರರ ಸ್ತ್ರೀವಾದಿ ನಿಲುವು ಮತ್ತು ಸಾಮಾಜಿಕ ಹಾಗೂ ವೈಚಾರಿಕ ದೃಷ್ಟಿಕೋನಗಳು ಈ ಬಂಗಾಳಿ ಮಹಿಳಾ ಲೇಖಕಿಯರ ಮೇಲೆ ದಟ್ಟವಾಗಿಯೇ ಆಗಿದೆ; ಅಷ್ಟೇ ಅಲ್ಲದೆ, ಮೊದಲೇ ಹೇಳಿದ ಹಾಗೆ ಬಂಕಿಮರು ಮತ್ತು ರವೀಂದ್ರರಿಗಿಂತ ಶರಶ್ಚಂದ್ರರ ಪ್ರಭಾವ ಆಧುನಿಕ ಕನ್ನಡ ಕಥನ ಸಾಹಿತ್ಯ ಮೇಲೆ ಹೆಚ್ಚಾಗಿ ಆಗಿದೆ.

ಪ್ರಸ್ತುತ ಅಧ್ಯಯನದಲ್ಲಿ ಶರಶ್ಚಂದ್ರರ ಕೃತಿಗಳು, ಅವುಗಳ ಭಾಷಾಂತರಗಳು, ಅವುಗಳ ವಸ್ತುಗಳ ಅನನ್ಯತೆ, ಅವುಗಳ ವಿಭಿನ್ನತೆಗಳನ್ನು ಕುರಿತು ಇಲ್ಲಿ ವಿವರಿಸುವ, ವಿಶ್ಲೇಷಿಸುವ ಮತ್ತು ಅರ್ಥ ಗ್ರಹಿಸಿಕೊಳ್ಳುವ ರೀತಿಯನ್ನು ಮಾಡಲಾಗುತ್ತಿದೆ.

ಇಪ್ಪತ್ತನೆಯ ಶತಮಾನದ ಬಂಗಾಳಿ ಸಾಹಿತ್ಯದಲ್ಲಿ ಅತ್ಯಂತ ಶ್ರೇಷ್ಠ ಲೇಖಕರಲ್ಲಿ ಶರಶ್ಚಂದ್ರರು ಒಬ್ಬರು. ಶರಶ್ಚಂದ್ರರು ತಾವು ರವೀಂದ್ರನಾಥ ಠಾಕೂರರ ಶಿಷ್ಯರೆಂದು ತಿಳಿದಿದ್ದರು. ಆದರೆ ಠಾಕೂರರು ರಾಜಕುಮಾರ ದ್ವಾರಕಾನಾಥ ಟಾಗೂರರ ಮೊಮ್ಮಗ; ಅವರು ಹುಟ್ಟಿನಿಂದಲೇ ಅರಮನೆಯ ವೈಭವವನ್ನು ಅನುಭವಿಸಿದವರು. ಅದರ ಜೊತೆಗೆ ಅವರಿಗೆ ಪೂರ್ವಜರಿಂದ ಬಂದ ಸಂಪತ್ತು, ತಾವು ಪಡೆದ ವಿದ್ವತ್ತು, ಕವಿತ್ವ – ಅಂದರೆ ಅವರು ಏಕಕಾಲಕ್ಕೆ ಲಕ್ಷ್ಮಿಪುತ್ರರೂ ಹೌದು; ಸರಸ್ವತಿ ಪುತ್ರರೂ ಹೌದು. ಇವೆರಡೂ ಠಾಕೂರರಿಗೆ ಒಟ್ಟಾಗಿಯೇ ಬಳುವಳಿಯಾಗಿ ಬಂದಿದ್ದವು. ತಮ್ಮ ಪೂರ್ವಜರ ಆಸ್ತಿಪಾಸ್ತಿ ಸಂಪತ್ತನ್ನು ಅನುಭವಿಸಿದ ಠಾಕೂರರು ಕೊನೆಗೆ 'ಶಾಂತಿನಿಕೇತನ'ಕ್ಕೆ ಬಂದು ಗ್ರಾಮದ ಪುನಾರಚನೆಯ, ವಿದ್ಯೆಯ ಪುನಾರಚನೆಯ, ಕಲೆಯ ಪುನಾರಚನೆಯಲ್ಲಿ ತೊಡಗಿಕೊಂಡರು. ಸ್ವಭಾವತಃ ನಗರವಾಸಿಯಾದ ಠಾಕೂರರು ಕೊನೆಗೆ ಗ್ರಾಮಜೀವನದ ಸಂಪರ್ಕಕ್ಕೆ ತೊಡಗಿಕೊಂಡದ್ದು ಚರಿತ್ರೆಯಲ್ಲಿ ಮುಖ್ಯ ಘಟನೆ.

ಆದರೆ ಶರಶ್ಚಂದ್ರರು ಹುಟ್ಟಿನಿಂದಲೂ ಹಳ್ಳಿಯ ಮನುಷ್ಯ; ಹುಟ್ಟು ಕಡು ಬಡವರು. ಹುಟ್ಟಿದ್ದು ಹೂಗಳಿ ಜಿಲ್ಲೆಯ ದೇವನಂದಪುರ. ಇದು ಕುಗ್ರಾಮವಾದ್ದರಿಂದ, ಕತ್ತಲಾದ ಮೇಲೆ ಆ ಹಳ್ಳಿಯಿಂದ ಹೊರಗೆ ಹೋಗುವುದೂ ಕಷ್ಟ ಎಂಬಂತಹ ಹಳ್ಳಿಯಲ್ಲಿ ಜನಿಸಿದ್ದರಿಂದ, ಅದು ರಾಜಶಾಹಿಗೆ ಒಳಪಟ್ಟ ಹಳ್ಳಿಯಾದ್ದರಿಂದ, ಗ್ರಾಮ್ಯಜೀವನದ ಸುಖದುಃಖಗಳನ್ನು, ರಾಗರತಿಗಳನ್ನು, ವಿಧಿ-ನಿಷೇಧಗಳನ್ನು ಹತ್ತಿರದಿಂದ ಕಂಡಿದ್ದರು. ಅವುಗಳನ್ನು ಆಪ್ತವಾಗಿ ಪ್ರೀತಿಯಿಂದ ಕಂಡಿದ್ದರು. ಇಂತಹ ಹಳ್ಳಿಯಿಂದ ದೂರ ನಗರಕ್ಕೆ ಹೋಗಿ ನೆಲೆಸಬೇಕೆಂದುಕೊಂಡು ತಮ್ಮ ಕೊನೆಯ ವರ್ಷಗಳಲ್ಲಿ ಕಲ್ಕತ್ತೆಯ ಹೊರವಲಯದಲ್ಲಿ ಒಂದು ಮನೆಯನ್ನು ಕಟ್ಟಿಕೊಂಡು ವಾಸವಾಗಿದ್ದು, ಆಗಾಗ ತಮ್ಮ ಹಳ್ಳಿಗೆ ಹೋಗಿ ಬಂದು ಮಾಡುತ್ತಿದ್ದರು.

ಹಿಂದಿಯಲ್ಲಿ ಪ್ರೇಮಚಂದ್, ಬಂಗಾಳಿಯಲ್ಲಿ ಶರಶ್ಚಂದ್ರ, ತಮಿಳಿನಲ್ಲಿ ಜಯಕಾಂತನ್, ಕನ್ನಡದಲ್ಲಿ ಎಸ್.ಎಲ್. ಭೈರಪ್ಪನವರಷ್ಟು ಜನಪ್ರಿಯ ಕಾದಂಬರಿಕಾರರು ಬೇರೊಬ್ಬರು ಭಾರತದ ಇನ್ನೊಂದು ಪ್ರಾದೇಶಿಕ ಭಾಷೆಯಲ್ಲಿ 'ಬಹುಶಃ' ಇರಲಾರರು. ಭಾರತದ ಬೇರೆ ಬೇರೆ ಭಾಷೆಗಳಲ್ಲಿ ಅನುವಾದದ ಮೂಲಕ ಪ್ರಕಟವಾಗಿರುವ ಇವರ ಕಾದಂಬರಿಗಳೇ ಇದಕ್ಕೆ ಸಾಕ್ಷಿಯಾಗಿವೆ; ಅದರಲ್ಲೂ ಶರಶ್ಚಂದ್ರ ಅವರ ಕಾದಂಬರಿಗಳು, ಕಥೆಗಳು ಬೇರೆ ಬೇರೆ ಭಾರತೀಯ ಭಾಷೆಗಳಾದ ಗುಜರಾತಿ, ಕನ್ನಡ, ಹಿಂದಿ, ಮರಾಠಿ, ಸಿಂಧೀ, ತಮಿಳು, ತೆಲುಗು, ಉರ್ದು, ಒರಿಯಾ, ಮಲಯಾಳಂ, ಅಸ್ಸಾಮಿ ಭಾಷೆಗಳಲ್ಲಿ ಅನುವಾದದ ಮೂಲಕ ಪ್ರಕಟವಾಗಿರುವ ಪಟ್ಟಿಯನ್ನು ನೋಡಿದರೆ ಸಾಕು. ಇದು ಅವರ ಜನಪ್ರಿಯತೆಗೆ ಸಾಕ್ಷಿಯಾಗಿದೆ. ಅಷ್ಟೇ ಅಲ್ಲದೆ, ಇಂಗ್ಲಿಷ್, ಫ್ರೆಂಚ್, ಇಟಾಲಿಯನ್ ಮುಂತಾದ ಭಾಷೆಗಳಿಗೂ ಇವರ ಕಾದಂಬರಿಗಳು ಅನುವಾದವಾಗಿ ಪ್ರಕಟವಾಗಿವೆ. ಶರಶ್ಚಂದ್ರರು ಆರಂಭದಿಂದಲೇ ಜನಪ್ರಿಯ ಕಥನಕಾರರಾಗಿ ಹೊರಹೊಮ್ಮಿದ್ದು ಅವರ ಕೊನೆಯ ಕಾಲದವರೆಗೂ ಅವರು ಅದೇ ಸ್ಥಾನವನ್ನು ಉಳಿಸಿಕೊಂಡಿದ್ದರು. ಈಗಲೂ ಶರಶ್ಚಂದ್ರರ ಕಾದಂಬರಿಗಳಿಗೆ ಅಪಾರವಾದ ಓದುಗ ವರ್ಗ ಇದೆ. ಈಗಲೂ ಇವರ ಕಾದಂಬರಿಗಳು ಹಿಂದಿ ಮತ್ತು ಬಂಗಾಳಿ ಭಾಷೆಗಳಲ್ಲಿ ಹತ್ತಾರು ಆವೃತ್ತಿಗಳನ್ನು ಕಂಡಿರುವುದೇ ಇದಕ್ಕೆ ಉದಾಹರಣೆಯಾಗಿದೆ. ರವೀಂದ್ರನಾಥ ಠಾಕೂರರು ತಮಗಿಂತ ಕಿರಿಯರಾದ ಈ ಲೇಖಕರಿಗೆ ತಮ್ಮ 'ಕಾಲೇರ ಯಾತ್ರಾ' ಎಂಬ ನಾಟಕವನ್ನು ಅರ್ಪಿಸಿರುವುದನ್ನು ಕಾಣುತ್ತೇವೆ.

ಕನ್ನಡ ಭಾಷೆಯಲ್ಲಿ ಶರಶ್ಚಂದ್ರರ ಹತ್ತಾರು ಕಾದಂಬರಿಗಳು ಎರಡು-ಮೂರು ಭಾಷಾಂತರಗಳಾಗಿ ಅನುವಾದವಾಗಿ ಪ್ರಕಟವಾಗಿರುವುದನ್ನು ಕಾಣುತ್ತೇವೆ. ಹಾಗಾಗಿ ಕನ್ನಡದ ಅನುವಾದಕರಿಗೆ ಶರಶ್ಚಂದ್ರರಷ್ಟು ಆಕರ್ಷಿತ ಲೇಖಕರು ಬಂಗಾಳಿಯಲ್ಲಿ ಕಡಿಮೆ ಎನ್ನಬಹುದು. ಭಾಗಲ್ಪುರದಲ್ಲಿ ಹಣಕಾಸಿನ ಮುಗ್ಗಟ್ಟಿನಿಂದ ಬಿ.ಎ.ಯನ್ನು ಮುಂದುವರಿಸಲಾಗದೆ ವಿದ್ಯಾಭ್ಯಾಸದಿಂದ ವಂಚಿತರಾದ, ಕಡುಬಡತನದಲ್ಲಿಯೆ ಬದುಕನ್ನು ಸಾಗಿಸಿದ, ಅನ್ಯಾಯ, ಅನಾದರ, ವಂಚನೆ, ಅಸಮಾನತೆ ಹಾಗೂ ಸ್ತ್ರೀ ವಿಮೋಚನೆಯೊಡನೆ ತಮ್ಮ ಕೃತಿಗಳಲ್ಲಿ ಚಿತ್ರಿಸುವುದರ ಮೂಲಕ ಹೋರಾಡಿದ ಬಂಗಾಳದ ವಿಶಿಷ್ಟ ಲೇಖಕ. ತಮ್ಮ ಕೃತಿಗಳಲ್ಲಿ ತಮ್ಮ ಜೀವನವನ್ನು ಸವೆಸಿದ ದೇವೇಂದ್ರಪುರ,

ರಂಗೂನ್, ಕಲ್ಕತ್ತ ಭಾಗಲ್ಪುರದ ಪ್ರಾದೇಶಿಕ ಪರಿಸರ, ಅಲ್ಲಿಯ ತಮ್ಮ ಜೀವನದಲ್ಲಿ ಸಂಪರ್ಕಕ್ಕೆ ಬಂದ ಮನುಷ್ಯರು – ಇವರೇ ತಮ್ಮ ಕಾದಂಬರಿಗಳಲ್ಲಿ ಪಾತ್ರಗಳಾಗಿದ್ದಾರೆ. ಬಂಕಿಮಚಂದ್ರರು ಮತ್ತು ರವೀಂದ್ರನಾಥರು ಮುಟ್ಟದ ಬಂಗಾಳದ ಬದುಕಿನ ಲೋಕವನ್ನು ಶರಶ್ಚಂದ್ರರು ತಮ್ಮ ಕೃತಿಗಳಲ್ಲಿ ಮುಟ್ಟಿದವರು. "ಬಂಗಾಳದಲ್ಲಿ ಹೋರಾಟ ನಡೆಸಬೇಕಾಗಿರದ ಭಾಗ್ಯಶಾಲಿ ಲೇಖಕ ನಾನೊಬ್ಬನೇ"[೧] ಎಂದು ಅವರೇ ಅನೇಕ ಸಂದರ್ಭಗಳಲ್ಲಿ ಉಲ್ಲೇಖಿಸಿದ್ದಾರೆ.

ಶರಶ್ಚಂದ್ರರು ಕಲ್ಕತ್ತೆಯಲ್ಲಿ ಕೆಲಸ ಸಿಗದೆ ಅಲೆದಾಡುತ್ತಿದ್ದಾಗ ತಮ್ಮ ಸಂಬಂಧಿಕರ ಕರೆಯ ಮೇರೆಗೆ ಬರ್ಮದ ರಂಗೂನ್‌ಗೆ ಕೈಯಲ್ಲಿ ಕಾಸಿಲ್ಲದೆ ಹೋಗಿ ಅಲ್ಲಿ ಬದುಕನ್ನು ಕಟ್ಟಿಕೊಳ್ಳುತ್ತಾರೆ. ಅವರು ಅಲ್ಲಿ ಪ್ಲೇಗ್ ಬೇನೆಯನ್ನೂ ಎದುರಿಸಬೇಕಾಗುತ್ತದೆ. ಅವರು ರಂಗೂನ್‌ನಲ್ಲಿದ್ದಾಗ ಕೆಲವು ಕಾಲ ಒಬ್ಬ ಮುದುಕ ಯಂತ್ರ ಕೆಲಸಗಾರನ ಮನೆಯಲ್ಲಿ ವಾಸವಿರುತ್ತಾರೆ. ಆ ಮುದುಕ ಅಸಾಧ್ಯ ಕುಡುಕ. ಆತನ ಹೆಂಡತಿ ತೀರಿಕೊಂಡಿರುತ್ತಾಳೆ. ಆ ವಿಧುರನಿಗೆ ಒಬ್ಬಳು ಮಗಳಿರುತ್ತಾಳೆ. ಶರಶ್ಚಂದ್ರರು ಆಕೆಯನ್ನು ವಿವಾಹವಾಗುತ್ತಾರೆ. ಆದರೆ ಆ ಮುದುಕ ಒಬ್ಬ ಲೋಲುಪನಿಂದ ಸಾಲ ಮಾಡಿರುತ್ತಾನೆ. ಆ ಸಾಲಗಾರ ಆ ಹುಡುಗಿಯನ್ನು ಪಡೆಯಬೇಕೆಂದು ಇರುತ್ತಾನೆ. ಆಗ ಶರಶ್ಚಂದ್ರರಿಗೆ ಇದು ಗೊತ್ತಾಗಿ ಆ ಹುಡುಗಿಯನ್ನು ಆ ಲೋಲುಪನಿಂದ ಪಾರು ಮಾಡುವ ಉದ್ದೇಶದಿಂದ ಆಕೆಯನ್ನು ವರಿಸುತ್ತಾರೆ. ಆಗ ಶರಶ್ಚಂದ್ರರಿಗೆ ಆಕೆಯಲ್ಲಿ ಗಂಡು ಮಗು ಆಗುತ್ತದೆ. ಆದರೆ ಆ ಹೆಂಡತಿ, ಮಗು ಇಬ್ಬರೂ ಪ್ಲೇಗ್ ಬೇನೆಗೆ ತುತ್ತಾಗಿ ಜೀವ ತೆರುತ್ತಾರೆ. ನಂತರ ಅವರು ಬರ್ಮಾ ಬಿಟ್ಟು ಬಂಗಾಳಕ್ಕೆ ಮರಳುತ್ತಾರೆ. ಅಲ್ಲಿ ಹಿರಣ್ಮಯಿದೇವಿ ಎಂಬ ಬ್ರಾಹ್ಮಣ ಹೆಣ್ಣು ಮಗಳನ್ನು ಮದುವೆಯಾಗುತ್ತಾರೆ. ಆಕೆ ಕೊನೆಯವರೆಗೂ ಶರಶ್ಚಂದ್ರರ ಜೊತೆ ಬಾಳು ನಡೆಸುತ್ತಾಳೆ. ಆದರೆ ಬಂಗಾಳಕ್ಕೆ ಮರಳಿದ ಮೇಲೆ ಅವರು ಸ್ಥಿತಿವಂತರಂತೆ ಮಹಾನಗರದಲ್ಲಿ ವಾಸ ಮಾಡದೆ ಹೌರಾ ಜಿಲ್ಲೆಯ ಬಾಜಿ–ಶಿಬಪುರ ಎಂಬಲ್ಲಿ ಬಾಡಿಗೆ ಮನೆಯನ್ನು ಹಿಡಿದು ಅಲ್ಲಿ ವಾಸವಾಗಿರುತ್ತಾರೆ.

ಆದರೆ ಕೆಲ ಕಾಲದ ನಂತರ ಶರಶ್ಚಂದ್ರರು ಹೌರಾಕ್ಕೆ ಹತ್ತಿರದ ಸಾಮತಾ ಬೇರ್ ಎಂಬಲ್ಲಿಗೆ ಬರುತ್ತಾರೆ. ಅಲ್ಲಿ ಸಮೀಪದ ಒಂದು ಹಳ್ಳಿಯಲ್ಲಿ ತನ್ನ ಅಕ್ಕ ಮತ್ತು ಭಾವ ವಾಸವಾಗಿರುತ್ತಾರೆ. ಅಲ್ಲಿ ರೂಪನಾರಾಯಣ ಎಂಬ ನದಿ ದಂಡೆಯ ಮೇಲೆ ಒಂದು ಸುಂದರವಾದ ಮನೆಯನ್ನು ಪ್ರಕೃತಿಯ ನಡುವೆ ಕಟ್ಟಿಕೊಂಡು, ನಗರ ಜೀವನದ ಗದ್ದಲಗಳಿಂದ ದೂರವಾಗಿ ಶಾಂತಿ ಸಮಾಧಾನದಿಂದ ಜೀವನ ಕಳೆಯುತ್ತಾರೆ. ಅಲ್ಲಿಂದ ತೀವ್ರ ಪ್ರಗತಿಯಲ್ಲಿ ಅವರ ಲೇಖನಿಯಿಂದ ಕಥೆ, ಕಾದಂಬರಿಗಳ ನಿರಂತರವಾದ ಪ್ರವಾಹ ಹರಿದುಬರುತ್ತದೆ. ಅಲ್ಲಿಯವರೆಗೂ ತಮ್ಮ ಬದುಕಿನಲ್ಲಿ ಕಂಡುಂಡ ಏಳುಬೀಳುಗಳ ಹೋರಾಟ ಮುಗಿದು, ಕೊನೆಗೆ ತಾವು ಈಗ ತನ್ನವರು ಎನ್ನುವವರ ಮಧ್ಯೆ ಇರುವಂತಾಯಿತಲ್ಲ ಎಂದು ಸಮಾಧಾನ ತಂದುಕೊಳ್ಳುತ್ತಾರೆ.

---

೧. ಹಾ.ಮಾ. ನಾಯಕ, (ಸಂ.) ಶರತ್‌ಚಂದ್ರ, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ೧೯೭೮, ಪುಟ–xv.

ಅಲ್ಲಿಂದ ಶರಶ್ಚಂದ್ರ ಅವರು ಬಂಗಾಳದ ಜನಜೀವನದ ಅಖಂಡ ಬದುಕನ್ನು ಪುನಃ ನಮಿಸುತ್ತಾ ಹೋದರು. ಅಲ್ಲಿಂದ ಅವರ ಜನಪ್ರಿಯತೆ, ಟೀಕೆ, ಪ್ರಶಂಸೆ ಎಲ್ಲವೂ ಬೆಳೆಯುತ್ತಲೇ ಹೋಯಿತು. ಬಂಗಾಳಿ ಸಮಾಜದ ಸಂಪ್ರದಾಯಶೀಲತೆಯನ್ನು, ವಿಧಿ-ನಿಷೇಧಗಳನ್ನು ಹಾಗೂ ಪ್ರೀತಿ ಪ್ರೇಮದ ಸ್ವಾಭಾವಿಕತೆಯನ್ನು ಪ್ರಶ್ನಿಸುತ್ತಾ ಶರಶ್ಚಂದ್ರರ ಬರವಣಿಗೆ ಅವ್ಯಾಹತವಾಗಿ ಸಾಗಿತು. ಕಲ್ಕತ್ತ ವಿಶ್ವವಿದ್ಯಾಲಯ ಅವರಿಗೆ 'ಜಗತ್ತಾರಿಣೀ ಪದಕ'ವನ್ನು, ಢಾಕಾ ವಿಶ್ವವಿದ್ಯಾಲಯ ಅವರಿಗೆ ಗೌರವ ಡಾಕ್ಟರೇಟ್ ಪದವಿಯನ್ನು ನೀಡಿ ಗೌರಿವಸಿತು. ಅವರ ಅನೇಕ ಕಾದಂಬರಿಗಳು ಸಿನೆಮಾಗಳಾಗಿ ಭಾರತೀಯ ಚಲನಚಿತ್ರ ರಂಗದಲ್ಲಿ ಯಶಸ್ಸು ಕಂಡಿವೆ. ಕೆಲವು ಕಾದಂಬರಿಗಳು ರಂಗಪ್ರಯೋಗಗಳಾಗಿವೆ. ಅವರು ಕೊನೆಗೆ ಸುದೀರ್ಘವಾದ ಕಾಯಿಲೆಗೆ ಬಿದ್ದು, ನೋವನ್ನು ಅನುಭವಿಸಿ, ಒಂದು ಶುಶ್ರೂಲಾಯದಲ್ಲಿ ತಮ್ಮ ಅರವತ್ತೆರಡನೆಯ ವಯಸ್ಸಿಗೆ ನಿಧನರಾದರು. ಆದರೆ ಅವರ ಕಾದಂಬರಿಗಳಿಗೆ ಮಾತ್ರ ಇನ್ನೂ ಜೀವಂತಿಕೆ ಇದೆ.

### ೯.೨. ಶರಶ್ಚಂದ್ರರ ಕಾದಂಬರಿಗಳ ಅಂತಃಸತ್ವ

ಶರಶ್ಚಂದ್ರರ ಗಾಢ ಜೀವಾನುಭವ, ಬದುಕಿನ ಬಗೆಗಿನ ಶ್ರದ್ಧೆ, ಬಡತನ ಹಾಗೂ ಅಸಮಾನತೆಯ ಬಂಗಾಳದ ಸಾಮಾಜಿಕ ಜೀವನ, ಬಾಳಿನ ರಮ್ಯತೆ ಹಾಗೂ ದುರಂತ, ಸಂಪ್ರದಾಯಗಳ ಬಗ್ಗೆ ಟೀಕೆ ಹಾಗೂ ವಿರೋಧ, ಪ್ರತಿಭಟನೆ, ಸ್ತ್ರೀಯರ ಪ್ರಾತಿನಿಧ್ಯ, ಶರಶ್ಚಂದ್ರರ 'ಕಥೆ ಹೇಳುವ' ಸರಳ ನಿರೂಪಣೆಯ ಕ್ರಮ - ಇವೆಲ್ಲಾ ಅವರನ್ನು ಒಬ್ಬ ಮೊದಲನೇ ದರ್ಜೆಯ ಕಾದಂಬರಿಕಾರನ ಮಟ್ಟಕ್ಕೇರಿಸಿವೆ. ಇವುಗಳ ಜೊತೆಗೆ ತಮ್ಮ 'ಪಥೇರ ದಾಬಿ'ಯಂತಹ ಕಾದಂಬರಿಯಲ್ಲಿ ಸಾಮಾಜಿಕ ಹಾಗೂ ಧಾರ್ಮಿಕ ಒತ್ತಾಯದ ವಿರುದ್ಧ ಪ್ರತಿಭಟನೆಯಿದೆ; ಇದರ ಜೊತೆಗೆ ಬ್ರಿಟೀಷರ ಸಾಮ್ರಾಜ್ಯಶಾಹಿಯ ಖಂಡನೆಯೂ ಇದೆ. ಇಲ್ಲಿ ಕ್ರಾಂತಿಕಾರ ಅಥವಾ ಸುಧಾರಣಾ ಮನೋಭಾವವಿದೆ. ಕೂಡುಕುಟುಂಬದ ಜೀವನಚಿತ್ರಣ ಮತ್ತು ಪತಿತಳಾದ ಹೆಂಗಸರು ಹಾಗೂ ಹರೆಯದ ಹಿಂದೂ ವಿಧವೆಯರು ಹೊಸ ಆಶ್ರಯಸ್ಥಾನಗಳನ್ನು ಪಡೆಯುವುದನ್ನು ಇವರ ಕಾದಂಬರಿಗಳಲ್ಲಿ ಕಾಣುತ್ತೇವೆ. ರಾಜಕೀಯ ಸ್ವಾತಂತ್ರ್ಯ, ವೀರಸಾಹಸಗಳನ್ನು ಪ್ರತಿಪಾದಿಸುವ ಪಾತ್ರಗಳೂ ಇವರ ಕಾದಂಬರಿಗಳಲ್ಲಿ ಕಾಣಿಸಿಕೊಳ್ಳುತ್ತವೆ. ರಾಜಲಕ್ಷ್ಮಿ, ಸಾವಿತ್ರಿ, ಅಚಲಾರಂತಹ ಪಾತ್ರಗಳಲ್ಲಿ ನಿರೂಪಿತವಾಗುವ ಸಹಜ ಪ್ರವೃತ್ತಿ, ಬುದ್ಧಿ, ನಿಶ್ಚಿತಾಭಿಪ್ರಾಯ, ಭಾವಾವೇಶ, ಮೂಲಭೂತವಾದ ನಿಷ್ಠೆ, ವಿರೋಧಾಭಾಸ, ಸಂಘರ್ಷ ಇವೆಲ್ಲಾ ವ್ಯಕ್ತವಾಗುತ್ತವೆ. ಆಧುನಿಕ ವಿದ್ಯಾಭ್ಯಾಸದ ಪದ್ಧತಿ ಭಾರತದ ರಾಷ್ಟ್ರೀಯತೆಗೆ ಪ್ರತಿಬಂಧಕವಾಗಿದೆ ಎಂದು ಪ್ರತಿಪಾದಿಸುವ ಪಾತ್ರಗಳೂ ಅವರ ಕಾದಂಬರಿಯಲ್ಲಿ ಬರುತ್ತವೆ. ಬಹುಮಟ್ಟಿಗೆ ಶರಶ್ಚಂದ್ರರ ಕಾದಂಬರಿಗಳೆಲ್ಲಾ ಸಮಸ್ಯಾತ್ಮಕ ಕಾದಂಬರಿಗಳಾಗಿವೆ. 'ಪಥೇರ್ ದಾಬಿ' ಮತ್ತು 'ಶೇಷ ಪ್ರಶ್ನೆ'ಯಂತಹ ಕಾದಂಬರಿಗಳಲ್ಲಿ ಕಥನಕ್ಕಿಂತ ಚರ್ಚೆ, ವಾಗ್ವಾದ ಇವೇ ಮುಖ್ಯವಾಗುತ್ತವೆ. ಈ ವಿಚಾರಗಳು ಭಾರತೀಯ ಯಾವುದೇ ಭಾಷಿಕ ಸಮಾಜದ ಸಮಸ್ಯೆಗಳೇ ಆಗಿರುತ್ತವೆ. ಆ ಕಾರಣದಿಂದಾಗಿ ಶರಶ್ಚಂದ್ರರ

ಕಾದಂಬರಿಗಳು ಕನ್ನಡಕ್ಕೆ ಅನುವಾದದ ಮೂಲಕ ಬಂದು ಇಲ್ಲಿ ಪರಿಸರ ಹಾಗೂ ಸಂಸ್ಕೃತಿಯ ಜೊತೆ ಅನುಸಂಧಾನ ನಡೆಸಿವೆ.

ಶರಶ್ಚಂದ್ರರ ಕಾದಂಬರಿಗಳ ಮತ್ತೊಂದು ಮುಖ್ಯ ವಸ್ತುವೆಂದರೆ ಶೀಲಗುಣ ಪ್ರತಿಪಾದನೆ. ಅವರ ಕಾದಂಬರಿಗಳ ಅನೇಕ ಪಾತ್ರಗಳಲ್ಲಿ ಈ ಶೀಲಗುಣ ನಿರ್ಮಿತಿ ಕಾಣಿಸಿಕೊಳ್ಳುತ್ತದೆ. ಅವರು ನಿರ್ಮಿಸಿದ ಅನೇಕ ನಾಯಕ – ನಾಯಕಿಯರು ಶ್ರೀಮಂತರಾಗಿದ್ದಾರೆ. 'ಗೃಹದಾಹ' ಕಾದಂಬರಿಯ ಸುರೇಶ, 'ಶ್ರೀಕಾಂತ' ಕಾದಂಬರಿಯ ರಾಜಲಕ್ಷ್ಮಿ ಪಾತ್ರಗಳೇ ಇದಕ್ಕೆ ಉದಾಹರಣೆಯಾಗಿದ್ದಾರೆ. ಇವರೆಲ್ಲಾ ಹಣದ ವಿಷಯದಲ್ಲಿ ತೀರ ನಿಸ್ಪೃಹರಾಗಿದ್ದಾರೆ. ಹಾಗಾಗಿ ಇವರ ಕಾದಂಬರಿಗಳ ಪಾತ್ರಗಳಲ್ಲಿ ವೈವಿಧ್ಯತೆಯಿದೆ. ಈ ರಾಜಲಕ್ಷ್ಮಿ ಪಾತ್ರವು ಶರಶ್ಚಂದ್ರರ ಪ್ರಾಥಮಿಕ ಶಾಲೆಯ ಸಹಪಾಠಿಯಾಗಿದ್ದಳು ಎನ್ನಲಾಗುತ್ತದೆ. ಅವರು ಬಾಲ್ಯದಲ್ಲಿ ಅವಳಲ್ಲಿ ಕಂಡ ಹಠಮಾರಿತನ, ಕುಚೇಷ್ಟೆಗಳಿಗಿಂತ ಭಿನ್ನವಾಗಿ ತಮ್ಮ ಕಲೆಯ ಮೂಸೆಯಲ್ಲಿ ಪರಿವರ್ತನೆ ಮಾಡಿ ಆಕೆಯನ್ನು ಹೆಸರಾಂತ ನಾಯಕಿಯನ್ನಾಗಿ ಮಾಡಿರುವ ಸಾಧ್ಯತೆ ಇದೆ ಎಂದು ಎಸ್.ಸಿ. ಸೇನ್‌ಗುಪ್ತರಂತಹ ವಿಮರ್ಶಕರು ಅಭಿಪ್ರಾಯಪಡುತ್ತಾರೆ.

'ಶ್ರೀಕಾಂತ' ಶರಶ್ಚಂದ್ರರ ಆತ್ಮನಿಷ್ಠ ಕಾದಂಬರಿ ಎನ್ನಬಹುದಾಗಿದೆ. ಅವರು ಹುಡುಗನಾಗಿದ್ದಾಗ ಬಾಗಲ್ಪುರದಲ್ಲಿ ಬಾಲ್ಯವನ್ನು ಹೆಚ್ಚಾಗಿ ಕಳೆದರು. ಅಲ್ಲಿಯ ಸಮಾಜದ 'ಶೀಲಗುಣ' ಶರಶ್ಚಂದ್ರರನ್ನು ತುಂಬಾ ಪ್ರಭಾವಿಸಿತು. ಅಲ್ಲಿ ಅಪ್ಪ, ಅಮ್ಮ, ಅಣ್ಣ, ಅಕ್ಕ, ತಮ್ಮ, ತಂಗಿ, ಸೋದರ ಮಾವರ ಜೊತೆ ಬಾಲ್ಯವನ್ನು ಕಳೆದವರು. ಅಲ್ಲಿ ನೆರೆಹೊರೆಯವರಾದ ಉದಾರವಾದಿ ಬ್ಯಾನರ್ಜಿ, ಸಂಪ್ರದಾಯವಾದಿ ಗಂಗೂಲಿ ಅವರ ಸ್ವಭಾವಗಳನ್ನು ಹತ್ತಿರದಿಂದ ಕಂಡವರು. ಅವರ ಮನೋವೃತ್ತಿ ಸಂಪ್ರದಾಯ ವಿರೋಧಿಯಾಗಿತ್ತು. ಅಲ್ಲಿ ಆಟ ಪಾಠ, ವ್ಯಾಯಾಮ, ಮೀನು ಹಿಡಿಯುವುದು ಮುಂತಾದ ವಿಷಯಗಳಲ್ಲಿ ತೊಡಗಿ ಬಾಲ್ಯವನ್ನು ಕಳೆದಿದ್ದರು. ಈ ಎಲ್ಲಾ ವಿಷಯಗಳು ಅವರ 'ಶ್ರೀಕಾಂತ' ಕಾದಂಬರಿಯಲ್ಲಿ ಬಂದಿವೆ. ಇದು ಅವರ ಒಂದು ಬೃಹತ್ ಆತ್ಮಕಥಾನಕ ಪ್ರಧಾನವಾದ ಕಾದಂಬರಿ. ಇದು ನಾಲ್ಕು ಭಾಗಗಳಲ್ಲಿದೆ. ಇದರ ಮೊದಲ ಭಾಗದಲ್ಲಿ ಬರುವ ಇಂದ್ರನಾಥ ಅವರ ಬಾಲ್ಯ ಸ್ನೇಹಿತ ರಾಜೇಂದ್ರನಾಥನೇ ಎನ್ನಲಾಗಿದೆ. ಶರಶ್ಚಂದ್ರರಿಗೆ ಮಧುರವಾದ ಕಂಠವಿದ್ದು ಸಂಗೀತದಲ್ಲಿ ಅಭಿರುಚಿ ಇತ್ತು. ವರ್ಣಚಿತ್ರಗಳನ್ನೂ ಅವರು ಬರೆಯುತ್ತಿದ್ದರು. ನಾಟಕಗಳಲ್ಲಿ ಸ್ತ್ರೀಪಾತ್ರಗಳನ್ನೂ ಮಾಡುತ್ತಿದ್ದರು. ಒಳ್ಳೆಯ ನಟ ಎಂದು ಬಾಗಲ್ಪುರದಲ್ಲಿ ಹೆಸರುವಾಸಿಯಾಗಿದ್ದರು. ಮಾನವೀಯವಾದ ಜನೋಪಕಾರ್ಯಗಳಲ್ಲಿಯೂ ಅವರು ಪಾಲ್ಗೊಳ್ಳುತ್ತಿದ್ದರು. ಈ ಎಲ್ಲಾ ಘಟನೆಗಳು ಅವರ 'ಶ್ರೀಕಾಂತ' ಕಾದಂಬರಿಯಲ್ಲಿ ಕಾಣಿಸಿಕೊಂಡಿವೆ. ಈ ಭಾಗದಲ್ಲಿ ಬರುವ ಸಾಧುವಿನ ಚಿತ್ರ ತಿರಸ್ಕಾರಕ್ಕೆ ಒಳಗಾಗಿದ್ದರೆ ಇದರಲ್ಲಿ ಬರುವ ವಜ್ರಾನಂದ ಸ್ವಾಮಿಯವರ ಪಾತ್ರ ಆದರ್ಶವಾಗಿದೆ. ಶರಶ್ಚಂದ್ರರ ಕಿರಿಯ ಸಹೋದರ ಪ್ರಭಾಶ್ಚಂದ್ರ ಅವರು ರಾಮಕೃಷ್ಣ ಆಶ್ರಮವನ್ನು ಸೇರಿ ಅವರು ವೇದನಾಂದ ಸ್ವಾಮಿ ಎಂದು ಹೆಸರು ಬದಲಾಯಿಸಿಕೊಂಡದ್ದು ಅವರ ಕಣ್ಮುಂದೆ ನಡೆದಿತ್ತು. ವಜ್ರಾನಂದರ ಪಾತ್ರದಲ್ಲಿ ಈ ತಮ್ಮ ಸಹೋದರನ ಆದರ್ಶವನ್ನು ಕಾಣಿಸಲಾಗಿದೆ ಎಂದು ವಿಮರ್ಶಕರು ಹೇಳುತ್ತಾರೆ.

ರೂಢಿಯ ನೀತಿ ನಿಯಮಗಳು ಮನುಷ್ಯನ ಮನೋಧರ್ಮವನ್ನು ಸಂಕುಚಿತಗೊಳಿಸುತ್ತವೆ ಎಂಬುದು ಶರಚ್ಚಂದ್ರರ ಅಭಿಪ್ರಾಯವಾಗಿತ್ತು. ಇದಕ್ಕೆ ಪ್ರತಿಬಿಂಬ ಎಂಬಂತೆ ಅವರ 'ಚರಿತ್ರಹೀನ' ಕಾದಂಬರಿ ಇದೆ. ಮನುಷ್ಯನ ಮನೋಧರ್ಮ ವಿಶಾಲವಾದಾಗ, ಹೃದಯ ಸಂವೇದನಶೀಲವಾದಾಗ ಮನುಷ್ಯ ನಿಜವಾಗಿಯೂ ಗುಣವಂತನಾಗುತ್ತಾನೆಂಬುದು ಶರಚ್ಚಂದ್ರರ ನಂಬಿಕೆ. ಇಬ್ಬರೂ ಆಪ್ತ ಸ್ನೇಹಿತರಾಗಿದ್ದರೂ ತೀರಾ ಭಿನ್ನ ಜಾಯಮಾನದವರಾದ ಉಪೇಂದ್ರ ಮತ್ತು ಸತೀಶ ಎರಡು ಪಾತ್ರಗಳನ್ನು 'ಚರಿತ್ರಹೀನ' ಕಾದಂಬರಿಯಲ್ಲಿ ಶರಚ್ಚಂದ್ರರು ವಿಶಿಷ್ಟವಾಗಿ ಚಿತ್ರಿಸಿದ್ದಾರೆ. ಉಪೇಂದ್ರ ವಿಶ್ವವಿದ್ಯಾಲಯದಲ್ಲಿ ಒಬ್ಬ ಬುದ್ಧಿವಂತ ವಿದ್ಯಾರ್ಥಿ. ಆದರೆ ಸತೀಶ ಮೆಟ್ರಿಕ್ಯುಲೇಷನ್ ಪರೀಕ್ಷೆಯಲ್ಲಿ ತೇರ್ಗಡೆಯಾಗುವ ಮೊದಲೇ ಆತ ಶಾಲೆ ಬಿಟ್ಟವನು. ಉಪೇಂದ್ರ ಸಂಪ್ರದಾಯವಾದಿ, ಧರ್ಮಿಷ್ಠ, ಮಡಿವಂತ; ಆದರೆ ಸತೀಶ ಕುಡುಕ, ಯಾವುದೋ ಮನೆಯಲ್ಲಿ ಮನೆಗೆಲಸದವಳಾದ ಪತಿತ ಹೆಂಗಸೊಬ್ಬಳನ್ನು ಪ್ರೀತಿಸುತ್ತಿದ್ದವನು. ಆತ ವಿಶಾಲ ಹೃದಯಿ. ಕೊನೆಗೆ ಅವನ ಪ್ರಭಾವದಿಂದ ಉಪೇಂದ್ರನೂ ಬದಲಾಗುತ್ತಾನೆ. ಇಂತಹ ಒಂದು ವಿಶಿಷ್ಟ ಆಶಯವುಳ್ಳ ಕಥೆಯನ್ನು 'ಚರಿತ್ರಹೀನ' ಕಾದಂಬರಿ ಒಳಗೊಂಡಿದೆ. ಸತೀಶನ ಪಾತ್ರದಲ್ಲಿ ಶರಚ್ಚಂದ್ರರ ಸ್ವಂತ ಬದುಕಿನ ಅನುಭವದ ಎಳೆಗಳನ್ನೂ ಗುರುತಿಸಬಹುದಾಗಿದೆ. "'ಚರಿತ್ರಹೀನ' ಕಾದಂಬರಿಯಲ್ಲಿ ಶರಚ್ಚಂದ್ರರು ಸಂಪ್ರದಾಯಬದ್ಧ ಶಿಷ್ಟ ಸಮಾಜದ ಸಲುವಾಗಿ ತಮ್ಮ ಒಲವನ್ನು ಸ್ಪಷ್ಟವಾಗಿ ತೋರಿದ್ದಾರೆ. ವ್ಯಕ್ತಿಯ ಚಾರಿತ್ರ್ಯವನ್ನು ಧಾರ್ಮಿಕ ಕಟ್ಟುಪಾಡುಗಳ ಶಾಶ್ವತ ಮಾನದಂಡದಿಂದ ನಿರ್ಣಯಿಸುವ ಜಡತೆಯನ್ನಿಲ್ಲಿ ಕಾಣಬಹುದು. ಸಂಪ್ರದಾಯಬದ್ಧ ಸಮಾಜದ ಆದರ್ಶ ವ್ಯಕ್ತಿಯಾಗಿ ಉಪೇಂದ್ರ ಉಳಿದೆಲ್ಲಾ ಪಾತ್ರಗಳ ಗುಣಾವಗುಣಗಳ ನಿಷ್ಕರ್ಷೆಗೆ ಅಂತಿಮ ಅಧಿಕಾರಿಯಾಗಿ ದೇವಮಾನವನಂತೆ ಈ ಕಾದಂಬರಿಯಲ್ಲಿ ಕಾಣಿಸಿಕೊಳ್ಳುತ್ತಾನೆ. ಇಲ್ಲಿ ವಾಸ್ತವ ಸಮಾಜದ ಮೇಲೆ ಹೋರಾಟವನ್ನು, ಅದರಿಂದಾಗಿ ಸಾಮಾಜಿಕ ಜೀವನ ಮೌಲ್ಯಗಳ ವಿಕಾಸವನ್ನು ಕಾಣುವಂತಿಲ್ಲ. ಸಮಾಜ ನಿಂತನೀರಿನಂತೆ ಜಡವಾಗಿ ಬಿಟ್ಟಿರುವುದನ್ನೇ ನಿತ್ಯ ಸತ್ಯವೆಂಬಂತೆ ಸಲ್ಲದ ಆಧ್ಯಾತ್ಮಿಕ ಗುಂಗಿನಲ್ಲಿ ವ್ಯಕ್ತಿಗಳನ್ನು ಚಿತ್ರಿಸಿರುವುದು ಈ ಕಾದಂಬರಿಯ ಅಡಿಗಡಿಗೂ ಗೋಚರವಾಗುತ್ತದೆ."[೨]

ಇವರ ಕಾದಂಬರಿಯನ್ನು ಓದುತ್ತಿದ್ದರೆ ಕನ್ನಡದ ಸಮಾಜ ಕೂಡ ಬಂಗಾಳದ ಹಳ್ಳಿಗಳ ಸಮಾಜಕ್ಕಿಂತ ಭಿನ್ನವಾಗಿದೆ ಅನ್ನಿಸುವುದಿಲ್ಲ. ಬಹುಶಃ ಇದಕ್ಕೇ ಇರಬೇಕು, ನಮ್ಮ ಕನ್ನಡದ ಲೇಖಕರು ಆರಂಭದಲ್ಲಿ ಬಂಗಾಳಿಯ ಶರಚ್ಚಂದ್ರರ ಕಾದಂಬರಿಗಳನ್ನು ಕನ್ನಡಕ್ಕೆ ಅನುವಾದಿಸಿದ್ದು ಅನ್ನಿಸುತ್ತದೆ. ಶರಚ್ಚಂದ್ರರ 'ಗೃಹದಾಹ' ಮತ್ತೊಂದು ಮಹತ್ವದ ಕಾದಂಬರಿ. ಈ ಕಾದಂಬರಿಯಲ್ಲಿ ಒಂದು ಭೀಕರವಾದ ಘಟನೆ ಇದೆ. ಇಲ್ಲಿಯ ನಾಯಕಿ ಅಚಲಾಳಂತಹ ಹೆಣ್ಣಿನ ಮೇಲೆ ವ್ಯಭಿಚಾರ ನಡೆಯುತ್ತದೆ. ಇದು ಶರಚ್ಚಂದ್ರರ ವಿಭಿನ್ನವಾದ ವಸ್ತುವಾಗಿದೆ. ಇದರಲ್ಲಿ ಸತ್ಯವೆಷ್ಟು? ಕಲ್ಪನೆಯೆಷ್ಟು? ಎಂಬ ಪ್ರಶ್ನೆ ಬರುವಷ್ಟರಮಟ್ಟಿಗೆ ಅನುಮಾನವನ್ನು ಹುಟ್ಟಿಸುವಷ್ಟು ಇದರ ವಸ್ತು ಗಟ್ಟಿಯಾಗಿದೆ.

---

೨. ಡಿ.ವಿ.ಕೆ. ಮೂರ್ತಿ, ಜೀವನ ಮೌಲ್ಯಗಳು ಮತ್ತು ಸಾಹಿತ್ಯ, ಡಿ.ವಿ.ಕೆ.ಮೂರ್ತಿ ಪ್ರಕಾಶನ, ಮೈಸೂರು, ೨೦೦೮, ಪುಟ ೭೦-೭೧

## ೯.೩. ಸ್ತ್ರೀ ಸಂವೇದನೆ ಮತ್ತು ಶರಶ್ಚಂದ್ರರ ಕಾದಂಬರಿಗಳು

ಶರಶ್ಚಂದ್ರರದು ಹೆಣ್ಣು ಹೃದಯಿ. ಅವರು ಹೆಣ್ಣಿನ ಭಾವನೆಗಳನ್ನು, ಯಾತನೆಗಳನ್ನು, ಪ್ರೀತಿಯ ಭಾವನೆಗಳನ್ನು, ಮಾನಸಿಕ ತುಮುಲ ಹೊಯ್ದಾಟಗಳನ್ನು, ಶಕ್ತಿ ಸಾಮರ್ಥ್ಯಗಳನ್ನು ಮನೋವಿಜ್ಞಾನಿಯ ರೀತಿಯಲ್ಲಿ ಚಿತ್ರಿಸುವುದರಲ್ಲಿ ವಿಶೇಷ ಆಸಕ್ತಿಯುಳ್ಳ ಲೇಖಕ. ಅವರು ಪ್ರೀತಿ ಪ್ರೇಮ ಇವೇ ಮುಖ್ಯ ವಿಷಯವೆನ್ನಿಸದಿದ್ದರೂ ಸ್ತ್ರೀ ಹೃದಯದ ನಿಗೂಢ ಹಾಗೂ ಸಂಕೀರ್ಣ ಸ್ವರೂಪವನ್ನು ಒಳಹೊಕ್ಕು ನೋಡಿ ಚಿತ್ರಿಸುವುದನ್ನು ಶರಶ್ಚಂದ್ರರ ಕಥೆ ಕಾದಂಬರಿಗಳಲ್ಲಿ ಢಾಳಾಗಿ ಕಾಣಬಹುದು. ಪ್ರೀತಿಯ ಕೋಮಲಭಾವನೆಗಳನ್ನು ಅವರ 'ಹರಿಲಕ್ಷ್ಮಿ' ಕಥೆಯಲ್ಲಿ ಕಂಡರೆ, ಅವರ 'ಪರಿಣೀತಾ', 'ದತ್ತಾ' ಕಾದಂಬರಿಗಳಲ್ಲಿ ಪ್ರಣಯದ ದುರಂತದ ಮುಖಗಳನ್ನು ಚಿತ್ರಿಸುತ್ತಲೇ ಅದರ ಸೊಗಸನ್ನೂ, ಸಫಲತೆಯನ್ನೂ ಪಾತ್ರಗಳಲ್ಲಿ ಕಾಣಿಸುತ್ತಾರೆ. 'ಪರಿಣೀತಾ' ಒಂದು ಸಾಧಾರಣವಾದ ಕಥೆಯಾದರೂ ಕ್ಷುಲ್ಲಕವಾದ ತಪ್ಪು ತಿಳುವಳಿಕೆಯನ್ನು ಆಧರಿಸಿ ಬರೆದ ಕಥೆ. ಶೇಖರ ಲಲಿತಳನ್ನು ಪ್ರೀತಿಸುತ್ತಾನೆ; ಲಲಿತೆಯೂ, ಶೇಖರನನ್ನು ಪ್ರೀತಿಸುತ್ತಾಳೆ. ಅವರಿಬ್ಬರ ನಡುವೆ ಮಧ್ಯದಲ್ಲಿ ಅಚಡಣೆ ಬರುತ್ತದೆ. ಆದರೆ ಲಲಿತಳಿಗೆ ಆಗಲೇ ಮದುವೆಯಾಗಿದೆ ಎಂದು ಶೇಖರನಿಗೆ ಗೊತ್ತಾದಾಗ ಆತನಿಗೆ ನಿರಾಶೆಯಾಗುತ್ತದೆ.

ಶರಶ್ಚಂದ್ರರ ಕಾದಂಬರಿಗಳು ಓದುಗನ ಮನಸ್ಸಿನ ಮೇಲೆ ಗಾಢ ಪರಿಣಾಮ ಬೀರುತ್ತವೆ. ಅವರ 'ದತ್ತಾ' ಒಂದು ಉತ್ತಮ ಕಾದಂಬರಿಯಾಗಿದೆ. ಧರ್ಮವಿಧಿಗಳಿಗೆ ಎದುರಾಗಿ ಬೆಳೆದು ಪ್ರೀತಿಯಲ್ಲಿ ಸಿಕ್ಕು ಬಿದ್ದ ಹೆಣ್ಣೊಬ್ಬಳ ಹೃದಯದ ಅಲೆಗಳನ್ನು ಚಿತ್ರಿಸಿರುವುದು ಈ ಕಾದಂಬರಿಯ ವೈಶಿಷ್ಟ್ಯವಾಗಿದೆ. ಇದು ತುಂಬಾ ಜನಪ್ರಿಯತೆಯನ್ನು, ಮನ್ನಣೆಯನ್ನು ಪಡೆದ ಕಾದಂಬರಿ. ಇಂದಿಗೂ ಇದು ಎಲ್ಲಾ ಸಾಂಪ್ರದಾಯಿಕ ಸಮಾಜಗಳಿಗೂ ಪ್ರಸ್ತುತವಾದುದು. ಇದರ ವಸ್ತು ಹೆಚ್ಚು ಔಚಿತ್ಯಪೂರ್ಣವೂ, ಸಮರ್ಪಕವೂ ಆದುದಾಗಿದೆ. ತರುಣ ವಯಸ್ಸಿನಲ್ಲಿ ವಿಧವೆಯಾದ ಹಿಂದೂ ಹೆಣ್ಣು ಮಗಳು ಮಾಧವಿಯ ಕಥೆ ಇದು. ನಡುವೆ ಆಕೆಗೆ ಪ್ರೇಮದ ಭಾವನೆಗಳು ಒಬ್ಬ ಗಂಡಸಿನ ಬಗ್ಗೆ ಮೂಡಿದರೂ ಕೊನೆಗೆ ಆಕೆ ವಿಧವೆಯಾಗಿಯೇ ಉಳಿದು ಬಿಡುತ್ತಾಳೆ. ಅವಳ ಬಗ್ಗೆ ಸಹಾನುಭೂತಿ ಇದೆ.

'ದತ್ತಾ' ಒಂದು ನಿರ್ದುಷ್ಟವಾದ ಕಲಾಕೃತಿ. ಅದರಲ್ಲಿಯ ಸಂಭಾಷಣೆ ಆಕರ್ಷಕವಾದುದು. ಕಥಾರಚನೆ ಕೂಡ ನಿರ್ದುಷ್ಟವಾದುದು. ಪಾತ್ರಗಳ ಮನಸ್ಸನ್ನು ಒಳಹೊಕ್ಕು ಚಿತ್ರಿಸುವುದನ್ನು ಇಲ್ಲಿ ಕಾಣುತ್ತೇವೆ. ಶಾಲೆಯಲ್ಲಿ ಓದುವ ಮೂವರು ಆತ್ಮೀಯ ಸ್ನೇಹಿತರು ಮುಂದೆ ಅವರು ದೊಡ್ಡವರಾದ ಮೇಲೆ ಏನೇನಾದರೂ ಎಂಬುದನ್ನು ತೋರಿಸಲಾಗಿದೆ. ಶರಶ್ಚಂದ್ರರು ಕಥೆ ಹೇಳುವ, ಸಂಭಾಷಣೆಗಳನ್ನು ಕಟ್ಟುವ ಕೌಶಲವನ್ನು ಸಿದ್ಧಪಡಿಸಿಕೊಂಡವರು. ಈ ಮೂವರ ಬದುಕನ್ನು ಕಾದಂಬರಿಕಾರರು ಕೌಶಲಪೂರ್ಣವಾಗಿ ಕಟ್ಟುತ್ತಾ ಹೋಗುತ್ತಾರೆ. ಒಬ್ಬ ಐಶ್ವರ್ಯವಂತನಾದರೆ, ಇನ್ನೊಬ್ಬ ಯಶಸ್ಸನ್ನು ಕಂಡರೆ, ಮಗದೊಬ್ಬ ಬ್ರಹ್ಮಸಮಾಜಕ್ಕೆ ಪರಿವರ್ತನೆಯಾಗುತ್ತಾನೆ. ಬ್ರಹ್ಮ ಸಮಾಜದ ಪ್ರಭಾವ ಬಂಗಾಳದಲ್ಲಿ ಮಾತ್ರವಲ್ಲದೆ, ಇಡೀ ಭಾರತದಲ್ಲೇ ಪ್ರಭಾವಯುತವಾದ

ಒಂದು ಧಾರ್ಮಿಕ ಸಂಸ್ಥೆಯಾಗಿತ್ತು. ಇಲ್ಲಿ ಮೂರನೆಯವನಾದ ಜಗದೀಶ ಹಿಂದೂವಾಗಿಯೇ ಉಳಿದು ಕೆಟ್ಟ ಸಹವಾಸಗಳಿಗೆ ಬಿದ್ದು ಹಾಳಾಗಿ ನಿಧನ ಹೊಂದುತ್ತಾನೆ. ಇನ್ನೊಬ್ಬ ಸ್ನೇಹಿತ ಬನಮಾಲಿ ತನ್ನ ಮಗಳು ವಿಜಯಳನ್ನು ಜಗದೀಶನ ಮಗ ನರೇಂದ್ರನಿಗೆ ಕೊಟ್ಟು ಮದುವೆ ಮಾಡುವುದಾಗಿ ಹೇಳಿ ಸಾಯುತ್ತಾನೆ.

ಮುಂದೆ ವಿಜಯಾ ನರೇಂದ್ರನನ್ನು ಸಂಧಿಸಿ ಪ್ರೇಮ ಮುಂದುವರಿಯುತ್ತದೆ. ಆದರೆ ನರೇಂದ್ರ ನಳಿನಿ ಎಂಬ ಮತ್ತೊಬ್ಬ ಹುಡುಗಿಯನ್ನು ಪ್ರೀತಿಸುತ್ತಿದ್ದಾನೆಂಬ ಸಂಶಯ ಆಕೆಗೆ ಬರುತ್ತದೆ. ಆದರೆ ಅದು ಸುಳ್ಳು ಎಂದು ಗೊತ್ತಾಗಿ ಕೊನೆಗೆ ನರೇಂದ್ರ ಮತ್ತು ವಿಜಯಾಳ ಮದುವೆಯಾಗುತ್ತಾ, ಶರಶ್ಚಂದ್ರರು ಈ ಕಾದಂಬರಿಯಲ್ಲಿ ವಿಜಯಾಳ ಇಚ್ಛಾಶಕ್ತಿ, ನರೇಂದ್ರನ ಮನಸ್ಸಿನ ಔದಾರ್ಯ ಗುಣವನ್ನು ಸಮರ್ಥವಾಗಿ ಹಿಡಿದಿಟ್ಟಿದ್ದಾರೆ.

ಶರಶ್ಚಂದ್ರರ ತನ್ನ ವಸ್ತುವಿನ ಯೋಗ್ಯತೆಯಿಂದಲೇ ಅತ್ಯಂತ ಜನಪ್ರಿಯತೆಯನ್ನು ಉಳಿಸಿಕೊಂಡು ಬಂದಿರುವ ಕಾದಂಬರಿಯೆಂದರೆ 'ದೇವದಾಸ'. ಇದು ಅನೇಕ ಭಾಷೆಗಳಿಗೆ ಭಾಷಾಂತರವಾಗಿದ್ದು ಜನಪ್ರಿಯತೆಯನ್ನು ಪಡೆದಿದೆ. ಜೊತೆಗೆ ಅನೇಕ ಭಾಷೆಗಳಲ್ಲಿ ಚಲನಚಿತ್ರವಾಗಿಯೂ ಪ್ರಸಿದ್ಧಿಯನ್ನು ಪಡೆದಿದೆ. ಪಾರ್ವತಿ ಮತ್ತು ದೇವದಾಸರ ಬಾಲ್ಯಜೀವನದಿಂದ ಯೌವನದ ಕ್ಷಣಗಳವರೆಗೆ ಕಟ್ಟಿಕೊಂಡ ಒಂದು ರಮ್ಯ ಪ್ರಧಾನವಾದ ಕಾದಂಬರಿಯಾಗಿದೆ. ದೇವದಾಸ ಮತ್ತು ಪಾರ್ವತಿ ಇಬ್ಬರೂ ಪರಸ್ಪರ ಪ್ರೀತಿಯಲ್ಲಿ ತೊಡಗುತ್ತಾರೆ. ಸಾಮಾಜಿಕ ಅಡೆತಡೆಗಳ ಮೂಲಕ ಕೊನೆಗೆ ಪ್ರೀತಿಯು ಮದುವೆಯಾಗಿ ಸಫಲತೆಯನ್ನು ಕಾಣುತ್ತದೆ. ಈ ಪ್ರೇಮಿಗಳಿಬ್ಬರ ಬಗ್ಗೆ ಶರಶ್ಚಂದ್ರರಿಗೆ ಪ್ರೀತಿ, ಸಹಾನುಭೂತಿ ಇದೆ. ತನ್ನ ಪತಿ ಹಾಗೂ ಆತನ ಸಂಬಂಧಿಕರ ವಿಷಯದಲ್ಲಿ ಮಾಡಬೇಕಾದ ಕರ್ತವ್ಯಗಳೆಲ್ಲವನ್ನೂ ಪಾರ್ವತಿ ನಿರ್ವಹಿಸುತ್ತಾಳೆ. ದೇವದಾಸನಲ್ಲಿ ಆಕೆಯ ಪ್ರೀತಿ ಮಡುಗಟ್ಟಿ ನಿಲ್ಲುತ್ತದೆ. ಪರಿಶುದ್ಧವಾಗಿಯೂ ಅದು ಪ್ರಕಟವಾಗುತ್ತದೆ. ಪಾರ್ವತಿಯ ಮದುವೆ ದೇವದಾಸನ ಬದುಕಿನಲ್ಲಿ ಅಸಾಧಾರಣವಾದ ಪರಿಣಾಮವನ್ನುಂಟು ಮಾಡುತ್ತದೆ.

ದೇವದಾಸನ ಬದುಕಿನಲ್ಲಿ ಮಧ್ಯೆ ಘಟಿಸಿದ ಕೆಲವು ಅವಾಂತರಗಳಿಂದಾಗಿ ಅವನ ಪತ್ನಿ ಪಾರ್ವತಿ ಮಾತ್ರ ಎಂದೂ ನಿರಾಶೆಯನ್ನು ತಾಳುವುದಿಲ್ಲ. ಆಕೆ ಮೊದಲಿನಂತೆಯೇ ಅವನಲ್ಲಿ ತನ್ನ ಪ್ರೀತಿಯ ಅಕ್ಷಯಪಾತ್ರವನ್ನು ನಿರ್ವಹಿಸುತ್ತಾಳೆ. ಆದರೆ ಮುಂದೆ ಬದಲಾದ ತನ್ನ ಬದುಕಿನ ನೆನಪಿನಿಂದ ಉತ್ಸವವನ್ನು ಕಳೆದುಕೊಂಡು ತನ್ನ ನಿರಾಶೆಯನ್ನು ಮರೆಯಲು ಕುಡಿತದ ಮೊರೆ ಹೋಗುತ್ತಾನೆ. ಅದರಿಂದ ಆತ ಚಂದ್ರಮುಖಿ ಎಂಬ ಪತಿತೆಯ ಜೊತೆ ಸಂಬಂಧ ಹೊಂದುತ್ತಾನೆ. ಚಂದ್ರಮುಖಿ ಶರಶ್ಚಂದ್ರರ ಕಲ್ಪನೆಯ ಪಾತ್ರ ಇರಬೇಕು. ದೇವದಾಸನೊಡನೆ ಸಂಬಂಧ ಹೊಂದಿದ ನಂತರ ಚಂದ್ರಮುಖಿಯ ಬಾಳಿನಲ್ಲಿ ಬದಲಾವಣೆಯಾಗುತ್ತದೆ. ಆಕೆ ತನ್ನ ವೇಶ್ಯಾವೃತ್ತಿಯನ್ನು ತ್ಯಜಿಸಿ ದೇವದಾಸನಲ್ಲಿಯೇ ಅನುರಕ್ತಳಾಗುತ್ತಾಳೆ. ಅವನಲ್ಲಿ ಆಕೆ ಪ್ರಾಮಾಣಿಕವಾದ ನಿಷ್ಠೆಯನ್ನು ಪ್ರಕಟಿಸುತ್ತಾಳೆ. ಆಗ

ದೇವದಾಸ ತಮಾಷೆಗಾಗಿ, ಪ್ರೀತಿಗಾಗಿ ಆಕೆಯನ್ನು ತನ್ನ ಹೆಂಡತಿ ಪಾರ್ವತಿಯನ್ನು ಕರೆಯುವಂತೆಯೇ ಕರೆಯುತ್ತಾನೆ. ಆದರೆ ಪಾರ್ವತಿ ಇನ್ನೊಬ್ಬನನ್ನು ಮದುವೆಯಾದ್ದರಿಂದ ತನ್ನಲ್ಲಿ ಉಂಟಾದ ನೋವನ್ನು, ದುಃಖವನ್ನು ಆತ ಮರೆಯಲಾರ.

ಕೊನೆಗೆ ದೇವದಾಸ ಚಂದ್ರಮುಖಿಯಿಂದ ಪಾರ್ವತಿ ಇದ್ದ ಊರಿಗೆ ಮರಳುತ್ತಾನೆ. ಅವನಿಗೆ ತಾನು ಇನ್ನು ಬದುಕಲಾರೆ ಅನ್ನಿಸಿದಾಗ ಪಾರ್ವತಿಯ ಬಳಿಗೆ ಬಂದವನು. ಆದರೆ ಅತ ಬಂದ ಎಂಬುದು ಪಾರ್ವತಿಗೆ ಗೊತ್ತಾಗುವ ಮೊದಲೇ ಆತ ತೀರಿಕೊಳ್ಳುತ್ತಾನೆ. ಈ ಘಟನೆಯ ದುರಂತತೆಯನ್ನು ಕಂಡು ಕಾದಂಬರಿಕಾರರೇ ಈ ಕಥಾನಾಯಕ ದೇವದಾಸನಿಗೆ ಸಹಾನುಭೂತಿ ತೋರಿಸುತ್ತಾರೆ. ಕಾದಂಬರಿಯಲ್ಲಿ ಕೆಲವು ಕಡೆ ಅಸಂಬದ್ಧತೆಗಳು, ಅವಲಕ್ಷಣಗಳು, ಅತಿಭಾವುಕತೆಯ ಅಂಶಗಳು ಹಾಗೂ ಭಾವಾತಿರೇಖದ ಕ್ಷಣಗಳೂ ಇವೆ. ಪಾರ್ವತಿಯ ಪಾತ್ರವು ಅನೇಕ ಸಂದಿಗ್ಧತೆಗಳಿಂದ ಕೂಡಿದೆ. ಆಕೆ ಭುವನ ಮೋಹನ ಚೌಧರಿಯೊಡನೆ ಮದುವೆಯಾಗುವ ಮೊದಲು ದೇವದಾಸ ಬಂದು ಆಕೆಯನ್ನು ತನ್ನನ್ನು ಮದುವೆಯಾಗು ಎಂದು ಕೇಳಿಕೊಳ್ಳುತ್ತಾನೆ. ಆಗ ಆಕೆಗೆ ಸಂದಿಗ್ಧ ಸ್ಥಿತಿ ಎದುರಾಗುತ್ತದೆ. ಆಗ ಆಕೆ ಚೌಧರಿಯನ್ನು ತಿರಸ್ಕರಿಸಿದ್ದಳು. ಅದಕ್ಕೆ ಆಕೆಯಲ್ಲಿ ಆಗ ಯಾವ ಪಶ್ಚಾತ್ತಾಪ ಕೂಡ ಇರಲಿಲ್ಲ. ಈ ಎಲ್ಲಾ ಅನೇಕ ಯೋಜನೆಯಲ್ಲಿ ದೌರ್ಬಲ್ಯಗಳಿದ್ದರೂ ಕಥಾ ನಿರೂಪಣೆಯಲ್ಲಿ ತುಂಬಾ ಪರಿಣಾಮಕಾರಿಯಾದ ಕಾದಂಬರಿಯಾಗಿದೆ. "'ದೇವದಾಸ' ಕಾದಂಬರಿಯಲ್ಲಿ ಹೋರಾಟವನ್ನೊಲ್ಲದ ದೌರ್ಬಲ್ಯವು ದುರ್ವಸನಗಳಲ್ಲಿ ನಿರತವಾಗಿ ಸ್ವಾನುಕಂಪದಲ್ಲಿ ಪರ್ಯಾವಸಾನವಾಗುವುದನ್ನು ಕಾಣಬಹುದಾಗಿದೆ. ವೇಶ್ಯೆಯಾದ ಚಂದ್ರಮುಖಿ ದೇವದಾಸನಂಥ ದುರ್ಬಲ ವ್ಯಕ್ತಿಯ ವೃತ್ತಿಶೀಲ ಸಹವಾಸದಿಂದ ಪವಿತ್ರಳಾದಂತೆ ಸೂಚಿಸಿರುವುದಂತೆ ಭಾವುಕತೆಯ ಪರಕಾಯ ಪ್ರವೇಶವೇ ಆಗಿರುತ್ತದೆ. ಕಾದಂಬರಿಯ ಕೊನೆಯಲ್ಲಿ ಶರಶ್ಚಂದ್ರರೇ ಉತ್ತಮ ಪುರುಷದಲ್ಲಿ ದೇವದಾಸನಿಗಾಗಿ ಕಂಬನಿಗರೆದು ಸ್ವಾನುಕಂಪದ ಉಪಸಂಹಾರ ಮಾಡಿರುತ್ತಾರೆ."[೨]

ದೇವದಾಸನ ಬಗ್ಗೆ ಕಾದಂಬರಿಕಾರರಿಗೆ ಅನುಕಂಪವಿದೆ. ದೇವದಾಸ ಕುಡುಕ, ವೇಶ್ಯೆ ಮನೆಗೆ ಹೋಗುತ್ತಾನೆ. ಆತ ಯಾವ ಬಗೆಯ ಸಂಯಮವನ್ನೂ ತೋರಿಸುವುದಿಲ್ಲ. ಹೀಗಿದ್ದರೂ ಕಾದಂಬರಿಕಾರರು ದೇವದಾಸನಲ್ಲಿ ಒಂದು ಆಳವಾದ ಭಾವನೆಯನ್ನು ಪ್ರಕಟಿಸುತ್ತಾರೆ. ವೇಶ್ಯೆ ಪತಿತಳಾಗಿದ್ದರೂ ಆಕೆಯ ಹೃದಯದಲ್ಲಿ ನೈಜವಾದ ಪ್ರೀತಿಯ ಭಾವನೆ ಉಕ್ಕಿದಾಗ ಶರಶ್ಚಂದ್ರರು ಅಂತಹವಳ ಬಗೆಯಲ್ಲಿ ತೋರುವ ಅನುಕಂಪ ಇಲ್ಲಿಯ ಕಥನದ ವೈಶಿಷ್ಟ್ಯವಾಗಿದೆ; ಮೌಲಿಕವಾದ ಜೀವನ ದೃಷ್ಟಿಯೂ ಇದರಲ್ಲಿದೆ. ತೀವ್ರವಾದ ಭಾವನೆಗಳನ್ನು ಮನಮುಟ್ಟುವಂತೆ ಕಾದಂಬರಿಕಾರರು ಇಲ್ಲಿ ನಿರೂಪಿಸುವ ಸಾಮರ್ಥ್ಯವನ್ನು ಕಾಣಿಸಿದ್ದಾರೆ. ಈ ಎಲ್ಲಾ ಅಂಶಗಳಿಂದ 'ದೇವದಾಸ' ಶರಶ್ಚಂದ್ರರ ಒಂದು ಪ್ರಖ್ಯಾತ ಜನಪ್ರಿಯ ಕಾದಂಬರಿಯಾಗಿದೆ. ಈ ಕಾದಂಬರಿಯನ್ನು ಗುರುನಾಥ ಜೋಶಿ ಅವರು ಕನ್ನಡಕ್ಕೆ ಸರಳವಾಗಿ, ನೇರವಾಗಿ ಅನುವಾದಿಸಿದ್ದಾರೆ.

---

೨. ಡಿ.ವಿ.ಕೆ. ಮೂರ್ತಿ, ಜೀವನ ಮೌಲ್ಯಗಳು ಮತ್ತು ಸಾಹಿತ್ಯ, ಡಿ.ವಿ.ಕೆ.ಮೂರ್ತಿ ಪ್ರಕಾಶನ, ಮೈಸೂರು, ೨೦೦೮, ಪುಟ ೭೧.

ಶರಶ್ಚಂದ್ರರ ಪ್ರಸಿದ್ಧ ಕಾದಂಬರಿಗಳಲ್ಲಿ 'ಶ್ರೀಕಾಂತ', 'ಚರಿತ್ರಹೀನ' ಮತ್ತು 'ಗೃಹದಾಹ' ಕಾದಂಬರಿಗಳು ಬಹು ಪ್ರಸಿದ್ಧವಾದವು. ಶ್ರೀಕಾಂತ ಶರಶ್ಚಂದ್ರರ ಆತ್ಮಕಥೆಯೇ ಕಾದಂಬರಿ ರೂಪದಲ್ಲಿ ಬಹು ಸಂಪುಟಗಳಲ್ಲಿ ಪ್ರಕಟವಾಗಿದೆ. 'ಚರಿತ್ರಹೀನ' ಇಬ್ಬರು ಅದ್ಭುತ ಕಥಾನಾಯಿಕೆಯರ ಪಾತ್ರ ದರ್ಶನದ ದೃಷ್ಟಿಯಿಂದ ಒಂದು ಅಸಾಧಾರಣ ಕಾದಂಬರಿಯಾಗಿ ರೂಪುಗೊಂಡಿದೆ.

'ಚರಿತ್ರಹೀನ' ಕಾದಂಬರಿಯಲ್ಲಿ ಬರುವ ಸಾವಿತ್ರಿ ಒಂದು ಊಟದ ಮನೆಯಲ್ಲಿ ಕೆಲಸದವಳು. ಆಕೆ ತನ್ನ ಹತ್ತಿರದ ಸಂಬಂಧಿಕನೊಬ್ಬ ಮದುವೆಯಾಗುವುದಾಗಿ ಒಲಿಸಿ ಕರೆದುಕೊಂಡು ಬಂದು ಕೈಬಿಟ್ಟು ಬಿಡುತ್ತಾನೆ. ಆಗ ಆಕೆ ಒಬ್ಬಳು ಬ್ರಾಹ್ಮಣ ವಿಧವೆ ಎಂದು ಗೊತ್ತಾಗುತ್ತದೆ. ಆಗ ಆಕೆ ಪತಿತಳು. ಈಗ ಆಕೆ ಅವನ ಜೊತೆ ಊರುಬಿಟ್ಟು ಓಡಿ ಬಂದದ್ದರಿಂದ ಮತ್ತೆ ಆಕೆ ಊರಿಗೆ ಮರಳಲು ಆಕೆಗೆ ಮುಖವಿಲ್ಲ. ಕೊನೆಗೆ ಆಕೆ ಕಲ್ಕತ್ತದಲ್ಲಿ ಮನೆಗೆಲಸದಂತಹ ಕೀಳು ವೃತ್ತಿಯನ್ನು ಹಿಡಿಯುತ್ತಾಳೆ. ಆಗ ಇಲ್ಲಿ ಸತೀಶ ಎಂಬ ವ್ಯಕ್ತಿಯನ್ನು ಪ್ರೀತಿಸುತ್ತಾಳೆ. ಆದರೆ ಸತೀಶ ಅವಳಿಂದ ದೂರವಾಗುತ್ತಾನೆ. "ಈ ದಿನ ನನಗೆ ಈ ಮಾತುಗಳನ್ನೆಲ್ಲ ಕೇಳುವುದಕ್ಕೆ, ಅರ್ಥಮಾಡಿಕೊಳ್ಳುವುದಕ್ಕೆ ನನ್ನಲ್ಲಿ ಧೈರ್ಯ, ಶಕ್ತಿಗಳಿಲ್ಲ ಸಾವಿತ್ರಿ!"[೪] ಆಕೆ ಪತಿತೆ, ಬಹಿಷ್ಕೃತೆ ಎಂಬ ಕಾರಣದಿಂದ ಆತ ತನ್ನ ಮಡಿವಂತಿಕೆಗೆ ಕಟ್ಟುಬಿದ್ದು ಇನ್ನೊಬ್ಬಳ ಸಂಪ್ರದಾಯವಾದಿ ಹುಡುಗಿಯ ಜೊತೆ ಮದುವೆಯಾಗುತ್ತಾನೆ. ಅದರಿಂದ ಸಾವಿತ್ರಿಗೆ ಕಾದಂಬರಿಕಾರರು ಉಪೇಂದ್ರನಂತಹ ಉದಾರವಾದಿ ಸ್ವಭಾವದ ವ್ಯಕ್ತಿಯನ್ನು ಸೃಷ್ಟಿಸುತ್ತಾರೆ. ಉಪೇಂದ್ರ ಆಕೆಯನ್ನು ಒಪ್ಪಿಕೊಳ್ಳುತ್ತಾನೆ.

ಈ 'ಚರಿತ್ರಹೀನ' ಕಾದಂಬರಿಯ ಇನ್ನೊಬ್ಬಳು ನಾಯಕಿ ಕಿರಣ್ಮಯಿ. ಈಕೆ ಸಾವಿತ್ರಿ ಪಾತ್ರಕ್ಕಿಂತ ಭಿನ್ನ ವ್ಯಕ್ತಿತ್ವದವಳು. ಚೆನ್ನಾಗಿ ಓದಿದವಳು. ಆದರೆ ಪುಸ್ತಕದ ಕ್ರಿಮಿಯಾದ ತನ್ನ ಗಂಡನ ಪ್ರೀತಿಯಿಂದ ವಂಚಿತಳಾಗಿ ನೊಂದವಳು. ಆದರೆ ಸಾಂಸ್ಥಿಕ ಆಚಾರ, ವಿಚಾರ, ವಿಧಿ–ನಿಷೇಧ ನಂಬಿಕೆಗಳಲ್ಲಿ ಮೌಲ್ಯಗಳ ಪೊಳ್ಳುತನವನ್ನು ಗುರುತಿಸಿ ಅವುಗಳ ವಿರುದ್ಧ ಬಂಡಾಯವೇಳುವ ಪ್ರವೃತ್ತಿಯವಳು ಆಕೆ. ಅತೃಪ್ತವಾದ ಆಕಾಂಕ್ಷೆಗಳನ್ನು ಹೊಂದಿದ್ದು ಲೈಂಗಿಕ ಆಸಕ್ತಿಯವಳಾಗಿದ್ದಾಳೆ. ಆಕೆ ಸಾಮಾನ್ಯ ಹೆಂಗಸಿಗಿಂತ ಭಿನ್ನ ಮನೋಭಾವದವಳು. ಧರ್ಮ, ನೀತಿಯ ಬಂಧನಗಳಿಗೆ ಒಳಗಾಗದವಳು. ಅವಳ ನಂಬಿಕೆಯೇ ಅವಳಿಗೆ ಧರ್ಮ. ಆಗ ಆಕೆ ಕಾಯಿಲೆ ಬಿದ್ದ ತನ್ನ ಗಂಡನನ್ನು ಶುಶ್ರೂಷೆ ಮಾಡಲು ಬಂದ ತನ್ನ ಗಂಡನ ಸ್ನೇಹಿತ ಡಾಕ್ಟರ್ ಉಪೇಂದ್ರನನ್ನೇ ಪ್ರೀತಿಸಲು ಆಸೆ ಪಡುತ್ತಾಳೆ. ಆದರೆ ಆಕೆಗೆ ಉಪೇಂದ್ರನಿಂದ ಸಿಗುವುದು ಬರೀ ತಿರಸ್ಕಾರ ಮಾತ್ರ

ಅದಾದ ಮೇಲೆ ಉಪೇಂದ್ರನ ಹೆಂಡತಿಯಿಂದ ಪಾತಿವ್ರತ್ಯದ ಪಾಠವನ್ನು ಕಲಿಯಬೇಕೆಂದುಕೊಳ್ಳುತ್ತಾಳೆ. ಆದರೆ ಅಷ್ಟರಲ್ಲಿ ಕಿರಣ್ಮಯಿಯ ಗಂಡ ಸಾಯುತ್ತಾನೆ. ಆಮೇಲೆ

---

೪. ಶರಶ್ಚಂದ್ರ ಚಟರ್ಜಿ, ಚರಿತ್ರಹೀನ, (ಅನು) ಕೆ. ವೀರಭದ್ರ, ಡಿ.ವಿ.ಕೆ. ಮೂರ್ತಿ ಪ್ರಕಾಶನ, ಮೈಸೂರು, ೧೯೬೯, ಪುಟ ೪೮೨.

ತಾನು ಉಪೇಂದ್ರನ ಮೇಲೆ ಹೊಂದಿದ್ದ ಪ್ರೀತಿಯಿಂದ ಮತ್ತೆ ಅವನನ್ನು ಪ್ರೀತಿಸಲು ಆಲೋಚಿಸುತ್ತಾಳೆ. ಆದರೆ ಅವಳ ಆಸೆ ನೆರವೇರದು. ಕೊನೆಗೆ ಉಪೇಂದ್ರನ ಮಗನನ್ನು ಒಲಿಸಿಕೊಂಡು ಅವನ ಮೇಲೆ ತನ್ನ ಸೇಡನ್ನು ತೀರಿಸಿಕೊಳ್ಳಬೇಕೆಂದುಕೊಳ್ಳುತ್ತಾಳೆ. ಆಕೆಯ ಈ ಸಂಚು ಅವಳಿಗೇ ತಿರುಗುಮುರುಗಾಗುತ್ತದೆ. ಆಕೆಗೆ ಮುಂದೆ ಬುದ್ಧಿಭ್ರಮಣೆಯಾಗಿ ತನ್ನ ಬದುಕಿಗೆ ತಾನೇ ದುರಂತತೆಯನ್ನು ತಂದುಕೊಳ್ಳುತ್ತಾಳೆ. ಅವಳ ಬದುಕಿನ ನೂರಾರು ನೆನಪುಗಳು ಅವಳನ್ನು ಕಾಡತೊಡಗುತ್ತವೆ. ಕಥಾರಚನೆ ಸುಮಾರಾಗಿದ್ದರೂ ಕಿರಣ್ಮಯಿಯ ಪಾತ್ರದರ್ಶನ ಕಾದಂಬರಿಯಲ್ಲಿ ಮೌಲಿಕವಾಗಿದೆ. ಸುರೇಶನ ಅನುಭೂತಿ ವ್ಯಾಪಕ ಮತ್ತು ವಿಶಾಲವಾದುದು. ಆದರೆ ಇಲ್ಲಿ ಸಾವಿತ್ರಿ ಮತ್ತು ಕಿರಣ್ಮಯಿಯ ಕಥೆಗೂ ಯಾವ ಸಂಬಂಧವೂ ಇಲ್ಲ. ಈ ಎರಡು ಸ್ತ್ರೀ ಪಾತ್ರಗಳನ್ನು ಶರಚ್ಚಂದ್ರರು ಸ್ತ್ರೀವಾದಿ ನೆಲೆಯಿಂದ ಗ್ರಹಿಸಿರುವುದು ಎದ್ದು ಕಾಣುವ ಅಂಶವಾಗಿದೆ. ಒಟ್ಟಾರೆ ಈ ಎರಡೂ ಸ್ಮರಣೀಯವಾದ ಪಾತ್ರಗಳನ್ನು ಶರಚ್ಚಂದ್ರರು ನಿರ್ಮಿಸಿದ್ದಾರೆ. ಇದನ್ನು ಕನ್ನಡದಲ್ಲಿ ಮೂವರು ಲೇಖಕರು ಅನುವಾದಿಸಿದ್ದಾರೆ.

ಶರಚ್ಚಂದ್ರರು ನಿರ್ಮಿಸಿದ ಕಾದಂಬರಿ ಸಾಹಿತ್ಯದಲ್ಲಿ ಅವರ 'ಗೃಹದಾಹ' ಒಂದು ಪರಿಪೂರ್ಣವಾದ ಸಾಧನೆಯ ಅಭಿವ್ಯಕ್ತಿಗೆ ಪ್ರತೀಕವಾಗಿದೆ. ಇದು ತಮ್ಮ 'ಅತ್ಯುತ್ತಮ ಕೃತಿ' ಎಂದು ಅವರೇ ಭಾವಿಸಿದ್ದರೆಂದು ಹೇಳಲಾಗಿದೆ. ಇದರ ಕಥಾರಚನೆ ಸ್ಪಷ್ಟವಾಗಿದೆ, ಶೈಲಿ ಸರಳವಾಗಿದೆ ಎಂದು ವಿಮರ್ಶಕರು ಹೇಳಿದ್ದಾರೆ. ಇದನ್ನು ಮೇವುಂಡಿ ಮಲ್ಲಾರಿ ಅವರು ಕನ್ನಡಕ್ಕೆ ಸೊಗಸಾಗಿ ಅನುವಾದಿಸಿದ್ದಾರೆ. ಈ ಕಾದಂಬರಿಯ ಕಥಾನಾಯಕಿ ಅಚಲಾ. ಪ್ರೀತಿಯ ಭಾವನೆಯ ಒಳಮನಸ್ಸುಗಳ ತೊಡಕು, ನಿಗೂಢ, ವಿರೋಧಗಳನ್ನು ಚಿತ್ರಿಸುವುದರಲ್ಲಿ ಶರಚ್ಚಂದ್ರರದು ಮೊದಲ ಸಾಧನೆ. ಈ ಸಾಧನೆಯನ್ನು ಈ ಕಾದಂಬರಿಯಲ್ಲಿ ಗುರುತಿಸಬಹುದು. ಶರಚ್ಚಂದ್ರರ ಶ್ರೇಷ್ಠ ಕಾದಂಬರಿಗಳಲ್ಲೊಂದಾದ 'ಗೃಹದಾಹ'ದಲ್ಲಿ ಇಬ್ಬರು ಸ್ನೇಹಿತರಾದ ಮಹಿಮ ಮತ್ತು ಸುರೇಶರ ಕಥೆ ಇದೆ. ಈ ಇಬ್ಬರೂ ಅಚಲಾಳನ್ನು ಪ್ರೀತಿಸುತ್ತಾರೆ. ಅಚಲಾ ಇಬ್ಬರಲ್ಲಿಯೂ ಅನುರಕ್ತಳಾಗುತ್ತಾಳೆ. ಒಬ್ಬ ಹೆಂಗಸು ಏಕಕಾಲಕ್ಕೆ ಇಬ್ಬರನ್ನು ಪ್ರೀತಿಸಬಹುದೆ ಎಂಬ ಅನೇಕ ಪ್ರಶ್ನೆಗಳನ್ನು ಈ ಕಾದಂಬರಿ ಹುಟ್ಟಿಹಾಕುತ್ತದೆ. ಅಚಲಾಳ ಪಾತ್ರ ಇಂತಹ ಪ್ರಶ್ನೆಗಳನ್ನು ವಾಚಕರಿಗೆ ಒಡ್ಡುತ್ತದೆ. ಆಕೆಯ ಮನೆಗೆ ಯಾರಿಂದಲೋ ಬೆಂಕಿ ಬಿದ್ದು ಅದು ಸುಟ್ಟು ಹೋಗುತ್ತದೆ. ಆಕೆಗೆ ಅನೇಕ ಅರ್ಥವಾಗದ ಗೊಂದಲಗಳ ನಡುವೆಯೇ ಅವಳ ಮದುವೆ ಮಹಿಮನೊಡನೆ ಗೊತ್ತಾಗುತ್ತದೆ.

ಮಹಿಮ ಸ್ಥಿರ ಸ್ವಭಾವದ ವ್ಯಕ್ತಿ. ಕ್ಷೋಭೆಗಳಿಗೆ ಸಿಲುಕದವನು. ಮಿತಭಾಷಿ. ಮದುವೆ ನಡೆಯುವ ಮೊದಲು ಆಕೆಯನ್ನು ಕಂಡ ಅವನ ಸ್ನೇಹಿತ ಸುರೇಶ ಆಕೆಯನ್ನು ಪ್ರೀತಿಸತೊಡಗುತ್ತಾನೆ. ಆದರೆ ಸುರೇಶ ವೇಗಪರ ಸ್ವಭಾವದ ವ್ಯಕ್ತಿ; ಅವನಲ್ಲಿ ಮುಂದಾಲೋಚನೆ ಕಡಿಮೆ. ದುಡುಕುವ ಸ್ವಭಾವದವ, ಮಾತುಗಾರ. ಇವರಿಬ್ಬರದೂ ತದ್ವಿರುದ್ಧವಾದ ಸ್ವಭಾವಗಳು. ಆದರೆ ಸುರೇಶ ಅಚಲಾಳಲ್ಲಿ ಆಳವಾದ, ತೀವ್ರವಾದ ಪ್ರೀತಿಯನ್ನು ತೋರಿಸುತ್ತಾನೆ. ಆತನ ಸ್ನೇಹದ್ರೋಹ ಅನಾಗರಿಕ ಸಮಾಜದ್ದು. ಅದು ಅಚಲಾಳಿಗೂ ಜಿಗುಪ್ಸೆ ತರುತ್ತದೆ. ಆದರೆ

ಮುರಿದು ಹಾಕಬೇಕು ಈ ಮದುವೆಯನ್ನು ಎಂದು ಕಾಯುತ್ತಿದ್ದ ಸುರೇಶನಿಗೆ ಅಚಲಾ ಬಿಗಿಯಾಗಿ ಹಠ ಹಿಡಿದಿದ್ದರಿಂದ ಆಕೆಯ ಮದುವೆ ಮಹಿಮನೊಡನೆ ಜರುಗುತ್ತದೆ. ಆದರೆ ಅಚಲಾ ಮಹಿಮನ ಜೊತೆ ಅವನ ಹಳ್ಳಿಯಲ್ಲಿ ಆಕೆ ಸುಖವಾಗಿಲ್ಲವೆಂದು ಭಾವಿಸಿ ಸುರೇಶ ಅವರ ಮಧ್ಯೆ ಪ್ರವೇಶಿಸುತ್ತಾನೆ. ಸುರೇಶನ ಅವಿವೇಕವನ್ನು ಯಾರೂ ಕ್ಷಮಿಸಲಾರರು. ಮಹೇಶ ಕಾಯಿಲೆ ಬಿದ್ದು ಹಾಸಿಗೆ ಹಿಡಿಯುತ್ತಾನೆ. ಆಗ ಸುರೇಶ ಸ್ನೇಹಿತನ ನೋಡುವ ನೆಪದಲ್ಲಿ ಮಹೇಶನ ಮನೆಗೆ ಬರುತ್ತಾನೆ. ಒಮ್ಮೆ ಮೂವರೂ ಪ್ರವಾಸದಲ್ಲಿದ್ದಾಗ ಸುರೇಶ ಅಚಲಾಳನ್ನು ಬಲತ್ಕಾರವಾಗಿ ಸಂಭೋಗಿಸುತ್ತಾನೆ. ಅವನ ವಿಶ್ವಾಸ ಘಾತಕತನಕ್ಕೆ ಆಕೆ ಹೇಸಿಗೆ ಪಟ್ಟುಕೊಳ್ಳುತ್ತಾಳೆ.

ಕೊನೆಗೆ ಅಚಲಾ ಮತ್ತು ಸುರೇಶನೆ ಗಂಡ ಹೆಂಡತಿ ಎಂದು ಹೇಳಿಕೊಂಡು ಆಸ್ಪತ್ರೆಯಲ್ಲಿ ಮಹೇಶನಿಗೆ ಶುಶ್ರೂಷೆ ಮಾಡುತ್ತಾರೆ. ಆದರೆ ಸಮಾಜದ ಕಣ್ಣಲ್ಲಿ ಅಚಲಾ ಮತ್ತು ಮಹೇಶ ಇಬ್ಬರೂ ಗಂಡ ಹೆಂಡತಿ ಎಂದು ಗೊತ್ತು. ಆಕೆ ಸುರೇಶನನ್ನು ಎಷ್ಟೇ ದ್ವೇಷಿಸಿದರೂ, ತಿರಸ್ಕರಿಸಿದರೂ ಅವನ ಆಕರ್ಷಣೆ ಅವಳ ಮನಸ್ಸಿನಲ್ಲಿ ಅಂತರ್ಗತವಾಗಿರುತ್ತದೆ. ಹಾಗಾಗಿ ಅವಳ ಭಾವನೆಯಲ್ಲಿ ಅಂತರ್ ವಿರೋಧವಿದೆ. ಆಕೆಗೆ ಆಕೆಯ ಬದುಕೇ ಒಂದು ದೊಡ್ಡ ಸಮಸ್ಯೆಯಾಗುತ್ತದೆ. ಕೊನೆಗೆ ಸುರೇಶನೆ ಸಾಯುತ್ತಾನೆ. ಆಗ ಅವಳು ಮನಸಾರೆ ತಾನು ಅವನು ಬದುಕಿದ್ದಾಗ ಅವನನ್ನು ಸ್ವೀಕರಿಸಲಾಗಲಿಲ್ಲ. ಸತ್ತಾಗಲೂ ಅವನನ್ನು ತಿರಸ್ಕರಿಸಲಾಗಲಿಲ್ಲ ಎಂದುಕೊಳ್ಳುತ್ತಾಳೆ. ಕಾದಂಬರಿಕಾರರು ತಮ್ಮ ಇತರೆ ಕಾದಂಬರಿಗಳ ನಾಯಕಿಯರಾದ ಶುಭದಾ, ರಾಜಲಕ್ಷ್ಮಿ, ರಮಾ ಅವರ ಪಾತ್ರಗಳಿಗಿಂತ ಭಿನ್ನವಾಗಿ ಅಚಲಾಳ ಪಾತ್ರವನ್ನು ಚಿತ್ರಿಸಿದ್ದಾರೆ.

## ೯.೪. ಶರಚ್ಚಂದ್ರರ ಕಾದಂಬರಿಗಳಲ್ಲಿ ಸಮಸ್ಯೆ ಮತ್ತು ತಾತ್ವಿಕ ಚರ್ಚೆ

ಸಮಸ್ಯೆ ಮತ್ತು ತಾತ್ವಿಕ ಚರ್ಚೆ ವಿಷಯಗಳಿಗೆ ಸಂಬಂಧಿಸಿದಂತೆ ಶರಚ್ಚಂದ್ರರ 'ಪಥೇರ್‌ದಾಬಿ' ಮತ್ತು 'ಶೇಷ ಪ್ರಶ್ನೆ' ಎಂಬ ಎರಡು ಪ್ರಮುಖ ಕಾದಂಬರಿಗಳ ಬಗ್ಗೆ ಇಲ್ಲಿ ಪ್ರಸ್ತಾಪ ಮಾಡಬಹುದಾಗಿದೆ. ಇವು ಕೂಡ ಕನ್ನಡಕ್ಕೆ ಅನುವಾದವಾಗಿವೆ. ಈ ಕಾದಂಬರಿಗಳ ವಸ್ತುಗಳು ಶರಚ್ಚಂದ್ರರ ಇತರೆ ಕಾದಂಬರಿಗಳಿಗಿಂತ ಭಿನ್ನ. ಇಲ್ಲಿ ವಿಚಾರ, ಚರ್ಚೆಗೆ ಹೆಚ್ಚು ಆದ್ಯತೆ ಇದೆ. ಇದು ಶರಚ್ಚಂದ್ರರಲ್ಲಿ ಆದ ಮಹತ್ವದ ಬದಲಾವಣೆ. ಬಂಕಿಮಚಂದ್ರರು 'ಆನಂದಮಠ', 'ದೇವೀ ಚೌಧುರಿರಾಣಿ' , 'ಸೀತಾರಾಮ' ಕಾದಂಬರಿಗಳಲ್ಲಿ ಕಥನಕ್ಕಿಂತ ವಿಚಾರ ಪ್ರಣಾಳಿಕೆಗಳಿಗೆ ಹೆಚ್ಚು ಒತ್ತು ಕೊಟ್ಟಿದ್ದು ಗೊತ್ತಿದೆ. ಹಾಗೆಯೇ ರವೀಂದ್ರರು ತಮ್ಮ 'ಗೋರಾ' ಕಾದಂಬರಿಯಲ್ಲಿ ಕಥೆ ಮತ್ತು ವಿಚಾರ – ಚರ್ಚೆ ಎರಡಕ್ಕೂ ಸ್ಥಾನ ನೀಡಿದ್ದರು. ಹಾಗಾಗಿ ಶರಚ್ಚಂದ್ರರ ಆಲೋಚನೆ, ಚರ್ಚೆಗಳು ಆತ್ಮವನ್ನು ಬೆಳಗಬಲ್ಲವು, ಈ ಬೌದ್ಧಿಕ ಚರ್ಚೆಗಳ, ಕಾದಂಬರಿಗಳ ಅಂತರಂಗಕ್ಕೆ, ಕಥನದ ಅಂಶಕ್ಕೆ ಭಂಗವನ್ನೇನೂ ತರುವುದಿಲ್ಲವೆಂದು ಶರಚ್ಚಂದ್ರರು ವಾದಿಸಿದ್ದರು. "ಪ್ರತಿಯೊಂದು ಕಾದಂಬರಿಯಲ್ಲಿ ಕಥಾರಚನೆಯ ಸಮಸ್ಯೆಯೊಂದಲ್ಲದೆ ಬೇರೆಯಾದ ಸಮಸ್ಯೆಗಳು ಭಾವನೆಗಳಿಗೆ, ಬುದ್ಧಿಗೆ, ಸಾಮಾಜಿಕ ವಿಚಾರಗಳಿಗೆ ಸಂಬಂಧಿಸಿದ ಸಮಸ್ಯೆಗಳು ಇರಬಹುದು ಎನ್ನುವುದು ಶರಚ್ಚಂದ್ರರ ಅಭಿಮತವಾಗಿತ್ತು. ಸಮಸ್ಯೆಗಳಿರುತ್ತವೆ ಎನ್ನುವುದಕ್ಕಿಂತ ಅವುಗಳ ನಿರೂಪಣೆ ಯಾವ

ರೀತಿಯಲ್ಲಿ ನಡೆದಿವೆ ಎನ್ನುವುದು ಹೆಚ್ಚಿನ ಮಹತ್ವದ ವಿಷಯ. ಸಮಸ್ಯೆಗಳನ್ನು ಬಹಿರಂಗವಾಗಿ, ಮುಖಾಮುಖಿಯಾಗಿ ಎದುರಿಸಬೇಕಲ್ಲದೆ ಒಳದಾರಿಗಳಿಂದಲ್ಲ ಎನ್ನುತ್ತಿದ್ದರು ಶರಚ್ಚಂದ್ರರು"೫ ಎಂದು ಸೇನ್ ಗುಪ್ತ ಅವರು ದಾಖಲಿಸಿದ್ದಾರೆ.

'ತಾವು ಒಬ್ಬ ಮೂಲತಃ ಕಥೆಗಾರ, ಕಾದಂಬರಿಕಾರ' ಎಂದು ಹೇಳಿಕೊಳ್ಳುತ್ತಿದ್ದ ಶರಚ್ಚಂದ್ರರು ಮೇಲಿನ ಎರಡು ಕಾದಂಬರಿಗಳಲ್ಲಿ ಸಮಸ್ಯೆಯನ್ನು ಹೇಗೆ ನೇರವಾಗಿ, ಬಹಿರಂಗವಾಗಿ ಎದುರಿಸಿದ್ದಾರೆ? 'ಕಲಾಕೃತಿ'ಯಲ್ಲಿ ಬರುವ ಚರ್ಚೆ 'ಪ್ರಬಂಧ'ದಲ್ಲಿ ಬರುವ ಚರ್ಚೆಗಿಂತ ಹೇಗೆ ಭಿನ್ನ? ಕಥಾನಕಗಳ ಮೂಲಕ ಸಮಸ್ಯೆಗಳನ್ನು ಎತ್ತಿದ್ದರೂ ಅವುಗಳಿಗೆ ಲೇಖಕ ಹೇಗೆ ಪರಿಹಾರ ಸೂಚಿಸಬಲ್ಲ? ಪರಿಹಾರಗಳನ್ನು ಸೂಚಿಸುವ ಕೆಲಸ ಸುಧಾರಕನಿಗೆ ಸೇರಿದ್ದಲ್ಲವೆ? ಅದು ಕಾದಂಬರಿಕಾರರನ ಕೆಲಸ ಅಲ್ಲವಲ್ಲ; ಸಮಸ್ಯೆಯ ಪರಿಶೀಲನೆ ಪಾತ್ರ ನಿರ್ಮಿತಿಯಿಂದ ಬೇರೆಯಾಗಿ ನಿಲ್ಲಬಾರದಲ್ಲವೆ? ಪ್ರತಿಪಾದಿಸುವ ವಿಚಾರಗಳು ನಿರ್ಜೀವವಾಗದೆ, ಸಜೀವವಾಗಿ ಮನುಷ್ಯರ ರೂಪ ತಾಳಬೇಕಲ್ಲವೆ? ವಿಚಾರ ತತ್ವಪ್ರಣಾಲಿಗಳನ್ನು, ಪ್ರಚಾರಪರ ವಿಚಾರಗಳನ್ನು ಕಾದಂಬರಿಯ ಪಾತ್ರಗಳು ತಮ್ಮ ಕ್ರಿಯೆಗಳಲ್ಲಿ ವ್ಯಕ್ತಪಡಿಸಬೇಕಲ್ಲವೆ? ಈ ಎಲ್ಲಾ ವಿಚಾರಗಳನ್ನು ಆಧರಿಸಿದ ಪರೀಕ್ಷಣವನ್ನು ಶರಚ್ಚಂದ್ರರ 'ಪಥೇರ್ ದಾಬಿ' ಹಾಗೂ 'ಶೇಷ ಪ್ರಶ್ನೆ' ಕಾದಂಬರಿಗಳಲ್ಲಿ ಕಾಣುತ್ತೇವೆ.

'ಪಥೇರ್ ದಾಬಿ' (ರಹದಾರಿಯ ಅಧಿಕಾರ) ಕಾದಂಬರಿಯ ಹೆಸರೇ ಒಂದು ವಿಶೇಷ ಮಹತ್ವವನ್ನು ಪಡೆದುಕೊಂಡಿದೆ. ಇದು ಶರಚ್ಚಂದ್ರರ ಜೀವನದೃಷ್ಟಿಯನ್ನು ತಿಳಿಸುತ್ತದೆ. ಈ ಎರಡೂ ಕಾದಂಬರಿಗಳಲ್ಲಿ ವ್ಯಕ್ತಿಗಳಿಗಿಂತ ವಿಚಾರಗಳೇ ಪ್ರಧಾನ. 'ಪಥೇರ್ ದಾಬಿ'ಯಲ್ಲಿ ಮನುಷ್ಯನ ಮೂಲಭೂತ ಹಕ್ಕುಗಳಾದ ನೀರು, ನೆಲದ ಮೇಲಿನ ಸಾಹಸದ ಸನ್ನಿವೇಶಗಳ ಉಲ್ಲೇಖವಿದೆ. ಅವರ ಹಿಂದಿನ ಕಾದಂಬರಿಗಳಲ್ಲಿ ಗತಕಾಲಕ್ಕೆ ಹಿಂತಿರುಗಲು ಯತ್ನಿಸುವ ಪಾರ್ವತಿ, ರಾಜಲಕ್ಷ್ಮಿ, ರಮಾ, ಸವಿತಾರಂತಹ ಕಥಾನಾಯಕಿಯರ ಮುಖಾಂತರ ಕಾಣಿಸಿರುವುದನ್ನು ನೋಡುತ್ತೇವೆ. ರಾಜಕೀಯ ವಿಚಾರಗಳಲ್ಲಿ ಶರಚ್ಚಂದ್ರರು ಇಲ್ಲಿ ಕ್ರಾಂತಿಕಾರಿ. ಪ್ರೀತಿ, ದಯೆಯನ್ನು ತಿಳಿಯದ ಧರ್ಮ, ಕ್ಷಮೆಯನ್ನು ನೀಡದ ಹಿಂದೂ ಸಮಾಜ, ಭಾರತೀಯ ಮಹಿಳೆಗೆ ಸಲ್ಲಬೇಕಾದ ಅಧಿಕಾರಾವಕಾಶಗಳನ್ನು ನಿರಾಕರಿಸಿದೆ. ಹೆಣ್ಣಿನ ಮೂಲಭೂತವಾದ ಸಹಜ ಪ್ರೇರಣೆಗಳನ್ನು ಗೌರವಿಸಬೇಕು ಎಂಬುದು ಶರಚ್ಚಂದ್ರರ ಆಕಾಂಕ್ಷೆಯಾಗಿದೆ. "ನೀನು ಈ ಒಂದು ಮಾತನ್ನು ಮಾತ್ರ ಯಾವಾಗಲೂ ನೆನಪಿನಲ್ಲಿಡು ಭಾರತಿ. ನಮ್ಮ ರಾಜ್ಯ ಇವರ ಕೈಯಲ್ಲಿ ಹೋಗಿದೆಯಾದ್ದರಿಂದಲೇ ನಾನಿವರ ಶತ್ರುವೆಂದು ತಿಳಿಯಬೇಡ, ಕೆಲವುದಿನ ಇದು ಮುಸಲಮಾನರ ಕೈಯಲ್ಲೂ ಇತ್ತು. ನನಗೆ ಅವರ ಮೇಲೆ ದ್ವೇಷವೇಕೆಂದರೆ, ಮನುಷ್ಯತ್ವಕ್ಕೆ ಇವರಂತಹ ಶತ್ರುಗಳು ಪ್ರಪಂಚದಲ್ಲೇ ಇಲ್ಲ. ಸ್ವಾರ್ಥಕ್ಕಾಗಿ ಮನುಷ್ಯನನ್ನು ಅಮಾನುಷನನ್ನಾಗಿ ಮಾಡುವುದು ಇವರ ಜನ್ಮಗತ ಸಂಸ್ಕಾರ. ಇದೇ ಇವರ ಬಂಡವಾಳ. ಸಾಧ್ಯವಾದರೆ ದೇಶದ ಮನುಷ್ಯರೆಲ್ಲರಿಗೂ ಈ

---

೫. ಸುಬೋದಚಂದ್ರ ಸೇನ್ ಗುಪ್ತ, ಶರಚ್ಚಂದ್ರ : ವ್ಯಕ್ತಿ ಮತ್ತು ಕಲಾವಿದ, (ಅನು) ಇನಾಂದಾರ್ ವಿ.ಎಂ., ಸಾಹಿತ್ಯ ಅಕಾಡೆಮಿ, ಹೊಸದೆಹಲಿ, ೧೯೭೭, ಪುಟ ೬೦.

ಸತ್ಯವನ್ನು ಕಲಿಸಬೇಕು."[೬] ಈ ಎಲ್ಲಾ ಅಂಶಗಳು ಅವರ ವಿವಿಧ ಕಾದಂಬರಿಗಳಲ್ಲಿ ನಿಚ್ಚಳವಾಗಿ ಪ್ರತಿಪಾದಿತವಾಗಿವೆ.

'ಪಥೇರ್ ದಾಬಿ' ಕಾದಂಬರಿಯ ನಾಯಕ ಭಾರತೀಯ ಸ್ವಾತಂತ್ರ್ಯಕ್ಕಾಗಿ ಹೋರಾಡುವ ಒಬ್ಬ ಕ್ರಾಂತಿಕಾರಿ. ಇದಕ್ಕಾಗಿ ದೇಶ ವಿದೇಶಗಳಲ್ಲಿ ಗೋಪ್ಯವಾಗಿ ಸಂಘಗಳನ್ನು ಸ್ಥಾಪಿಸುತ್ತಾನೆ. ಇದಕ್ಕಾಗಿ ಹೆಂಗಸರನ್ನು ಹೆಚ್ಚಾಗಿ ತೊಡಗಿಸುತ್ತಾನೆ. ಅವರಲ್ಲಿ ಹುದುಗಿರುವ ಸ್ತ್ರೀ ಚೈತನ್ಯವನ್ನು, ಸ್ವಾತಂತ್ರ್ಯವನ್ನು ಜಾಗೃತಗೊಳಿಸುತ್ತಾನೆ. ಮಹಿಳೆಯರಿಗೆ ಸಿಗಬೇಕಾದ ಅವಕಾಶಗಳನ್ನು, ಹಕ್ಕುಗಳನ್ನು ಒದಗಿಸಲು ನಿರ್ಧರಿಸುತ್ತಾನೆ. ಮೂಲತಃ ಒಂದು ರಾಜಕೀಯ ಸಮಸ್ಯಾತ್ಮಕ ಕಾದಂಬರಿಯಾದ ಇದರಲ್ಲಿ ಶರಶ್ಚಂದ್ರರು ಭಯೋತ್ಪಾದನೆಯನ್ನು, ಹಿಂಸೆಯನ್ನು ಪ್ರಚೋದಿಸುವ ಕೆಲಸವನ್ನು ಮಾಡಿದ್ದಾರೆಂದು ಕೆಲವರು ಆಕ್ಷೇಪಿಸಿದ್ದೂ ಉಂಟು. ಕಾದಂಬರಿಯ ನಾಯಕ ಸವ್ಯಸಾಚಿ; ಆತ್ಮಭಾವಾವೇಶದ ವ್ಯಕ್ತಿ ಕೂಡ, ಜೊತೆಗೆ ಆದರ್ಶವಾದಿ. ಇಲ್ಲಿ ಧರ್ಮಗಳ ಹಾಗೂ ಹುಟ್ಟಿನ ಚರ್ಚೆಯೂ ದೀರ್ಘವಾಗಿಯೇ ಬಂದಿದೆ. ಬ್ರಿಟಿಷರ ಮತ್ತು ಕಾನೂನಿನ ದೃಷ್ಟಿಯಲ್ಲಿ ಸವ್ಯಸಾಚಿ ಅಪರಾಧಿ ಎನಿಸಿದರೂ ಭಾರತಕ್ಕೆ ಸ್ವಾತಂತ್ರ್ಯವನ್ನು ತರಬೇಕೆಂಬ ಅವನ ಧ್ಯೇಯ ಬಹಳ ಮುಖ್ಯ. ಶರಶ್ಚಂದ್ರರ ಬುದ್ಧಿ ಮತ್ತು ಭಾವಗಳ ತುಡಿತವೆಲ್ಲವೂ ಇಲ್ಲಿ ತಾತ್ವಿಕವಾದ ಪ್ರಶ್ನೆಯಾಗಿ ಮೂಡುತ್ತವೆ. ಈ ತಾತ್ವಿಕ ಚರ್ಚೆಯು ಅವರ ಮುಂದಿನ 'ಶೇಷ ಪ್ರಶ್ನೆ' ಕಾದಂಬರಿಯ ಕೇಂದ್ರ ವಸ್ತುವಾಗಿ ಮುಂದುವರಿಯುತ್ತದೆ.

'ಶೇಷ ಪ್ರಶ್ನೆ' ಕಾದಂಬರಿಯು ಶರಶ್ಚಂದ್ರರ ಕೊನೆ ಕೊನೆಯ ಕಾದಂಬರಿಗಳಲ್ಲಿ ಒಂದು ಮಹತ್ವದ ಕಾದಂಬರಿ. 'ಶೇಷ ಪ್ರಶ್ನೆ' ಎಂದರೇನೆ 'ಕೊನೆಯ ಪ್ರಶ್ನೆ' ಎಂದರ್ಥ. ಶರಶ್ಚಂದ್ರರು ತಮ್ಮ ಬರವಣಿಗೆಯ ಉದ್ದಕ್ಕೂ ಮಹಿಳೆಯರಿಗೆ 'ರಹದಾರಿಯ ಅಧಿಕಾರ' ಇರಬೇಕು ಎಂದು ಪ್ರತಿಪಾದಿಸಿವರು. ಮನುಷ್ಯನ ಇಚ್ಛಾಶಕ್ತಿ ಮತ್ತು ಹಿಂದೆಳೆಯುವ ಬುದ್ಧಿಗಳ ನಡುವಿನ ವಿಸಂಗತಿಯೇ ಈ ಕಾದಂಬರಿಯ ವಸ್ತು. ಇಲ್ಲಿನ ಪಾತ್ರಗಳಾದ ಅಪರ್ಣಾ, ಅನುಪಮಾ, ಸುರಮಾ ಸಹಜ ಪ್ರವೃತ್ತಿ ಮತ್ತು ಬುದ್ಧಿಗಳ ನಡುವಣ ವಿರೋಧದಲ್ಲಿ ಸಿಕ್ಕಿ ಒದ್ದಾಡುತ್ತಾರೆ. ಈ ಕಾದಂಬರಿಯು ಶರಶ್ಚಂದ್ರರ ಸಾಹಿತ್ಯ ಜೀವನದ ಕೊನೆಯ ಹಂತವನ್ನು ನಿರ್ದೇಶಿಸುತ್ತದೆ. ಅವರು ಕಲಾವಿದರೇ ಹೊರತು, ದಾರ್ಶನಿಕರಲ್ಲ. ಹಾಗಾಗಿ ಇದು ಒಂದು ತಾತ್ವಿಕ ಕಾದಂಬರಿಯಾಗಿದೆ. ಇದರ ನಾಯಕಿ ಕಮಲಾ ಒಂದು ವಿಶಿಷ್ಟವಾದ ಜೀವನದೃಷ್ಟಿಯ ಪ್ರತಿಪಾದಕಳಾಗಿದ್ದಾಳೆ. ಆಕೆಯ ಬದುಕಿನ ಹಿನ್ನೆಲೆ ಕುತೂಹಲವಾಗಿದೆ. ಒಬ್ಬ ಯುರೋಪಿಯನ್ ಚಹಾ ತೋಟದ ಒಡೆಯನ ಒಬ್ಬ ಹಿಂದೂ ವಿಧವೆ ಮಗಳಾಗಿ ಹುಟ್ಟಿದ ಆಕೆ ಅಸ್ಸಾಮಿನಲ್ಲಿಯ ಒಬ್ಬ ಕ್ರಿಶ್ಚಿಯನ್ನನ್ನು ಮದುವೆಯಾಗುತ್ತಾಳೆ. ನಂತರ ಈಕೆ ವಿಧವೆಯಾಗುತ್ತಾಳೆ. ಕಮಲಾ ಚೆನ್ನಾಗಿ ಓದಿದವಳು. ವಾದವನ್ನು ಮಂಡಿಸುವುದರಲ್ಲಿ ಅಪ್ರತಿಮಳು. ಆಕೆ ತನ್ನ ವಾದದ ಮೂಲಕ ತನ್ನ ಜೀವನ

---

೬. ಶರಶ್ಚಂದ್ರ ಚಟರ್ಜಿ, ಅಧಿಕಾರ, ಎಚ್.ಕೆ. ವೇದವ್ಯಾಸಚಾರ್ಯ (ಅನು), ಡಿ.ವಿ.ಕೆ. ಮೂರ್ತಿ ಪ್ರಕಾಶನ, ಮೈಸೂರು, ಪುಟ ೧೯೩.

ದೃಷ್ಟಿಯನ್ನು ವಿವರಿಸುವ ಸಾಮರ್ಥ್ಯ ಹೊಂದಿದ್ದಾಳೆ. ನಿರಂತರವಾದ ಬದಲಾವಣೆಯೇ ಆಕೆಯ ಜೀವನದರ್ಶನದ ಮೂಲಾಧಾರ.

ಶರಶ್ಚಂದ್ರರು ಕಮಲಾಳ ಪಾತ್ರದ ಮುಖಾಂತರ ಬದುಕಿನ ಐಚ್ಛಿಕ ವಿಚಾರಗಳನ್ನು ಪ್ರತಿಪಾದಿಸುತ್ತಾರೆ. ಮೂಲತಃ ಕಲಾಪ್ರಕಾರವಾದ ಈ ಕಾದಂಬರಿಯಲ್ಲಿ ಮನುಷ್ಯನ ಬುದ್ಧಿ ಮತ್ತು ಸಹಜ ಪ್ರವೃತ್ತಿಗಳ ನಡುವಿನ ನಿರಂತರವಾದ ಹೋರಾಟವನ್ನು ವ್ಯಕ್ತಪಡಿಸುತ್ತದೆ. ಇಲ್ಲಿ ವೈಚಾರಿಕವಾಗಿ ತೆಳುವಾದ ಚರ್ಚೆ ಇದೆ; ಕಮಲಾಳ ವಾದಮಂಡನೆಯಲ್ಲಿ ಹಾಗೂ ವಿವರಗಳಲ್ಲಿ ಆಭಾಸಗಳಿವೆ. ಆದರೂ ಆಕೆಯ ಪಾತ್ರದ ಮಹತ್ವವನ್ನೇನೂ ಗೌಣಗೊಳಿಸುವುದಿಲ್ಲ. ಕಮಲಾಳ ಪಾತ್ರವನ್ನು ಕಲಾನಿರ್ಮಿತಿಯ ಅಭಿವ್ಯಕ್ತಿಗಿಂತ ಭಿನ್ನವಾಗಿ ತಾತ್ವಿಕ ವಿಚಾರಗಳ ಮುಖವಾಣಿ ಎಂದು ನೋಡಲು ಹೆಚ್ಚಿನ ಅವಕಾಶವಿದೆ. ಹೀಗಾಗಿ 'ಶೇಷ ಪ್ರಶ್ನೆ' ಕಾದಂಬರಿಯನ್ನು ಒಂದು ಸಮಸ್ಯಾತ್ಮಕ ಕಾದಂಬರಿಯನ್ನಾಗಿಯೇ ನೋಡಬೇಕಾಗುತ್ತದೆ. ಕಮಲಾ ಎರಡನೆಯ ಮದುವೆ ಮಾಡಿಕೊಳ್ಳುತ್ತಾಳೆ. ಆದರೆ ಆತ ಆಕೆಯನ್ನು ಪ್ರೀತಿಸಲಾರ. ಅದು ಆಕೆಗೆ ಗೊತ್ತು. ಆ ಮದುವೆ ಅದು ಶಾಸನ ಸಮ್ಮತವಾದುದಲ್ಲ. ಕಮಲಾಳು ಪ್ರತಿಪಾದಿಸುವ ಜೀವನ ದರ್ಶನವೇ ಈ ಕಾದಂಬರಿಯ ಭಿತ್ತಿ. "ಈ ಕಾದಂಬರಿಯುದ್ಧಕ್ಕೂ ಕಮಲಳ ವ್ಯಕ್ತಿತ್ವದಲ್ಲಿ ಪ್ರಧಾನವಾಗಿದ್ದು ಶರಶ್ಚಂದ್ರರು ಸ್ವಚ್ಛಂದ ಮುಕ್ತ ಸಮಾಜದ ಆಶಯವನ್ನು ಇಲ್ಲಿ ವ್ಯಕ್ತಪಡಿಸಿರುವಂತೆ ಕಾಣುತ್ತದೆ."[೭]

ಹಿಂಸಾವಾದಿ ರಾಜೆನ್ ಮತ್ತು ಹಿರಿಯನಾಗಿದ್ದ ಆಶು ಬಾಬು ಇವರಿಬ್ಬರೂ ಕಮಲಾಳಿಗೆ ಎದುರು ಸ್ವಭಾವದ ಪಾತ್ರಗಳಾಗಿವೆ. ಆಕೆಯ ತಾತ್ವಿಕ ಚರ್ಚೆಗಳ ಬಗ್ಗೆ ರಾಜೆನ್‌ಗೆ ಆಸಕ್ತಿಯಿಲ್ಲ. ಆತನಿಗೆ ಅವುಗಳ ಬಗ್ಗೆ ತಿರಸ್ಕಾರ ಭಾವ. ಕಮಲಾಳ ಪ್ರಭಾವಕ್ಕೆ ಒಳಗಾದ ವ್ಯಕ್ತಿ ಆತ. ಆದರೆ ಆಶು ಬಾಬುವಿಗೆ ಕಾದಂಬರಿಯಲ್ಲಿ ಮಹತ್ವದ ಸ್ಥಾನವಿದೆ. ಆದರೂ ಆತನೂ ಕಮಳಾಲಿಗೆ ಎದುರು ಪಾತ್ರ. ಹಳೆಯದರ ಬಗ್ಗೆ ಅವನಿಗೆ ಗಾಢ ನಂಬಿಕೆ. ಕಮಲಾ ತಿರಸ್ಕರಿಸುವುದನ್ನೆಲ್ಲಾ ಆತ ಪುರಸ್ಕರಿಸುತ್ತಾನೆ. ಆದರೆ ಆತನಲ್ಲಿ ತಾಳಿಕೆ, ಸಹನೆ, ತಿಳುವಳಿಕೆ ಇದೆ. ಕಮಲಾ ಮತ್ತು ಆಶು ಬಾಬರಿಬ್ಬರಿಗೂ ಹಳೆಯದರ ಬಗ್ಗೆ ಸಂಘರ್ಷವಿದೆ. ಕಮಲಾ ಹಳೆಯದ್ದನ್ನೆಲ್ಲಾ ವ್ಯಂಗ್ಯವಾಗಿ ಟೀಕಿಸುತ್ತಾಳೆ. ಆದರೂ ಆತ ತನ್ನ ಮಗಳಿನ ವಯಸ್ಸಿನ ಆಕೆಯನ್ನು ಪ್ರೀತಿಯಿಂದ ಕಾಣುತ್ತಲೇ ಆಕೆಯ ಅಭಿಪ್ರಾಯಗಳನ್ನೆಲ್ಲಾ ನಗುತ್ತಲೇ ತಾಳಿಕೊಳ್ಳುತ್ತಾನೆ. ಅವನದು ಮೆಚ್ಯೂರ್ಡ್ ವ್ಯಕ್ತಿತ್ವ 'ಶೇಷ ಪ್ರಶ್ನೆ' ಕಾದಂಬರಿಯು ಶರಶ್ಚಂದ್ರರ ಹೊಸ ಪ್ರಯೋಗಕ್ಕೆ ಸಾಕ್ಷಿಯಾಗಿದೆ. ಹೊಸ ಬಗೆಯ ಕಥಾಸೃಷ್ಟಿ, ಕಥಾಪಾತ್ರಗಳಿಂದಾಗಿ ಗಮನಾರ್ಹವಾದ ಪ್ರಯತ್ನಗಳಾಗಿವೆ. ಇದೇ ಮಾತನ್ನು ಅವರ 'ಪಥೇರ್ ದಾಬಿ' ಕಾದಂಬರಿಗೂ ಹೇಳಬಹುದಾಗಿದೆ.

ಶರಶ್ಚಂದ್ರರ ಕಾದಂಬರಿಗಳಲ್ಲಿ ಯಾವ ಬಗೆಯ ಜೀವನದರ್ಶನವಿದೆ ಎಂದು ಕೇಳಿದರೆ ಅವುಗಳ ಮುಖ್ಯ ಲಕ್ಷಣ ಸಹಿಷ್ಣುತೆ ಮತ್ತು ಒಂದು ಬಗೆಯ ವಿನೋದ ದೃಷ್ಟಿಯ ನಿರ್ಲಿಪ್ತತೆ

೭. ಡಿ.ವಿ.ಕೆ.ಮೂರ್ತಿ, ಜೀವನ ಮೌಲ್ಯಗಳು ಮತ್ತು ಸಾಹಿತ್ಯ, ಡಿ.ವಿ.ಕೆ. ಪ್ರಕಾಶನ, ಮೈಸೂರು, ೨೦೦೮, ಪುಟ ೭೩.

ಎನ್ನಬಹುದಾಗಿದೆ. ಅವರ ಬಹುಪಾಲು ಕಾದಂಬರಿಗಳ ಪ್ರಧಾನ ಪಾತ್ರಗಳೆಲ್ಲವೂ ಹೆಂಗಸರೇ ಆಗಿದ್ದರೂ, ಅವರ ಜೀವನದೃಷ್ಟಿ ಸ್ಪಷ್ಟವಾಗಿ, ಶಕ್ತಿಯುತವಾಗಿ, ವ್ಯಕ್ತವಾಗುವುದು ಅವರು ನಿರ್ಮಿಸಿದ ಇಬ್ಬರು ಶ್ರೇಷ್ಠ ಗಂಡಸು ಪಾತ್ರಗಳಾದ ಶ್ರೀಕಾಂತ ಮತ್ತು 'ದೇನಾ ಪಾಲ್ನಾ' ಕಾದಂಬರಿಯ ಜೀವಾನಂದರಲ್ಲಿ ಎನ್ನಬಹುದಾಗಿದೆ. ಈ ಎರಡೂ ಪುರುಷ ಪಾತ್ರಗಳಲ್ಲಿ ಶರಶ್ಚಂದ್ರರ ಬದುಕಿನ ಜೀವನದರ್ಶನ ಕಾಣಿಸಿಕೊಂಡಿವೆ.

### ೯.೫. ಶರಶ್ಚಂದ್ರರ ಸಣ್ಣಕಥೆಗಳ, ನೀಳ್ಗಥೆಗಳ ವಿಶೇಷತೆ

ಶರಶ್ಚಂದ್ರರು ಸಣ್ಣಕಥೆ – ನೀಳ್ಗತೆ ಮತ್ತು ಕಾದಂಬರಿಗಳನ್ನು ಬರೆಯುವುದರ ಮೂಲಕ ತಮ್ಮ ಪ್ರತಿಭಾ ಸಾಮರ್ಥ್ಯವನ್ನು ದಟ್ಟವಾಗಿ ಪ್ರಕಟಿಸಿದ್ದಾರೆ. ಅವರ ಬಹುಪಾಲು ಕಥೆಗಳ ವಸ್ತು ಹಿಂದೂ ಕೂಡುಕುಟುಂಬದ – ಅದರಲ್ಲಿಯೂ ಬಂಗಾಳಿ ಸಮಾಜದ ಜನಜೀವನದಲ್ಲಿಯ ಸುಖ ದುಃಖಗಳು, ಸರಸ ವಿರಸಗಳು, ತಂತ್ರ – ಕುತಂತ್ರಗಳು, ಮೋಸ – ವಂಚನೆಗಳು ಇತ್ಯಾದಿ ಬದುಕಿನ ಸಾವು ನೋವು ಕೇಡುಗಳನ್ನು ಅನಾವರಣಗೊಳಿಸುತ್ತವೆ. ಇದಕ್ಕಾಗಿ ಬಂಗಾಳಿ ಸಾಂಸ್ಕೃತಿಕ ಪರಿಸರದ ನಗರದ ವಿದ್ಯಾವಂತರ ಹಾಗೂ ಹಳ್ಳಿಗಾಡಿನ ಮುಗ್ಧ ಪಾತ್ರಗಳನ್ನು ತಮ್ಮ ಕಾದಂಬರಿಗಳಲ್ಲಿ ಹಾಗೂ ಕಥೆಗಳಲ್ಲಿ ಬಳಸಿಕೊಂಡಿದ್ದಾರೆ. ಇದಲ್ಲದೆ, ಅವರ ಕಥೆಗಳಲ್ಲಿ ವೈವಿಧ್ಯಮಯವಾದ ಸ್ತ್ರೀ–ಪುರುಷ ಪಾತ್ರಗಳು, ವಿಭಿನ್ನವಾದ ಘಟನೆಗಳು ಹಾಗೂ ಸಂಘರ್ಷಗಳನ್ನು ಕಾಣಿಸಿದ್ದಾರೆ. ಕೆಲವು ಕಥೆಗಳನ್ನು ಇಲ್ಲಿ ಪರಿಶೀಲಿಸಬಹುದಾಗಿದೆ.

ಶರಶ್ಚಂದ್ರರ ಆರಂಭದ ಕಥೆಗಳಲ್ಲಿ ಒಂದಾದ 'ರಾಮೇರ್ ಸುಮತಿ' ಕಥೆಯು ಬಂಗಾಳಿ ಸಮಾಜದ ಕೂಡುಕುಟುಂಬದ ಅಂದರೆ ಅವಿಭಕ್ತ ಕುಟುಂಬದ ಜೀವನಕ್ರಮವನ್ನು ನಿರೂಪಿಸುತ್ತದೆ. ಶ್ಯಾಮ ಮತ್ತು ರಾಮ ಇಬ್ಬರೂ ಅಣ್ಣ ತಮ್ಮಂದಿರು. ಆದರೆ ಅವರಿಬ್ಬರೂ ಒಬ್ಬಳೇ ತಾಯಿಯ ಮಕ್ಕಳಲ್ಲ, ಮಲಸಂಬಂಧ. ಶ್ಯಾಮನಿಗೆ ಮದುವೆಯಾದಾಗ ರಾಮ ಇನ್ನೂ ತಬ್ಬಲಿ ಮಗು. ಅದನ್ನು ಶ್ಯಾಮನನ್ನು ಮದುವೆಯಾಗಿ ಬಂದ ನಾರಾಯಿಣಿ ಪ್ರೀತಿಯಿಂದ ಲಾಲನೆ ಪಾಲನೆ ಮಾಡಿ ಬೆಳೆಸಿದವಳು. ಆದರೆ ಹೊರಗಿನಿಂದ ಈ ಮನೆಗೆ ಬಂದ ನಾರಾಯಿಣಿಯ ಅವ್ವ ದಿಗಂಬರಿ ತನ್ನ ಮಗಳು ಮತ್ತು ಅಳಿಯನನ್ನು ರಾಮನಿಂದ ಅಗಲಿಸಿ ಚೆನ್ನಾಗಿಟ್ಟು ಅವರ ಕುಟುಂಬಕ್ಕೆ ನೆರವಾಗಬೇಕೆಂದು ಬಯಸುತ್ತಾಳೆ. ಇದಕ್ಕೆ ನಾರಾಯಿಣಿಯ ಗಂಡ ಶ್ಯಾಮನೂ ಅದೇ ಅಭಿಪ್ರಾಯವನ್ನು ಹೊಂದಿದ್ದು ರಾಮನನ್ನು ನಿರ್ಲಕ್ಷಿಸುತ್ತಾನೆ. ಆದರೆ ಅದು ನಾರಾಯಿಣಿಗೆ ಇಷ್ಟವಾಗದು. ಆದರೆ ರಾಮನಲ್ಲಿ ಹುಡುಗಾಟಿಕೆ ಜಾಸ್ತಿ. ಆತ ಒಂದು ರೀತಿಯಲ್ಲಿ ಕಾಡು, ಅಸಂಸ್ಕೃತ ಹುಡುಗ. ಯಾರ ನಿಯಂತ್ರಣಕ್ಕೂ ಸಿಗದೆ ಕೀಟಲೆ ಕುಚೋದ್ಯಗಳಲ್ಲಿಯೇ ಮುಳುಗಿರುತ್ತಾನೆ. ಇದನ್ನು ಕಂಡ ದಿಗಂಬರಿ ತನ್ನ ಹುನ್ನಾರವನ್ನು ಬೇಯಿಸಿಕೊಂಡು ಆ ಅಣ್ಣ ತಮ್ಮಂದಿರನ್ನು ಆ ಕುಟುಂಬವನ್ನು ಹೊಡೆದು ಬೇರೆ ಮಾಡುತ್ತಾಳೆ. ಇದರಿಂದ ನಾರಾಯಿಣಿಗೆ ಆಘಾತವಾಗುತ್ತದೆ. ಕೊನೆಗೆ ನಾರಾಯಿಣಿ ಬೇರೆಯಾದ ರಾಮನನ್ನು ಕರೆದುಕೊಂಡು ತನ್ನ ಸಂಸಾರದಲ್ಲಿಯೇ

ಇಟ್ಟುಕೊಂಡು ತನ್ನ ಅವ್ವ ದಿಗಂಬರಿಯನ್ನೇ ಹೊರಗೆ ಹಾಕುತ್ತಾಳೆ. ಇನ್ನು ಮುಂದೆ ಒಳ್ಳೆಯವನಾಗಿ ನಡೆದುಕೊಳ್ಳಲು ಆಕೆ ರಾಮನಿಗೆ ಬುದ್ಧಿ ಹೇಳುತ್ತಾಳೆ. ಹೀಗೆ ಈ ಕಥೆಯು ಶಕ್ತಿಯುತವಾಗಿದ್ದು ನಿರೂಪಣೆ ಸೊಗಸಾಗಿದೆ.

ಈ ಕಥೆಯಲ್ಲಿ ಬರುವ ದಿಗಂಬರಿ ಶರಶ್ಚಂದ್ರರ ಬೇರೆ ಕಥೆಗಳಲ್ಲಿ ಬರುವ ಹತ್ತಾರು ದುಷ್ಟ ಪಾತ್ರಗಳ ಹಾಗೆಯೇ ಇದ್ದಾಳೆ. ಕುಟುಂಬಗಳ ಸಂಸಾರಗಳ ಒಡಕಿಗೆ ಹೊರಗಿನ ಶಕ್ತಿಗಳೇ, ಪಾತ್ರಗಳೇ ಕಾರಣ ಎನ್ನುವುದು ಬಹುಮಟ್ಟಿಗೆ ಸತ್ಯ. ಇಂತಹ ಪಾತ್ರಗಳು ಕಥೆ, ಕಾದಂಬರಿಗಳಲ್ಲಿ ಹೊರಗಿನಿಂದಲೇ ಚಿತ್ರಿತವಾಗಿರುತ್ತವೆ. ಇದು ಶರಶ್ಚಂದ್ರರ ಕಥೆ, ಕಾದಂಬರಿಗಳಲ್ಲಿಯೂ ಬರುವುದು ನಿಜ. ಆದರೆ ಇಲ್ಲಿ ನಾರಾಯಿಣಿ ಪಾತ್ರ ಸೃಷ್ಟಿಯಲ್ಲಿ ಶರಶ್ಚಂದ್ರರ ನಿರ್ಮಿತ ಪ್ರತಿಭೆ ಎದ್ದು ಕಾಣುತ್ತದೆ. ನಾರಾಯಿಣಿ ತನ್ನ ಹಿತಾಸಕ್ತಿಗಳಿಗೆ ವಿರೋಧವಾಗಿ ನಡೆದುಕೊಳ್ಳುವುದು ಮಾತ್ರವಲ್ಲದೆ, ತನ್ನವರಾದ ತನ್ನ ಅವ್ವ, ಗಂಡನ ವಿರೋಧವನ್ನು ಕಟ್ಟಿಕೊಂಡು, ಅದನ್ನು ಎದುರಿಸುತ್ತಾಳೆ. ಕುಟುಂಬದ ರೂಢಿಯ ಸಂಬಂಧಗಳಿಗಿಂತಲೂ ಆಳವಾದ ಮಾತೃಪ್ರೇರಣೆಯಿಂದ ಪ್ರೇರಿತಳಾಗಿ ನಡೆದುಕೊಳ್ಳುತ್ತಾಳೆ ಆಕೆ. ಇಲ್ಲಿ ಎಲ್ಲಾ ದುಷ್ಟಶಕ್ತಿಗಳೂ ಸಂಘಟಿತವಾಗಿ, ವಿರೋಧವಾಗಿ ರಾಮನಿಗೆ ನಿಲ್ಲುತ್ತವೆ. ತಬ್ಬಲಿಯಾದ ಅವನ ಹಿತವನ್ನು ರಕ್ಷಿಸಬೇಕಾದ ಪಾಲಕ ಮಲ ಅಣ್ಣನೇ ಶತ್ರುವಾಗುತ್ತಾನೆ. ಈತನಿಗೆ ಇದಿರಾಗಿ ನಿಂತ ದಿಗಂಬರಿ ನಿಷ್ಕರುಣವಾಗಿ ತಾಯಿ ಹೃದಯ ಇಲ್ಲದವಳಾಗುತ್ತಾಳೆ. ಇವೆಲ್ಲವನ್ನೂ ಎದುರಿಸಿ ನಿಂತ ನಾರಾಯಿಣಿಯ ಹೃದಯ ಮಾತೃಹೃದಯಕ್ಕಿಂತ ಮಿಗಿಲಾದುದು. ಕಥೆಯು ಕಲೆಗಾರಿಕೆಯಿಂದ ಕೂಡಿದ್ದು ಮೌಲಿಕತೆಗೆ ಸರಿಸಮಾನವಾಗಿದೆ. ಈ ಕಥೆಯಲ್ಲಿ ಸ್ವಾರ್ಥ ಸೋತು, ಸದ್ಭಾವನೆ ಗೆಲ್ಲುತ್ತದೆ. ಇದೇ ದಾರಿಯಲ್ಲಿ ಶರಶ್ಚಂದ್ರರು ಬರೆದ 'ಮಾಮಲಾದ್ ಫಲ್' ಮತ್ತು 'ರಾಮೇರ್ ಸುಮತಿ' (ಇದು ಕನ್ನಡಕ್ಕೆ ಅನುವಾದವಾಗಿದೆ) ಕಥೆಗಳಲ್ಲಿ ಸಹ ಸಂಯುಕ್ತ ಕುಟುಂಬದಲ್ಲಿ ಸ್ವಾರ್ಥ ಮತ್ತು ಹೃದಯದ ಭಾವನೆಗಳನ್ನು ಹಿಡಿದಿಟ್ಟಿದೆ. ಅವರ ಮತ್ತೊಂದು ನೀಳ್ಗತೆಯಾದ 'ವೈಕುಂಠೇಶ್‌ವಿಲ್' ಕಥೆಯಲ್ಲಿ ಕೂಡ ಕುಟುಂಬವೊಂದರಲ್ಲಿ ಪ್ರೀತಿಯು ಸ್ವಾರ್ಥವನ್ನು ಹೇಗೆ ಗೆಲ್ಲುತ್ತದೆ ಎಂಬುದನ್ನು ಕಟ್ಟಿಕೊಡಲಾಗಿದೆ.

ಶರಶ್ಚಂದ್ರರ ಮಹತ್ವದ ಕಥೆಯೆಂದರೆ 'ನಿಷ್ಕಲತಿ.' ಇದು ಕನ್ನಡಕ್ಕೆ ಅನುವಾದವಾಗಿದೆ. ಇದೊಂದು ದೊಡ್ಡ ಕೂಡುಕುಟುಂಬದ ಕಥೆಯಾಗಿದೆ. ಗಿರೀಶ ಮತ್ತು ಹರೀಶ ಇಬ್ಬರೂ ಅಣ್ಣತಮ್ಮಂದಿರು. ಗಿರೀಶನ ಹೆಂಡತಿ ಸಿದ್ಧೇಶ್ವರಿ, ಹರೀಶನ ಹೆಂಡತಿ ನಯನ ತಾರಾ. ಇವರ ಗಂಡಂದಿರಿಬ್ಬರೂ ವಕೀಲರು. ಇವರ ಸಂಬಂಧಿಕರಾದ ರಮೇಶ ಮತ್ತು ಆತನ ಹೆಂಡತಿ ಶೈಲಜಾ ಇವರ ಮನೆಯಲ್ಲಿ ಇರುತ್ತಾರೆ. ಗಿರೀಶ ಅಪಾರ ಸಂಪಾದನೆಯ ನ್ಯಾಯವಾದಿ, ಹರೀಶನೂ ನ್ಯಾಯವಾದಿಯಾದರೂ ಅವನ ಸಂಪಾದನೆ ಸಾಮಾನ್ಯ. ರಮೇಶ ಗಿರೀಶನ ಹಣವನ್ನು ಹಾಳು ಮಾಡುವುದರಲ್ಲಿ ತೊಡಗಿರುತ್ತಾನೆ. ಆತ ನಿರುದ್ಯೋಗಿ ಬೇರೆ. ಆ ಕುಟುಂಬದ ಯಜಮಾನಿಕೆಯನ್ನು ನಡೆಸಲು ರಮೇಶನ ಹೆಂಡತಿ ಶೈಲಜಾಳಿಗೆ ಬಂದೊದಗಿರುತ್ತದೆ. ಇದಕ್ಕೆ ಮುಖ್ಯ ಕಾರಣ ಸಿದ್ಧೇಶ್ವರಿ ಏನೂ ತಿಳಿಯದ ಹೆಂಗಸು. ಆಕೆ ಪುರಾತನ ಕಾಲದಿಂದ ಬೆಳೆದು ಬಂದ ಸಂಸ್ಥೆಯಾದ

ಹಿಂದೂ ಕುಟುಂಬ ಪದ್ಧತಿಯ ಜೀವಂತ ಪ್ರತಿನಿಧಿಯಂತಿದ್ದಾಳೆ. ಆಕೆ ಸರಳ ಸ್ವಭಾವದವಳು. ಆಕೆಯ ಗಂಡ ಮರೆಗುಳಿ. ಆತ ತನ್ನ ಯಜಮಾನಿಕೆಯನ್ನು ತನ್ನ ಸಂಬಂಧಿ ಶೈಲ ಬಾಳಿಗೆ ಒಪ್ಪಿಸಿಬಿಟ್ಟಿರುತ್ತಾನೆ. ಸಿದ್ಧೇಶ್ವರಿಗೆ ಯಜಮಾನಿಕೆ ಬೇಕಾಗಿಲ್ಲ. ಅವಳ ವಾರಗಿತ್ತಿ ನಯನ ತಾರಾಗೂ ಶೈಲಜಾಳಿಗೂ ಒಬ್ಬರೊಬ್ಬರಿಗೂ ಪರಸ್ಪರ ಪ್ರೀತಿ ಗೌರವಗಳಿಲ್ಲ. ಕೆಲವು ಚಿಲ್ಲರೆ ವಿಷಯಗಳಿಂದಾಗಿ, ಹೊಂದಿಕೆಯಾಗದ ಪ್ರಭಾವ ವಿಶೇಷಗಳು ಹಾಗೂ ವಿರೋಧವಾದ ಹಿತಾಸಕ್ತಿಗಳು ಆ ಕುಟುಂಬದ ಒಡಕಿಗೆ ಕಾರಣವಾಗಿಬಿಡುತ್ತವೆ. ಇದನ್ನು ಕಥೆಗಾರರು ತುಂಬಾ ಜಾಣ್ಮೆಯಿಂದ, ಕಲಾತ್ಮಕವಾಗಿ ತೋರಿಸಿದ್ದಾರೆ.

ಸಿದ್ಧೇಶ್ವರಿ ತನ್ನ ಯಜಮಾನಿಕೆಯನ್ನು ಶೈಲಜಾಳಿಗೆ ವರ್ಗಾಯಿಸಿ ತಾನು ಮನೆಯಲ್ಲಿ ಎಲ್ಲಾ ಮಕ್ಕಳ ಲಾಲನೆ, ಅಕ್ಕರೆ, ಪಾಲನೆ, ಪೋಷಣೆಯಲ್ಲಿ ಹಿಂದೂ ಮಹಿಳೆಯ ಥರ ತೊಡಗಿಬಿಡುತ್ತಾಳೆ. ಅದರಲ್ಲೇ ಆಕೆ ಸಂತೋಷ, ನೆಮ್ಮದಿ ಕಾಣುತ್ತಾಳೆ. ಏನೂ ತಿಳಿಯದ ಸರಳ ಸ್ವಭಾವದ ಹೆಂಗಸು ಆಕೆ; ರಮೇಶ ತನ್ನ ವ್ಯವಹಾರಗಳಲ್ಲಿ ಸೋತವನಾಗಿದ್ದಾನೆ. ದಿನಪತ್ರಿಕೆಗಳನ್ನು ಓದುವುದರಲ್ಲೇ ಆತ ಕಾಲ ಕಳೆಯುತ್ತಾನೆ. ಆದರೆ ಆತನ ಹೆಂಡತಿ ಶೈಲಜಾಳೇ ಮನೆಯಲ್ಲಿ ಕೇಂದ್ರ ವ್ಯಕ್ತಿಯಾಗಿರುತ್ತಾಳೆ. ಹೊರಗಿನಿಂದ ಬಂದ ಆಕೆ ಬೇರೆಯದೇ ವ್ಯಕ್ತಿತ್ವ ಹೊಂದಿದ್ದು, ಮನೆಯಲ್ಲಿ ಸದಾಕಾಲ ಕೆಲಸದಲ್ಲಿ ತೊಡಗಿದವಳು. ಮನೆಯ ಕಾರುಬಾರುಗಳನ್ನು ನಿಷ್ಠುರವಾಗಿ, ಹಠಮಾರಿತನದಿಂದ ನಡೆಸುವವಳು. ಇದರ ನಡುವೆ ಹರೀಶ ಮತ್ತು ಹೆಂಡತಿ ನಯನ ತಾರಾ ಕೀಳು ಮನಸ್ಸಿನ ಸ್ವಾರ್ಥ ಸಾಧಕರು. ಇವರಿಂದಲೂ ಈ ಸಂಯುಕ್ತ ಕುಟುಂಬಕ್ಕೆ ತೊಂದರೆಯಾಗುತ್ತದೆ. ಆದರೂ ಕೊನೆಗೂ ಶೈಲಜಾಳಿಂದಲೇ ಛಿದ್ರವಾದ ಈ ಕೂಡುಕುಟುಂಬವು ಉಳಿದುಕೊಳ್ಳುತ್ತದೆ. ಇದೊಂದು ಶರಶ್ಚಂದ್ರರ ಅದ್ಭುತವಾದ ಕಲಾಸಿದ್ಧಿಯಾಗಿದೆ.

ಹೊಂದಾಣಿಕೆಯೇ ಕೂಡುಕುಟುಂಬದ ಮೂಲ ಸೂತ್ರ. ಶರಶ್ಚಂದ್ರರು ತಮ್ಮ 'ಕಾಶೀನಾಥ' ಕಥೆಯಲ್ಲಿ ತಮ್ಮ ಮೂಲ ಗುಣಲಕ್ಷಣಗಳನ್ನು ಎತ್ತಿ ತೋರಿಸಬಲ್ಲ ಶಕ್ತಿಯನ್ನು ಪ್ರಕಟಿಸಿದ್ದಾರೆ. ಈ ಕಥೆಯು ಕನ್ನಡಕ್ಕೆ ಅನುವಾದವಾಗಿದೆ. ಇದು ಸಂಭವಿಸಬಹುದಾಗಿದ್ದ ದುರಂತತೆಯಿಂದ ಪಾರಾದ ಒಂದು ಉತ್ತಮ ಕಥೆಯಾಗಿದೆ. ಕಾಶಿನಾಥ ಒಬ್ಬ ಮಿತ ಭಾಷಿ. ಎಳೆಯ ವಯಸ್ಸಿನಲ್ಲಿಯೇ ಅವನನ್ನು ಮದುವೆಯಾದ ಕಮಲಾ ಅವನ ಸ್ವಭಾವಗಳನ್ನು ಅರ್ಥ ಮಾಡಿಕೊಳ್ಳುವ ಶಕ್ತಿಯನ್ನು ಹೊಂದಿಲ್ಲದ ಹೆಂಡತಿ. ಆದರೂ ಆತನನ್ನು ಸಂತೋಷಪಡಿಸಲು ಹಲವು ಬಗೆಯಲ್ಲಿ ಯತ್ನಿಸುತ್ತಾಳೆ. ಆದರೆ ಕಾಶೀನಾಥನದು ಸ್ವತಂತ್ರವಾದ ವ್ಯಕ್ತಿತ್ವ. ಸಿರಿವಂತರ ಮನೆಯ ಅಳಿಯನಾಗಿ ಬದುಕಲು ಇಷ್ಟಪಡದವನು. ಏಕಾಂಗಿ ಅಲೆದಾಡುವಾಗ ಏನೋ ಚಿಂತನೆ ಮಾಡುವನು. ಅರಮನೆಯಂತಹ ಮನೆಯಲ್ಲಿ ಆತ ಯಾಕೆ ಅಸುಖಿ ಎಂಬುದು ನಿಗೂಢ. ಅದು ಅವನಿಗೂ ತಿಳಿದಿಲ್ಲ. ಆತ ಆ ವ್ಯವಸ್ಥೆಗೆ ಹೊಂದಿಕೊಳ್ಳಲಾರದೆ ಒದ್ದಾಡುತ್ತಿದ್ದ. ಮೊದಲು ನಿರಂತರವಾದ ಭಕ್ತಿಯಿಂದ ತನ್ನ ಗಂಡನನ್ನು ಒಲಿಸಿಕೊಳ್ಳಲು ಕಮಲ ಯತ್ನಿಸಿದಳು. ಆಮೇಲೆ ಆಕೆ ವಿರೋಧದಿಂದಲೇ ಅವನನ್ನು ಮಣಿಸಲು ಯತ್ನಿಸುತ್ತಾಳೆ. ಆದರೆ ಇವರಿಬ್ಬರ ನಡುವಿನ ಒಡಕನ್ನು, ವಿರಸವನ್ನು ಕಂಡು ಒಬ್ಬ

ಕಾಶೀನಾಥನನ್ನು ಕೊಲೆ ಮಾಡಲು ಯತ್ನಿಸುತ್ತಾನೆ. ಆದರೆ ಆ ಸಮಯದಲ್ಲಿ ಕಾಶೀನಾಥ ಪಾರಾಗುತ್ತಾನೆ. ಆಮೇಲೆ ಗಂಡ ಹೆಂಡಿರ ಪುನರ್ಮಿಲನವಾಗುತ್ತದೆ. ಇಬ್ಬರ ವ್ಯಕ್ತಿತ್ವದ ವಿಭಿನ್ನವಾದ ಸೂಕ್ಷ್ಮಾತಿಸೂಕ್ಷ್ಮಗಳನ್ನು ಕಥೆಯು ಚಿತ್ರಿಸುತ್ತದೆ.

ಶರಶ್ಚಂದ್ರರ ಮತ್ತೊಂದು ಕಥೆ, 'ಅನುಪಮಾರ್ ಶ್ರೀಮ್' ಬೇರೊಂದು ರೀತಿಯಲ್ಲಿ ಅರ್ಥವತ್ತಾಗಿದೆ. ಇದು ಇಡೀ ಪ್ರಪಂಚ ಒಬ್ಬಳನ್ನು ಕೈಬಿಟ್ಟರೂ ಆಕೆಯನ್ನು ಬಿಡದೆ, ಪ್ರೀತಿಸುತ್ತಿದ್ದ ಒಬ್ಬ ಕುಡುಕ ಮನುಷ್ಯನ ಪ್ರೇಮದ ಮೋಹದ ಕಥೆ. ಆ ಕುಡುಕ ಸೆರೆಮನೆಗೆ ಸೇರಲು ಕಾರಣಳಾದವಳೂ ಆ ಹೆಂಗಸೇ. ಅವನೇನೂ ಸಚ್ಚಾರಿತ್ರ್ಯವುಳ್ಳ ನಾಯಕನಲ್ಲ. ಒಂದು ರೀತಿಯ ಹೊಸ ಬಗೆಯ ನಾಯಕ ಈತ. ಕುಡಿತಕ್ಕೆ ಬಲಿಯಾದ ಮನುಷ್ಯ. ಸೆರೆಮನೆಗೆ ಹೋಗಿ ಬಂದವನು. ಆದರೆ ಆತ ಅನುಪಮೆಯ ವಿಷಯದಲ್ಲಿ ತೀವ್ರವಾದ ಪ್ರೀತಿಯನ್ನು ಇಟ್ಟುಕೊಂಡವನು. ಆತ ಆಕೆಯನ್ನು ಕ್ಷಮಿಸಬಲ್ಲ, ಆಕೆಯ ಪರಿಸ್ಥಿತಿಯನ್ನು ಅರ್ಥ ಮಾಡಿಕೊಳ್ಳಬಲ್ಲ. ಅವನ ಈ ಯೋಗ್ಯಗುಣವನ್ನು ನೋಡಿದಾಗ ದೋಷರಹಿತನಾದ ಯಾವ ಪುರಾಣದ ನಾಯಕನಿಗೂ ಆತ ಕಡಿಮೆ ಅಲ್ಲ. ಆದರೆ ಆತನಿಗೆ ಕುಡಿತ ಒಂದು ಅಂಟಿದ ರೋಗ. ಆತ ತನ್ನ ಹೆಂಡತಿ ಅಲ್ಲದ ಅನುಪಮೆಯ ಹಿಂದೆ ಬಿದ್ದಿದ್ದ. ಆದರೆ ಅವನಲ್ಲಿದ್ದ ಈ ಕುಡುಕುತನವೇ ಅವನಿಗೆ ಕೆಡುಕಾಯ್ತೆಂದು ತಿಳಿಯಬೇಕೆ ಎಂಬ ಪ್ರಶ್ನೆಯನ್ನು ಕಥೆಗಾರ ಶರಶ್ಚಂದ್ರರು ಎತ್ತುತ್ತಾರೆ. ಅವನೊಬ್ಬ ಧೀರ ಪ್ರೇಮಿ ಅಲ್ಲವೆ ಎಂಬ ಪ್ರಶ್ನೆಯನ್ನು ಎತ್ತಿ ಅವನ ಪಾತ್ರವನ್ನು ಸಮರ್ಥಿಸುತ್ತಾರೆ. ಶರಶ್ಚಂದ್ರರ ಸ್ವತಂತ್ರವಾದ ಯೋಚನೆಯ ಲಹರಿ ಈ ಕಥೆಯ ಹಿಂದೆ ಕೆಲಸ ಮಾಡಿದೆ.

ಮತ್ತೊಂದು ಶಕ್ತಿಶಾಲಿಯಾದ ಕಥೆಯೆಂದರೆ ಶರಶ್ಚಂದ್ರರ 'ಮಹೇಶ'. ಇದರ ವಸ್ತು ಬಂಗಾಳದ ಸಂಸ್ಕೃತಿ, ಸಮಾಜವನ್ನು ಮೀರಿ ವಿಶ್ವಾತ್ಮಕ ಮೌಲ್ಯಗಳನ್ನು ಒಳಗೊಂಡಿದೆ. ಇದರ ವಸ್ತು ಸಾರ್ವಕಾಲಿಕವಾದುದು. ಇದನ್ನು ಕನ್ನಡಕ್ಕೆ ಸೊಗಸಾಗಿ ಮೇವುಂಡಿ ಮಲ್ಲಾರಿ ಅವರು ಅನುವಾದಿಸಿದ್ದಾರೆ. ಇದು ಪ್ರಪಂಚದ ಶ್ರೇಷ್ಠ ಕಥೆಗಳಲ್ಲಿ ಒಂದಾಗಿದೆ ಎಂದು ಅನೇಕ ವಿಮರ್ಶಕರು ಅಭಿಪ್ರಾಯಪಟ್ಟಿರುವುದರಲ್ಲಿ ನಿಜಾಂಶವಿದೆ. "ಮಹೇಶ ಎಲ್ಲ ವಿಮರ್ಶಕರ ಅಭಿಪ್ರಾಯದಲ್ಲಿ ಶರಶ್ಚಂದ್ರರ ಶ್ರೇಷ್ಠ ಕತೆ. ಪ್ರಪಂಚದ ಒಂದು ಅತ್ಯುತ್ತಮ ಕಥೆ ಎನ್ನುವವರೂ ಇದ್ದಾರೆ."[೮] ವಿವರವಾದ ವರ್ಣನೆ, ಘಟನೆ, ಕ್ಷಾಮ, ಬಡತನ, ಹಸಿವು, ಜಾತೀಯತೆ, ಧರ್ಮ – ಹೀಗೆ ಕಥೆಯು ಶಕ್ತಿಶಾಲಿಯಾಗಿ ಬೆಳೆಯುತ್ತಾ ಪರಿಣಾಮದಲ್ಲಿ ಏಕಾಗ್ರತೆಯನ್ನು ಸಾಧಿಸಿದೆ. ಸಮಾಧಾನವನ್ನೇ ತಿಳಿಯದ ಒಬ್ಬ ಮನುಷ್ಯನ ಸಂಕಟದ ಕಥೆ ಇದೆ. ಈ ಸಂಕಟವನ್ನು ದುಃಖವನ್ನು, ಬಡತನವನ್ನು ಹೇಳುವಲ್ಲಿನ ವ್ಯಂಗ್ಯ ಕಥೆಯಲ್ಲಿನ ನೋವನ್ನು ಯಾತನೆಯನ್ನು ಇನ್ನೂ ಭಯಂಕರವಾಗಿಸುತ್ತದೆ. ಕಥೆಯು ಭಾವಗೀತೆಯ ಥರ ಇರುತ್ತದೆ ಎನ್ನುತ್ತಾರೆ; ನಿಜ, ಈ ಕಥೆಯು ಒಂದು ಸುಂದರವಾದ ಭಾವಗೀತೆಯ ತೀವ್ರ ಪರಿಣಾಮವನ್ನು ಉಂಟುಮಾಡುತ್ತದೆ.

---

೮. ಹಾ.ಮಾ. ನಾಯಕ, (ಸಂ.) ಶರತ್‌ಚಂದ್ರ, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ೧೯೭೭, ಪುಟ xv

ಈ ಕಥೆಯಲ್ಲಿ ಗಫೂರ್ ಎಂಬ ಕೃಷಿಕ ಮುಸಲ್ಮಾನ ಮತ್ತು 'ಮಹೇಶ' ಎಂಬ ಒಂದು ಹೋರಿ ಇಬ್ಬರೂ ನಾಯಕರಿದ್ದಾರೆ. ಇದನ್ನು ಬೇಕಾದರೆ 'ಗಫೂರನ ಹೋರಿ' ಎಂದು ಕರೆಯಬಹುದಾಗಿದೆ. ಪ್ರಸ್ತುತ ಭಾರತದ 'ಗೋರಕ್ಷಣೆ'ಯ ಪರಿಕಲ್ಪನೆಯ ಹಿನ್ನೆಲೆಯಲ್ಲಿ ಈ ಕಥೆಯನ್ನು ನೋಡಿದಾಗ ಇದರ ಪ್ರಸ್ತುತತೆ, ಇದರ ಸಮಸ್ಯೆ, ಇದರ ಧಾರ್ಮಿಕ ಸಂಘರ್ಷ – ಇವೆಲ್ಲಾ ಇಲ್ಲಿ ಅನಾವರಣಗೊಳ್ಳುತ್ತವೆ. ಈ ಕಥೆಯನ್ನು ಕುರಿತು ವಿಶರ್ಮಕ ಸುಬೋಧಚರಿತ್ರ ಸೇನ್ ಗುಪ್ತರು ಇಂಗ್ಲಿಷಿನಲ್ಲಿ ಬರೆದಿರುವ ಟಿಪ್ಪಣಿಯನ್ನು ವಿಮರ್ಶಕ ವಿ.ಎಂ. ಇನಾಂದಾರ್ ಅನುವಾದಿಸಿದ್ದಾರೆ.

ಗಫೂರ್ ಒಬ್ಬ ಮುಸಲ್ಮಾನ ಕೃಷಿಕ. ಆತನಿಗೆ ತಾನು ಸಾಕಿ ಬೆಳೆಯಿಸಿದ ಮಹೇಶ ಎಂಬ ಹೆಸರಿನ ಹೋರಿಯೊಂದರ ಹೊರತು ಬೇರೆ ಯಾರೂ ಅವನಿಗೆ ಸ್ನೇಹಿತರಿಲ್ಲ. ಅನ್ನಕ್ಕಾಗಿ ಹೋರಿ ಈತನನ್ನು ಅವಲಂಬಿಸಿದ ಹಾಗೆ ತನ್ನ ಅನ್ನಕ್ಕಾಗಿ ಈತನೂ ಅದನ್ನೇ ಅವಲಂಬಿಸಿಕೊಂಡಿರುತ್ತಾನೆ. ಆತನು ಕಡುಬಡವ. ನೋಡಿಕೊಳ್ಳುವುದಕ್ಕೆ ಯಾರೂ ಇಲ್ಲವೆಂದರೆ ಇಲ್ಲವೇ ಇಲ್ಲ. ಆತನಿಗೆ ಅನ್ನ ಸಿಕ್ಕುವುದು ಕಷ್ಟವಾಗಿದೆ. ಮಹೇಶನಿಗೆ ಹುಲ್ಲು ಸಿಕ್ಕುವುದು ಕಷ್ಟವಾಗಿದೆ. ಕೆಲವೇ ಮಾತುಗಳಲ್ಲಿ ಶರಶ್ಚಂದ್ರರು ಬಡತನದ ಭೀಕರತೆಯನ್ನು ಕಣ್ಣೆದುರು ನಿಲ್ಲಿಸುತ್ತಾರೆ.

ಗಫೂರ್ ತನ್ನ ಗುಡಿಸಲ ಮನೆಯ ಛಾವಣಿಯಲ್ಲಿರುವ ಹುಲ್ಲನ್ನೇ ತೆಗೆದು ಮಹೇಶನಿಗೆ ಆಹಾರವನ್ನಾಗಿ ಕೊಡುತ್ತಾನೆ. ಆದರೆ ಅದು ಎಷ್ಟು ದಿನಕ್ಕೆ ಆದೀತು? ಕರುಣಾಸ್ಪದವಾದರೂ ಧೀರವಾದ ಇಂತಹದ್ದಕ್ಕೆ ವಿರುದ್ಧವಾಗಿ ಬ್ರಾಹ್ಮಣ ಜಮೀನುದಾರರ ಊರಿನಲ್ಲಿಯ ಗೋಮಾಳಗಳೆಲ್ಲವನ್ನೂ ದುರ್ಮಾರ್ಗದಿಂದ ತನ್ನ ಆಸ್ತಿಯನ್ನಾಗಿಸಿಕೊಂಡಿದ್ದಾನೆ. ಅಂತಹ ಭೂಮಿಯೊಂದರಲ್ಲಿ ಅಪ್ಪಿತಪ್ಪಿ ಮಹೇಶ ಕಾಲಿರಿಸಿದ್ದಾದರೆ ಅದನ್ನು ಹಿಡಿದು ಆತ ಕೊಂಡವಾಡೆಗೆ ಹಾಕಿಬಿಡುತ್ತಾನೆ. ಆಗ ಗಫೂರ್ ತನ್ನಲ್ಲಿ ಇದ್ದ ಬದ್ದುದ್ದನ್ನು ಬೇರೆಯವರಿಗೆ ಅಡವಿಟ್ಟು ಆ ತನ್ನ ಹೋರಿ ಮಹೇಶನನ್ನು ಬಿಡಿಸಿಕೊಂಡು ಬರಬೇಕಾಗುತ್ತದೆ. ಆಗ ಗಫೂರ್ ಈ ಕಷ್ಟಗಳನ್ನು ಸಹಿಸಲಾಗದೆ ಒಂದು ಸಲ ತನ್ನ ಹೋರಿಯನ್ನು (ದನವನ್ನು) ಕಟುಕರಿಗೆ ಏಕೆ ಮಾರಿಬಿಡಬಾರದು? ಎಂದುಕೊಳ್ಳುತ್ತಾನೆ.

ಆದರೆ ಕಟುಕ ಬಂದು ಅದರ ಮೈಚರ್ಮವನ್ನು ಗಮನಿಸುತ್ತಿದ್ದ ಬಗೆಯನ್ನು ನೋಡಿದಾಗ ಈತನ ಮೈ ನಡುಗುತ್ತದೆ. ಭೀಕರವಾದ ಆ ಯೋಚನೆಯನ್ನು ಬಿಟ್ಟುಕೊಡುತ್ತಾನೆ. ಗಫೂರ ತನ್ನ ಹೋರಿಯನ್ನು ಕಟುಕನಿಗೆ ಮಾರಬೇಕೆಂದ ವಿಷಯ ಬ್ರಾಹ್ಮಣ ಜಮೀನುದಾರನನ್ನು ತಲುಪಿದಾಗ ಆತನಿಗೆ ಕೋಪ ಬರುತ್ತದೆ. ಗಫೂರನನ್ನು ಕರೆಯಿಸಿ ಆತನಿಗೆ ಶಿಕ್ಷೆಯನ್ನು ವಿಧಿಸುತ್ತಾನೆ. ಗಫೂರ್ ಅದನ್ನು ವಿನಮ್ರವಾಗಿ ಒಪ್ಪಿಕೊಳ್ಳುತ್ತಾನೆ. ಈ ಸನ್ನಿವೇಶದಲ್ಲಿಯ ವ್ಯಂಗ್ಯ ಅಸಹನೀಯವಾಗುತ್ತದೆ. ಗಫೂರ್ ನಿರಾಶೆಯ ಆಳವನ್ನೇ ತಲುಪುತ್ತಾನೆ. ತನಗಾಗಲೀ, ತಾನು ಸಾಕಿದ ಪ್ರಾಣಿಗಾಗಲೀ ಅನ್ನವನ್ನು ದೊರಕಿಸುವ ದಾರಿಯೇ ಅವನಲ್ಲಿ ಉಳಿಯುವುದಿಲ್ಲ.

ಮಹೇಶನಿಗಾದರೂ ಹಸಿವನ್ನು ತಡೆಯದಾಗುತ್ತದೆ. ಇದನ್ನೆಲ್ಲಾ ನೋಡಲಾಗದ ಮನಸ್ಥಿತಿಯಲ್ಲಿ ಒಂದು ದಿನ ಗಪೂರ್ ಮಹೇಶನನ್ನು ಕೊಂದುಬಿಡುತ್ತಾನೆ.

ಬ್ರಾಹ್ಮಣ ಜಮೀನುದಾರನ ಸಹವರ್ತಿಯಾದ ಬ್ರಾಹ್ಮಣ ಪಂಡಿತ (ಪುರೋಹಿತ) ಅವಸರವಸರವಾಗಿ ಪ್ರಾಯಶ್ಚಿತ್ತದ ವ್ಯವಸ್ಥೆಯನ್ನು ಮಾಡಿ ಅದಕ್ಕೆ ತಗುಲುವ ವೆಚ್ಚವನ್ನು ಲೆಕ್ಕ ಮಾಡುತ್ತಿದ್ದ ಹಾಗೆ ಕಥೆಯಲ್ಲಿಯ ಕಟುವ್ಯಂಗ್ಯ ತನ್ನ ಪರಮಾವಧಿಯನ್ನು ಮುಟ್ಟುತ್ತದೆ. ನಿರ್ವಿಕಾರವಾಗಿ, ಹಠದಿಂದೆಂಬಂತೆ ಗಪೂರ್ ತನ್ನ ಹಣೆಬರಹವನ್ನು ಅಂಗೀಕರಿಸುತ್ತಾನೆ. ತನ್ನ ಗುಡಿಸಲು ಮತ್ತು ನೆಲಕ್ಕೆ ಅಂಟಿಕೊಂಡಿರುವುದರಲ್ಲಿ ಯಾವ ಅರ್ಥವನ್ನೂ ಕಾಣದೆ ಸಣಬಿನ ಕಾರ್ಖಾನೆಯಲ್ಲಿ ಕೂಲಿಯಾಗಿ ಕೆಲಸಕ್ಕೆ ಸೇರುತ್ತಾನೆ. ಇದು ಒಬ್ಬ ಕೃಷಿಕನ ವ್ಯಕ್ತಿಗತವಾದ ಕಷ್ಟದ ಕಥೆಯಲ್ಲ. ಆದರೆ ಆತನ ಬದುಕಿನ ಕಥೆಯನ್ನು ಹೇಳಿ ಶೋಷಿತವಾದ ಮುಸಲ್ಮಾನನ ಕೃಷಿಕ ಹಾಗೂ ಶೋಷಕರಾಗಿದ್ದ ಬ್ರಾಹ್ಮಣ ಜಮೀನುದಾರ, ಬ್ರಾಹ್ಮಣ ಪಂಡಿತ ಹಾಗೂ ಚುರುಕಿನ ಕಾಯಸ್ಥ ಗೃಹಸ್ಥನಾದ ಮಣಿಕ್ ಘೋಷ್ ಇವರ ನಡುವಣ ವೈದೃಶ್ಯವನ್ನು ಬಯಲಿಗೆಳೆದು ಗ್ರಾಮಾಂತರದಲ್ಲಿಯ ಸಾಮಾಜಿಕ ಜೀವನದ ಅಪಚಾರಗಳನ್ನು ಶರಶ್ಚಂದ್ರರು ಬೇರೆ ಯಾರೂ ಸಾಧಿಸಲಾಗದ ನಿಖರತೆಯಿಂದ ಹಾಗೂ ಶಕ್ತಿಯಿಂದ ನಿರೂಪಿಸಿದ್ದಾರೆ.

ಇಲ್ಲಿ ಶರಶ್ಚಂದ್ರರ ಎಲ್ಲಾ ಕಥೆಗಳು ಹಾಗೂ ಕಾದಂಬರಿಗಳನ್ನು ಕುರಿತು ಸಮೀಕ್ಷಿಸುವುದಾಗಲೀ, ವಿವರವಾದ ವಿಶ್ಲೇಷಣೆಗೆ ಒಳಗು ಮಾಡುವುದಾಗಲೀ ಸಾಧ್ಯವಿಲ್ಲ ಎಂಬುದು ನಮಗೆ ಗೊತ್ತಿದೆ. ಆದರೆ ಮೇಲ್ಕಾಣಿಸಿದ ಕಥೆಗಳು ಹಾಗೂ ಕಾದಂಬರಿಗಳು ಕನ್ನಡಕ್ಕೆ ಬಂದಂತಹವುಗಳಾಗಿವೆ. ಆದರೆ ಆ ಎಲ್ಲಾ ಕನ್ನಡಾನುವಾದಿತ ಕಥೆಗಳನ್ನು ಹಾಗೂ ಕಾದಂಬರಿಗಳನ್ನು ಕುರಿತು ಕೂಡ ಇಲ್ಲಿ ಸಮೀಕ್ಷಿಸಲು ಹೋಗಿಲ್ಲ. ಬದಲಾಗಿ ಕನ್ನಡ ಸಂಸ್ಕೃತಿ, ಪರಿಸರ ಹಾಗೂ ಸಮಾಜವನ್ನು ಪ್ರಭಾವಿಸಿದ ಮತ್ತು ಕನ್ನಡದ ಬದುಕಿಗೆ ಸಮೀಪವಾಗಿರುವಂತಹ ಕಥೆ ಹಾಗೂ ಕಾದಂಬರಿಗಳನ್ನು ಇಲ್ಲಿ ಸೂಕ್ಷ್ಮವಾಗಿ, ಸಂಕ್ಷಿಪ್ತವಾಗಿ ವಿಶ್ಲೇಷಣೆಗೆ ಒಳಗು ಮಾಡುವ ಪ್ರಯತ್ನವನ್ನು ಮಾಡಲಾಗಿದೆ.

### ೯.೬. ಕನ್ನಡ ಸಾಂಸ್ಕೃತಿಕ ಪರಿಸರ, ಬಂಗಾಳಿ ಸಾಹಿತ್ಯ ಹಾಗೂ ಶರಶ್ಚಂದ್ರ

ಐತಿಹಾಸಿಕವಾಗಿ ಮತ್ತು ಸಾಂಸ್ಕೃತಿಕವಾಗಿ ಕರ್ನಾಟಕ – ಕನ್ನಡ ಸಾಹಿತ್ಯ ಹಾಗೂ ಬಂಗಾಳ – ಬಂಗಾಳಿ ಸಾಹಿತ್ಯಕ್ಕೂ ಇರುವ ನಂಟು ಗಾಢವಾದುದು. ಅದರಲ್ಲೂ ಹತ್ತೊಂಬತ್ತು ಮತ್ತು ಇಪ್ಪತ್ತನೆಯ ಶತಮಾನಗಳಲ್ಲಿ ಬಂಗಾಳಿ ಸಾಹಿತ್ಯದ ಅನುವಾದದ ಮೂಲಕ ಹಾಗೂ ಆಧ್ಯಾತ್ಮಿಕ ತತ್ವಗಳ ಮೂಲಕ ಕನ್ನಡ ಸಾಹಿತ್ಯ ಪಡೆದ ಪ್ರೇರಣೆ, ಪ್ರಭಾವ ಅಗಾಧವಾದುದು. ರಾಮಕೃಷ್ಣ ಪರಮಹಂಸ, ಅರವಿಂದ, ವಿವೇಕಾನಂದ, ರಾಜರಾಮ ಮೋಹನರಾಯ್, ರವೀಂದ್ರನಾಥ ಠಾಕೂರ್, ಬಂಕಿಮಚಂದ್ರ, ಶರಶ್ಚಂದ್ರ, ಮಹಾಶ್ವೇತಾದೇವಿ ಮುಂತಾದ ಆಧ್ಯಾತ್ಮಿಕವಾದಿಗಳು ಮತ್ತು ಲೇಖಕರಿಂದ ಕನ್ನಡ ಸಾಹಿತ್ಯ ಪಡೆದ ವಿಚಾರಧಾರೆ ಅರ್ಥಪೂರ್ಣವಾದುದು. ಪರಮಹಂಸರಿಂದ ಕುವೆಂಪು, ಅರವಿಂದರಿಂದ ಬೇಂದ್ರೆ ಕನ್ನಡ ನವೋದಯದ ಸಂದರ್ಭದಲ್ಲಿ ತಮ್ಮ ಸೃಜನಶೀಲ ಅಭಿವ್ಯಕ್ತಿಗೆ ಪಡೆದ ಪ್ರೇರಣೆ, ಪ್ರಚೋದನೆ

ಐತಿಹಾಸಿಕವಾಗಿ ದಾಖಲಾಗಿದೆ. ಹಾಗೆಯೇ ಬಂಗಾಳದ ಲೇಖಕರಿಂದ ನೇರವಾಗಿ, ಅನುವಾದಿತ ಕೃತಿಗಳ ಮೂಲಕ ಆಧುನಿಕ ಕನ್ನಡ ಲೇಖಕರು ಪಡೆದ ಪ್ರೇರಣೆಯೂ ಸಾಂದರ್ಭಿಕವಾಗಿ ವ್ಯಕ್ತವಾಗಿದೆ. ಬಂಗಾಳದ ಈ ಮಹನೀಯರೆಲ್ಲಾ ಕನ್ನಡದ ಸಂವೇದನೆಯನ್ನು, ಕನ್ನಡದ ಪರಿಸರವನ್ನು ವೈಚಾರಿಕವಾಗಿ, ಶೈಕ್ಷಣಿಕವಾಗಿ ತಿದ್ದಿದವರು ಮತ್ತು ವಿಸ್ತರಿಸಿದವರು. ಹೊಸಗನ್ನಡದ ಅರುಣೋದಯದ ಸಂದರ್ಭದಲ್ಲಿ ಬಂಗಾಳದಿಂದ ಹರಿದು ಬಂದ ಹೊಸ ಸಾಹಿತ್ಯಿಕ ಪ್ರಕಾರಗಳು ಕನ್ನಡ ಪರಿಸರ, ಸಾಹಿತ್ಯ ಹಾಗೂ ಸಮಾಜಗಳಲ್ಲಿ ಆಧುನಿಕ ಪ್ರಜ್ಞೆ ಬೆಳೆಯಲು ಸಹಕಾರಿಯಾದವು. ಆರಂಭದಲ್ಲಿ ಬಿ. ವೆಂಕಟಾಚಾರ್ಯರ ಅನುವಾದದ ಮೂಲಕ ಬಂದ ಬಂಗಾಳಿ ಕಾದಂಬರಿಗಳು ಕನ್ನಡದಲ್ಲಿ ಕಾದಂಬರಿಯ ಅಭಿರುಚಿಯನ್ನು ಬೆಳೆಸಿದವು. ಆದರೆ ವೆಂಕಟಾಚಾರ್ಯರು ಹೆಚ್ಚಾಗಿ ಬಂಕಿಮಚಂದ್ರರ ಕಾದಂಬರಿಗಳನ್ನು ಅನುವಾದಿಸಿದರು. ಆದರೆ ಯಾಕೋ ಏನೋ ಶರಶ್ಚಂದ್ರರ ಕಾದಂಬರಿ / ಕಥೆಗಳನ್ನು ಅನುವಾದಿಸದೆ ಹೋದದ್ದು ಆಶ್ಚರ್ಯ ತರುತ್ತದೆ. ಬಿ. ವೆಂಕಟಾಚಾರ್ಯರು ಮತ್ತು ಎ.ಆರ್. ಕೃಷ್ಣಶಾಸ್ತ್ರಿಗಳು ಬಂಗಾಳಿ ಭಾಷೆ ಕುರಿತು ಕನ್ನಡಕ್ಕೆ ಒಂದು ತಳಪಾಯವನ್ನು ಹಾಕಿಕೊಟ್ಟರು. ಕೃಷ್ಣಶಾಸ್ತ್ರಿಗಳು ಬಂಕಿಮಚಂದ್ರರ ಕೃತಿಗಳನ್ನು ಬಂಗಾಳಿಯಲ್ಲಿಯೇ ಅಧ್ಯಯನ ಮಾಡಿ ಸ್ವತಂತ್ರವಾದ ಗ್ರಂಥವನ್ನೇ ರಚಿಸಿದ್ದು ಚಾರಿತ್ರಿಕವಾಗಿ ಮುಖ್ಯವಾದ ಸಂಗತಿ.

ಚಾರಿತ್ರಿಕವಾಗಿ ನೋಡಿದರೆ ಆರಂಭದಲ್ಲಿ ಬಂಗಾಳ ಬ್ರಿಟೀಷರ ವಸಾಹತುಶಾಹಿ ಆಡಳಿತಕ್ಕೆ ಒಳಪಟ್ಟಿತ್ತು. ಇದು ವಸಾಹತುಶಾಹಿಯ ಪ್ರಕ್ರಿಯೆಗೆ ತುತ್ತಾಗಿತ್ತು. ಆಗ ಆಂಗ್ಲರ ಆಡಳಿತವನ್ನು ವಿರೋಧಿಸುವಲ್ಲಿ ದೇಶದಲ್ಲಿ ಅಭಿಪ್ರಾಯವನ್ನು ಮೂಡಿಸುವಲ್ಲಿ ಮುಂಚೂಣಿಯಲ್ಲಿತ್ತು. ಸ್ವತಂತ್ರವಾದ ಪ್ರಜ್ಞೆಯೊಂದು ಆಗ ಮೂಡತೊಡಗಿತ್ತು. ಇಂಗ್ಲಿಷ್ ಭಾಷೆಯ ಶಿಕ್ಷಣ ಅವರಿಗೆ ಮೊದಲು ದೊರೆತಿತ್ತು. ಬಂಗಾಳ ಭಾರತೀಯತೆಯನ್ನು ಪ್ರತಿಪಾದಿಸಲು ತೊಡಗಿದ್ದರೆ ಮಹಾರಾಷ್ಟ್ರದಲ್ಲಿ ಹಿಂದುತ್ವ ಪ್ರತಿಪಾದನೆ ಶುರುವಾಗಿತ್ತು. ಅಂದು ಪ್ರಚಲಿತದಲ್ಲಿದ್ದ ಮಾತೆಂದರೆ, ಬಂಗಾಳ ಯೋಚಿಸುವುದು ನಾಳೇ ಇಡೀ ಭಾರತ ಯೋಚಿಸುತ್ತದೆ ಎಂಬುದು. ಇದು ನಿಜವೂ ಆಗಿತ್ತು. ಹೊಸ ಬದಲಾವಣೆಯ ಗಾಳಿ, ಪುನರುಜ್ಜೀವನದ ಗಾಳಿ ಬಂಗಾಳದಲ್ಲಿ ಬೀಸತೊಡಗಿತ್ತು. ಈ ಹವಾದಿಂದ ಬಂಗಾಳದ ಜಮೀನ್ದಾರಿ ಪದ್ಧತಿಯಲ್ಲಿ ಮಧ್ಯಮವರ್ಗಗಳಲ್ಲಿ ಹೊಸ ಚಲನೆ ಕಾಣಿಸಿಕೊಂಡಿತು. ಇಂಗ್ಲಿಷ್ ಶಿಕ್ಷಣದ ಪ್ರಭಾವದಿಂದ ಹೊಸ ಪೀಳಿಗೆಯ ಲೇಖಕರ ಉದಯವಾಗತೊಡಗಿತು.

ಪ್ರಗತಿಶೀಲತೆ ಮತ್ತು ಪ್ರತಿಗಾಮಿತನಗಳನ್ನು ವಿಲೀನಗೊಳಿಸಿಕೊಂಡು ಹೊಸದಾಗಿ ಉದಯಿಸಿದ ಬಂಗಾಳದೊಡನೆ ಕನ್ನಡದ ಸಂಪರ್ಕ ಏರ್ಪಟ್ಟು, ಸ್ವಾತಂತ್ರ್ಯ ಚಳುವಳಿ, ರಾಷ್ಟ್ರೀಯವಾದ, ಕನ್ನಡಕ್ಕೆ ಹೊಸ ಸಾಹಿತ್ಯಿಕ ವಸ್ತುಗಳಲ್ಲಿ ಹೊಸ ಪ್ರಜ್ಞೆಯನ್ನು ತಂದುಕೊಂಡಿತು. ಹತ್ತೊಂಬತ್ತನೆಯ ಶಥಮಾನದಲ್ಲಿ ಭಾಷಾಂತರದ ಚಟುವಟಿಕೆಗಳು ತೀವ್ರವಾಗಿ ನಡೆದು ಬಂಗಾಳದೊಡನೆ ಕನ್ನಡ ಜಗತ್ತು ಸಾಂಸ್ಕೃತಿಕ ಸಂಬಂಧವನ್ನು ಹೆಚ್ಚಿಸಿಕೊಂಡಿತು. ಬಂಗಾಳಿ ಕಾದಂಬರಿಗಳ ಭಾರತೀಯ

ಪ್ರಜ್ಞೆ, ಸ್ತ್ರೀಪಾತ್ರ ವಿವೇಚನೆ ಹಾಗೂ ಧರ್ಮ ಸೂಕ್ಷ್ಮಗಳನ್ನು, ವಿಧಿ ನಿಷೇಧಗಳನ್ನು, ಸಂಪ್ರದಾಯಗಳನ್ನು ನಿರ್ವಹಿಸುವ ರೀತಿಯು ಆಕರ್ಷಣೀಯವಾಗಿ ಕನ್ನಡಕ್ಕೆ ಕಂಡಿತು. ಅದರಿಂದ ಬಂಗಾಳಿ ಕಾದಂಬರಿಗಳನ್ನು ಕನ್ನಡದ ಸಾಂಸ್ಕೃತಿಕ ಪರಿಸರಕ್ಕೆ ತರಲು ಯತ್ನ ನಡೆಯಿತು. ಪ್ರೀತಿ, ಪ್ರೇಮ, ವಿಘಟನೆ, ಕುಟುಂಬ, ಕೋರ್ಟ್, ಇಂಗ್ಲಿಷ್ ಶಿಕ್ಷಣ ಮತ್ತು ದಾಂಪತ್ಯಗಳನ್ನು ಚಿತ್ರಿಸುವ ಸಾಮಾಜಿಕ ಕಾದಂಬರಿಗಳನ್ನು ಕನ್ನಡಕ್ಕೆ ಮೊದಲ ಘಟ್ಟದಲ್ಲಿ ಅನುವಾದಿಸಲಾಯಿತು. ಇದರಿಂದ ಕನ್ನಡದಲ್ಲಿ ಆಧುನಿಕತೆಯು ಗಾಳಿ ಬೀಸಲು ಇದು ಪ್ರೇರಣೆಯಾಯಿತು. ಬಂಗಾಳಿಯಿಂದ ಬಿ. ವೆಂಕಟಾಚಾರ್ಯರೊಬ್ಬರೇ ಸುಮಾರು ೭೫ ಕೃತಿಗಳನ್ನು ಕನ್ನಡಕ್ಕೆ ತಂದಿದ್ದಾರೆ. ಇವುಗಳಲ್ಲಿ ಸುಮಾರು ೬೦ಕ್ಕೂ ಹೆಚ್ಚು ಕಾದಂಬರಿಗಳಿವೆ.

ಬಂಗಾಳಿ ಹೆಣ್ಣಿನ ಜೀವನಗಾಥೆಗಳನ್ನು ಚಿತ್ರಿಸಿದ್ದು ಶರಶ್ಚಂದ್ರರ ಹೆಗ್ಗಳಿಕೆ. ಕಾದಂಬರಿಯನ್ನು ಓದುವ ವರ್ಗವೊಂದು ಸೃಷ್ಟಿಯಾಗಿದ್ದ ಕಾಲಘಟ್ಟದಲ್ಲಿ ಶರಶ್ಚಂದ್ರರ ಕಾದಂಬರಿಗಳು ಓದುಗ ವರ್ಗದ ಮೇಲೆ ಬೀರಿದ ಪ್ರಭಾವ, ಪ್ರೇರಣೆ ಪರಿಣಾಮಕಾರಿಯಾದುದು. ಶರಶ್ಚಂದ್ರರ ಸುಮಾರು ೭೦ ಕಾದಂಬರಿಗಳು ಕನ್ನಡಕ್ಕೆ ಅನುವಾದಗೊಂಡಿವೆ. ಮೇವುಂಡಿ ಮಲ್ಲಾರಿ, ಗುರುನಾಥ ಜೋಶಿ, ಕೆ. ವೀರಭದ್ರ, ಅಹೋಬಲ ಶಂಕರ, ಎಸ್.ಎ. ಬುರ್ಲಿ, ವೇದವ್ಯಾಸಾಚಾರ್ಯ, ವೆಂಕಟೇಶ್, ಜಿ. ಕುಮಾರಪ್ಪ ಮೊದಲಾದವರು ಶರಶ್ಚಂದ್ರರ ಕಾದಂಬರಿಗಳನ್ನು ಕನ್ನಡಕ್ಕೆ ಅನುವಾದಿಸಿದ್ದಾರೆ. ಈಚೆಗೆ ಕುಮಾರಪ್ಪನವರು 'ರಾಮನಿಗೆ ಬುದ್ಧಿ ಬಂತು', 'ಬಾಲುವಿನ ಕೀರ್ತಿ', 'ಬಹುರೂಪಿ ಶ್ರೀನಾಥ್' ಕಾದಂಬರಿಗಳನ್ನು ಕನ್ನಡಕ್ಕೆ ತಂದಿದ್ದಾರೆ.

ಶರಶ್ಚಂದ್ರರ ಕಾದಂಬರಿಗಳ ಅನುವಾದ ಹೆಚ್ಚಾಗಿ ನಡೆದದ್ದು ೩೦, ೪೦ ಮತ್ತು ೫೦ರ ದಶಕಗಳಲ್ಲಿ ಆಗ ಇವು ತುಂಬಾ ಜನಪ್ರಿಯತೆ ಗಳಿಸಿದ್ದವು. ಆದರೆ ಈಗ ಈ ಜನಪ್ರಿಯತೆ ಕಡಿಮೆಯಾಗುತ್ತಾ ಬಂದು, ಈಚೆಗೆ ಬಂಗಾಳಿಯಿಂದ ತುಂಬಾ ಗಂಭೀರವಾದ, ಗಹನವಾದ ಕಾದಂಬರಿಗಳು ಅನುವಾದಿತವಾಗುತ್ತಿವೆ. ಇವುಗಳಲ್ಲಿ ಮಹಾಶ್ವೇತಾ ದೇವಿಯರ ಕೃತಿಗಳು ಬಹುಮುಖ್ಯ ಅನುವಾದಗಳಾಗಿವೆ.

ಶರಶ್ಚಂದ್ರ ಅನುವಾದಿತ ಕಾದಂಬರಿಗಳ ಪ್ರಕಟಣೆಯಲ್ಲಿ ಮೊದಲಿನಿಂದಲೂ ಮುಂಚೂಣಿಯಲ್ಲಿದೆ. ಮೈಸೂರಿನ ಕಾವ್ಯಾಲಯವು ಶರಶ್ಚಂದ್ರರ ಕಾದಂಬರಿಗಳನ್ನು ಪ್ರಕಟಿಸಿದೆ. ಒಂದು ಮುಖ್ಯ ವಿಷಯವೆಂದರೆ ಇಪ್ಪತ್ತನೆಯ ಶತಮಾನದ ಮೂರನೆಯ ನಾಲ್ಕನೆಯ ಮತ್ತು ಐದನೆಯ ದಶಕಗಳಲ್ಲಿ ಶರಶ್ಚಂದ್ರರ ಕಾದಂಬರಿಗಳನ್ನು ಕನ್ನಡಕ್ಕೆ ಅನುವಾದಿಸಿದ ಲೇಖಕರಲ್ಲಿ ಬಹುಪಾಲು ಎಲ್ಲರೂ ಬ್ರಾಹ್ಮಣ ವರ್ಗಕ್ಕೆ ಸೇರಿದವರಾಗಿದ್ದಾರೆ. ಅಷ್ಟೇ ಅಲ್ಲದೆ ಈ ಲೇಖಕರೆಲ್ಲಾ ಬಹುಮಟ್ಟಿಗೆ ಮುಂಬೈ ಕರ್ನಾಟಕ ಹಾಗೂ ಹೈದ್ರಾಬಾದ್ ಕರ್ನಾಟಕದ ಬ್ರಾಹ್ಮಣ ವರ್ಗಕ್ಕೆ ಸೇರಿದವರಾಗಿದ್ದಾರೆಂಬುದೂ ಸಹ ಕುತೂಹಲಕಾರಿಯಾದುದು. ಬಿ. ವೆಂಕಟಾಚಾರ್ಯ, ಎ.ಆರ್. ಕೃಷ್ಣಶಾಸ್ತ್ರಿ ಅವರಿಂದ ಹಿಡಿದು ನಂತರದ ಅನುವಾದಕ ಲೇಖಕರ ಪಟ್ಟಿಯನ್ನು ನೋಡಿದರೆ

ಸ್ಪಷ್ಟವಾಗುತ್ತದೆ. ಇದಕ್ಕೆ ಮುಖ್ಯ ಕಾರಣ ಬಹುಶಃ ಬಂಗಾಳದ ಸಮಾಜದಲ್ಲಿನ ವೈಚಾರಿಕತೆ, ಇಂಗ್ಲಿಷ್ ಶಿಕ್ಷಣ ಮತ್ತು ಸಂಪ್ರದಾಯಗಳ ಸುಧಾರಣೆಯ ನಿಲುವುಗಳನ್ನು ಬ್ರಾಹ್ಮಣವರ್ಗದ ಈ ಲೇಖಕರು ತಮ್ಮ ಬ್ರಾಹ್ಮಣ ಸಮಾಜಕ್ಕೂ ತಂದುಕೊಳ್ಳುವುದಾಗಿರಬೇಕು ಎನ್ನಿಸುತ್ತದೆ.

ಆಗ ಶರಶ್ಚಂದ್ರರ ಕಾದಂಬರಿಗಳಲ್ಲಿ ಬ್ರಾಹ್ಮಣ ಸಮಾಜ ಎದುರಿಸುವ ಸಮಸ್ಯೆಗಳು ಕರ್ನಾಟಕದ ಬ್ರಾಹ್ಮಣ ಸಮಾಜದ ಸಮಸ್ಯೆಗಳು ಮಾತ್ರವಾಗದೆ, ಅಖಿಲಭಾರತ ಬ್ರಾಹ್ಮಣ ಸಮಾಜದ ಸಮಸ್ಯೆಗಳೂ ಆಗಿದ್ದವು. ಅವುಗಳ ಶುದ್ಧೀಕರಣಕ್ಕೆ ಈ ಬಗೆಯ ಕಾದಂಬರಿಗಳನ್ನು ಕನ್ನಡಕ್ಕೆ ತರುವುದರ ಹಿಂದೆ ಈ ಒತ್ತಾಸೆ, ಚಿಂತನೆ ಇದ್ದಿರಬಹುದು ಅನ್ನಿಸುತ್ತೆ. ಇಂತಹ ಸಾಂಪ್ರದಾಯಿಕ ಸಮಸ್ಯೆಗಳಿಗೆ ಶರಶ್ಚಂದ್ರರ ಕಾದಂಬರಿಗಳು ಮದ್ದಾಗಿವೆ. ಅವರ ವಿಚಾರ ಮತ್ತು ವೈಚಾರಿಕತೆಯನ್ನು ಇಲ್ಲಿ ಹುಟ್ಟಿಹಾಕಿವೆ. ಅನಂತಮೂರ್ತಿಯವರ 'ಸಂಸ್ಕಾರ', ಶಾಂತಿನಾಥ ದೇಸಾಯಿ ಅವರ 'ಮುಕ್ತಿ', ಭೈರಪ್ಪನವರ 'ವಂಶವೃಕ್ಷ' ಇಂತಹ ಕಾದಂಬರಿಗಳಲ್ಲಿರುವ ತುಡಿತಗಳು ಕೂಡ ಈ ಬಗೆಯವೇ ಆಗಿವೆ. ಈ ದೃಷ್ಟಿಯಿಂದ ಐತಿಹಾಸಿಕವಾಗಿ ಶರಶ್ಚಂದ್ರರ ಅನುವಾದಿತ ಕಾದಂಬರಿಗಳು, ಕಥೆಗಳು ಕನ್ನಡ ಪರಿಸರ ಅರ್ಥಾತ್ ಬ್ರಾಹ್ಮಣ ಸಮಾಜದ ಪರಿಸರದ ಮೇಲೆ ಬೀರಿದ ಪ್ರೇರಣೆ, ಪ್ರಭಾವ ಬಹುಮುಖ್ಯವಾದುದಾಗಿದೆ.

### ೯.೭. ಸಾಂಸ್ಕೃತಿಕ ತಿರುವು

ಭಾಷಾಂತರಗಳು ಮತ್ತು ಭಾಷಾಂತರ ಅಧ್ಯಯನವನ್ನು ಕುರಿತ ಬರವಣಿಗೆಗಳು ಶತಮಾನಗಳಿಂದ ಕಂಡುಬಂದರೂ ಭಾಷಾಂತರ ಅಧ್ಯಯನವೆಂಬ ಜ್ಞಾನಕ್ಷೇತ್ರ ಶೈಕ್ಷಣಿಕ ಶಿಸ್ತಾಗಿ, ಶಾಸ್ತ್ರೀಯ ಅಧ್ಯಯನದ ಶಿಸ್ತಾಗಿ ರೂಪುಗೊಂಡಿದ್ದ ಇಪ್ಪತ್ತನೆಯ ಶತಮಾನದ ಎಪ್ಪತ್ತರ ದಶಕದಿಂದೀಚೆಗೆ ಕಳೆದ ಐವತ್ತು ವರ್ಷಗಳಲ್ಲಿ ಭಾಷಾಂತರ ಅಧ್ಯಯನವು ಕ್ಷಿಪ್ರ ಬೆಳವಣಿಗೆಯನ್ನು ಕಂಡಿದೆ. ಪಂಪ, ರನ್ನ, ಕುಮಾರವ್ಯಾಸ ಮುಂತಾದ ಪ್ರಾಚೀನ ಹಾಗೂ ಮಧ್ಯಕಾಲೀನ ಕನ್ನಡ ಸಾಹಿತ್ಯದ ಕವಿಗಳು ತಮ್ಮ ಕಾವ್ಯ ಕೃತಿಗಳಿಗೆ ಆಕರಗಳನ್ನಾಗಿ ರಾಮಾಯಣ, ಮಹಾಭಾರತ, ಮಹಾಪುರಾಣಗಳನ್ನು ಆಶ್ರಯಿಸುತ್ತಿದ್ದರು. ಭಾಷಾಂತರ ಪ್ರಕ್ರಿಯೆ ಹೀಗೆ ಪ್ರಾಚೀನ ಹಾಗೂ ಮಧ್ಯಕಾಲೀನ ಸಾಹಿತ್ಯದಲ್ಲಿ ಸಂಸ್ಕೃತ ಸಾಹಿತ್ಯದಿಂದ ಪ್ರೇರಕವಾಗಿ ನಡೆದಿದೆ. ಹತ್ತೊಂಬತ್ತು ಮತ್ತು ಇಪ್ಪತ್ತನೆಯ ಶತಮಾನದ ಪೂರ್ವಾರ್ಧದಲ್ಲಿ ಕನ್ನಡ ಸಾಹಿತ್ಯವು ಸಂಸ್ಕೃತ ಸಾಹಿತ್ಯ ಹಾಗೂ ಇಂಗ್ಲಿಷ್ ಸಾಹಿತ್ಯದಿಂದ ಭಾಷಾಂತರಕ್ಕೆ ಒಳಗಾಗಿದೆ. ಈ ಕಾಲಘಟ್ಟದಲ್ಲಿ ಭಾಷಾಂತರ ಅಧ್ಯಯನಕ್ಕಿಂತ ಭಾಷಾಂತರ ಪ್ರಕ್ರಿಯೆ ನಡೆದದ್ದೇ ಹೆಚ್ಚು. ಆದರೂ ಆಗಾಗ ಭಾಷಾಂತರದ ಲೋಪದೋಷಗಳನ್ನು ಮತ್ತು ಭಾಷಾಂತರದ ಭಾಷಾತಾಂತ್ರಿಕ ಸಮಸ್ಯೆಗಳನ್ನು ಕುರಿತು ಸಾಂಪ್ರದಾಯಿಕವಾದ ವಾದ, ವಿವಾದ, ಚರ್ಚೆ ನಡೆದಿದೆ. ಆದರೆ ಈ ಎಲ್ಲಾ ಸಾಂಪ್ರದಾಯಿಕ ನಿಲುವುಗಳನ್ನು ಬಿಟ್ಟುಕೊಟ್ಟು ಭಾಷಾಂತರದ ಸಾಂಸ್ಕೃತಿಕ ಆಯಾಮಕ್ಕೆ, ಅಧ್ಯಯನಕ್ಕೆ, ಮೂಲ ಪಠ್ಯ, ಆಕರ ಪಠ್ಯ ಹಾಗೂ ಅನುವಾದಿತ ಪಠ್ಯಗಳನ್ನು ಕುರಿತು ಮತ್ತು ಆ ಅನುವಾದಿತ ಪಠ್ಯಗಳ ಹಿಂದಿನ ರಾಜಕೀಯ, ಸಾಮಾಜಿಕ ಒತ್ತಾಸೆ ಹುನ್ನಾರಗಳನ್ನು ಕುರಿತು ಸಂಶೋಧನೆಗಳು,

ಅಧ್ಯಯನಗಳು ತಾತ್ವಿಕವಾಗಿ ನಡೆದದ್ದು ಮತ್ತು ನಡೆಯುತ್ತಿರುವುದು ಇಪ್ಪತ್ತನೆಯ ಶತಮಾನದ ಕೊನೆಕೊನೆಯ ಹೊತ್ತಿಗೆ ಎನ್ನಬಹುದು. ಭಾಷಾಂತರ ಅನುವಾದ ಹಾಗೂ ಅಧ್ಯಯನ ಕ್ಷೇತ್ರಕ್ಕೆ ಇದೊಂದು ಹೊಸ ಸಾಂಸ್ಕೃತಿಕ ತಿರುವು ಎನ್ನಬಹುದಾಗಿದೆ.

ಇಪ್ಪತ್ತನೆಯ ಶತಮಾನ ಒಂದು ಕ್ಷಿಪ್ರ ಪರಿವರ್ತನೆಗಳ ಯುಗ ಎನ್ನಬಹುದಾಗಿದೆ. ಈ ಶತಮಾನದಲ್ಲಿ ದೇಶಿ ಭಾಷೆಗಳ ಕೃತಿಗಳು ಕನ್ನಡಕ್ಕೆ ಅನುವಾದವಾಗಿ ಪ್ರಕಟವಾಗುವುದರ ಮೂಲಕ ಕನ್ನಡ ಸಾಹಿತ್ಯದಲ್ಲಿ ಒಂದು ಹೊಸ ಚಲನೆ ಶುರುವಾಯಿತು. ಇವು ಬರೀ ಸಾಹಿತ್ಯ ಕೃತಿಗಳು ಮಾತ್ರವಾಗಿರದೆ, ವಿಜ್ಞಾನ, ಸಮಾಜ ವಿಜ್ಞಾನ, ಶಿಕ್ಷಣ, ಚರಿತ್ರೆ, ಅರ್ಥಶಾಸ್ತ್ರ, ಜನಾಂಗೀಯ ಅಧ್ಯಯನ, ರಾಜಕೀಯ ಶಾಸ್ತ್ರ, ತತ್ವಶಾಸ್ತ್ರ ಮೊದಲಾದ ಕೃತಿಗಳು ಇಂಗ್ಲಿಷ್ ಭಾಷೆಯಿಂದ ಮಾತ್ರವಲ್ಲದೆ, ದೇಶಿ ಬಾಷೆಯಿಂದ ಮತ್ತು ಯುರೋಪಿಯನ್ ಭಾಷೆಗಳಿಂದ ಕನ್ನಡಕ್ಕೆ ಭಾಷಾಂತರವಾಗಿ ಪ್ರಕಟವಾಗುತ್ತಾ ಕನ್ನಡದ ಸಾಂಸ್ಕೃತಿಕ ಪರಿಸರವನ್ನು ವಿಸ್ತರಿಸಿದವು. ಇದರಿಂದ ಈ ಶತಮಾನದಲ್ಲಿ ದೇಶಿ ಭಾಷೆಗಳ ಭಾಷಾಂತರ ಮಾತ್ರ ನಡೆಯದೆ, ಅದರ ಜೊತೆಗೆ ಈ ಭಾಷಾಂತರಗಳಿಂದ ಕನ್ನಡದ ಜ್ಞಾನಶಾಖೆಗಳು ಬದಲಾವಣೆಗೆ ಒಳಗಾಗಿ ಅದರಿಂದ ಹೊಸ ಹೊಸ ತೌಲನಿಕ ಹಾಗೂ ಅಂತರ್‌ಶಿಸ್ತೀಯ ಅಧ್ಯಯನಗಳೂ ರೂಪುಗೊಳ್ಳುತ್ತಾ ಹೋದವು. ಇದರಿಂದ ಕನ್ನಡದಲ್ಲಿಯೂ ನಿರಚನ ಸಿದ್ಧಾಂತ, ಸಾಂಸ್ಕೃತಿಕ ಅಧ್ಯಯನ, ಸ್ತ್ರೀವಾದ, ವಸಾಹತೋತ್ತರವಾದ ಇತ್ಯಾದಿ ವಿಮರ್ಶಾ ಪಂಥಗಳೂ, ಸಿದ್ಧಾಂತಗಳೂ ಹುಟ್ಟಿಕೊಂಡವು. ಈ ಮೂಲಕ ಭಾಷಾಂತರ ಪ್ರಕ್ರಿಯೆಯು ಹೊಸ ವಸ್ತುಗಳನ್ನು, ಹೊಸ ಗುರಿಗಳನ್ನು, ಹೊಸ ಸಿದ್ಧಾಂತಗಳನ್ನು, ಹೊಸ ಚಿಂತನೆಗಳನ್ನು, ಹೊಸ ಪ್ರಶ್ನೆಗಳನ್ನು ಹುಟ್ಟುಹಾಕಿತು.

ಇಪ್ಪತ್ತನೆಯ ಶತಮಾನದ ಸ್ವಾತಂತ್ರ್ಯಪೂರ್ವ ಹಾಗೂ ಸ್ವಾತಂತ್ರ್ಯೋತ್ತರ ಕನ್ನಡ ಸಾಹಿತ್ಯಕ್ಕೆ ದೇಶಿ ಭಾಷೆ–ಸಾಹಿತ್ಯ ಕೃತಿಗಳಲ್ಲಿ ಮುಖ್ಯವಾಗಿ ಬಂಗಾಳಿ ಸಾಹಿತ್ಯದಿಂದ ಅನುವಾದ ಕೃತಿಗಳು ಮಾಡಿದ ಪ್ರಭಾವ, ಪರಿಣಾಮ ಸಾಂಸ್ಕೃತಿಕ ರಾಜಕಾರಣಕ್ಕೆ ಮತ್ತೊಂದು ಆಯಾಮವನ್ನು ನೀಡುತ್ತದೆ. ಆಧುನಿಕ ಕನ್ನಡ ಸಾಹಿತ್ಯ ಚರಿತ್ರೆಯನ್ನು ರಚಿಸುವಾಗ 'ಭಾಷಾಂತರಗಳು ವಹಿಸಿರುವ ಪಾತ್ರ ಬಹುಮುಖ್ಯ. ಕನ್ನಡದ ಕವಿತೆ, ನಾಟಕ, ಸಣ್ಣಕಥೆ, ಕಾದಂಬರಿ ಇತ್ಯಾದಿ ಪ್ರಕಾರಗಳು ಮೈದಾಳಲು ಅನುವಾದಗಳು ಬಹಳವಾಗಿ ನೆರವಾಗಿವೆ. ಬಂಗಾಳಿ ಸಣ್ಣ ಕಥೆಗಳು ಮತ್ತು ಕಾದಂಬರಿಗಳ ಕನ್ನಡ ಅನುವಾದಗಳು ಕನ್ನಡದ ಸಾಂಸ್ಕೃತಿಕ ಲೋಕದಲ್ಲಿ ದೊಡ್ಡ ಪ್ರಭಾವ, ಪರಿವರ್ತನೆಯನ್ನೇ ಮಾಡಿವೆ. ಶರಶ್ಚಂದ್ರರ ಕಾದಂಬರಿಗಳಲ್ಲಿನ ಬ್ರಾಹ್ಮಣ ಸಮಾಜದ ಸಂಪ್ರದಾಯಗಳ ಪ್ರಶ್ನೆಗಳು ಮತ್ತು ಸ್ತ್ರೀಪ್ರಾತಿನಿಧ್ಯದ ನೆಲೆಗಳು ಕನ್ನಡದ ಬ್ರಾಹ್ಮಣ ಸಮಾಜದಲ್ಲಿನ ಬಡ ಸಂಪ್ರದಾಯಗಳಲ್ಲಿ ಹೊಸ ಚೇತನವನ್ನು ಉಂಟುಮಾಡಿವೆ.

ಬಂಕಿಮಚಂದ್ರರ 'ಆನಂದಮಠ', 'ದುರ್ಗೇಶ ನಂದಿನಿ', ಟಾಗೂರರ 'ಗೋರಾ', 'ಮನೆಜಗತ್ತು', ಶರಶ್ಚಂದ್ರರ 'ಶೇಷಪ್ರಶ್ನೆ', 'ಚರಿತ್ರ ಹೀನ', 'ದೇವದಾಸ' ಮುಂತಾದ ಅನುವಾದಿತ ಕಾದಂಬರಿಗಳು ಕನ್ನಡದ ಸಾಂಸ್ಕೃತಿಕ ಜಗತ್ತಿನ ಮೇಲೆ ಚಾರಿತ್ರಿಕವಾಗಿ ಪರಿವರ್ತನೆಗೆ ಕಾರಣವಾಗಿವೆ. ಭಾರತದಲ್ಲಿ

ಮೊಟ್ಟಮೊದಲಿಗೆ ಆಧುನಿಕತೆ ಪ್ರವೇಶ ಮಾಡಿದ್ದು ಬಂಗಾಳಿ ಸಾಹಿತ್ಯಲ್ಲಾದ್ದರಿಂದ, ನಂತರ ಅದು ಈ ಕನ್ನಡ ಅನುವಾದದ ಮೂಲಕ ಕನ್ನಡದ ಸಾಂಸ್ಕೃತಿಕ ಲೋಕಕ್ಕೂ ಪ್ರವೇಶ ಮಾಡಿದೆ. ರಾಷ್ಟ್ರೀಯವಾದದ ಸಂದರ್ಭದಲ್ಲಿ ಬಂಗಾಳದ 'ಆನಂದಮಠ' ಕಾದಂಬರಿಯು ಕನ್ನಡಕ್ಕೆ ಮಾದರಿಯಾಗಿದೆ. ಸ್ವಾತಂತ್ರ್ಯಕ್ಕಾಗಿ ಬ್ರಿಟಿಷರ ವಿರುದ್ಧ ಸಂನ್ಯಾಸಿಗಳಿಂದ ನಡೆಯುವ ಹೋರಾಟ 'ಆನಂದಮಠ'ದಲ್ಲಿ ಆದರ್ಶಪ್ರಾಯವಾಗಿ ನಿರೂಪಿತವಾಗಿದೆ. ಹದಿನೆಂಟನೆಯ ಶತಮಾನದಲ್ಲಿ ಘಟಿಸಿದ ಬಂಗಾಳದ ಕ್ಷಾಮವನ್ನು ಕೂಡ ಇದು ದಟ್ಟವಾಗಿ, ವಿವರವಾಗಿ ಕಾಣಿಸಿದೆ. ಬಂಕಿಮರು ಹೀಗೆಯೇ ತಮ್ಮ 'ದುರ್ಗೇಶ ನಂದಿನಿ' ಕಾದಂಬರಿಯಲ್ಲಿ ಭಾರತದ ಐತಿಹಾಸಿಕತೆಯನ್ನು ಸಮರ್ಥವಾಗಿ ಕಟ್ಟಿಕೊಟ್ಟಿದ್ದಾರೆ. ಇದೇ ಪರಂಪರೆಯನ್ನು ನಂತರ ಠಾಕೂರರು ಮತ್ತು ಶರಚ್ಚಂದ್ರರು ತಮ್ಮ ಕೃತಿಗಳಲ್ಲಿ ಮುಂದುವರಿಸಿದ್ದಾರೆ. ಠಾಕೂರರ 'ಗೋರಾ' ಭಾರತೀಯತೆಯ ಆದರ್ಶ ವ್ಯಕ್ತಿತ್ವದ ಪ್ರತೀಕವಾಗಿದ್ದಾನೆ.

ಶರಚ್ಚಂದ್ರರ ಕಲೆಯ ಅತ್ಯಂತ ಗಮನೀಯವಾದ ಲಕ್ಷಣವೆಂದರೆ ನೇರವಾಗಿ ಕಥೆ ಹೇಳುವ ಕ್ರಮ. ಅವರು ಕಾದಂಬರಿಗಳಲ್ಲಿ ಕೊಡುವ ಗ್ರಾಮಾಂತರ ಪ್ರದೇಶದ ಜನಜೀವನದ ದಟ್ಟ ವಿವರಗಳಾಗಲೀ, ಮನುಷ್ಯ ಮನುಷ್ಯರ ನಡುವಿನ ಸಂಬಂಧದ ಸುಖದುಃಖಗಳ ಸೂಕ್ಷ್ಮ ವಿವರಗಳಾಗಲೀ, ಇವುಗಳನ್ನು ತಮ್ಮ ಸ್ವಾನುಭವದ ನೆಲೆಯಿಂದ ನಿರೂಪಿಸುವುದನ್ನು ಕಾಣುತ್ತೇವೆ. ಶರಚ್ಚಂದ್ರರ ಬದುಕು ಮತ್ತು ಕಲೆಗಳ ನಡುವೆ ಬಿರುಕು ಇಲ್ಲ. ಅವೆರಡೂ ಅವಿನಾ ಸಂಬಂಧದಿಂದ ಕೂಡಿವೆ. ಅವರ ಅನೇಕ ಕಥೆ, ಕಾದಂಬರಿಗಳು ಅವರು ಬದುಕಿನ ವಿವಿಧ ಸ್ವರೂಪವನ್ನು ಚಿತ್ರಿಸುತ್ತವೆ. ಅವರು ತಾವು ಕಂಡಿದ್ದನ್ನು, ನೋಡಿದ್ದನ್ನು, ಅನುಭವಿಸಿದ್ದನ್ನು ಶಕ್ತಿಯುತವಾಗಿ ಚಿತ್ರಿಸುವುದನ್ನು ಕಾಣುತ್ತೇವೆ. ಅವುಗಳನ್ನು ವಿವರವಾಗಿ ಕಣ್ಣಿಗೆ ಕಟ್ಟುವಂತೆ, ಹೃದಯಕ್ಕೆ ಮುಟ್ಟುವಂತೆ ಕಥೆಯಾಗಿಸುವಲ್ಲಿ, ಕಲೆಯಾಗಿಸುವಲ್ಲಿ ಶರಚ್ಚಂದ್ರರ ಪ್ರತಿಭೆ ಅಸಾಮಾನ್ಯವಾದುದು. ಶರಚ್ಚಂದ್ರರ ಯಾವ ಕಾದಂಬರಿಯನ್ನು ತೆಗೆದುಕೊಂಡು ಒಂದೆರಡು ಪುಟ ಓದಿದರೂ ಸಾಕು ಅವರ ಕಲೆಗಾರಿಕೆಯ ವಿಶೇಷತೆ ಮನವರಿಕೆಯಾಗುತ್ತದೆ. ಪಾತ್ರ ಚಿತ್ರಣ, ಘಟನೆಯ ವರ್ಣನೆ, ಉಕ್ತಿಗಳ ಪ್ರಸ್ತಾಪ, ಬದುಕಿನ ಬವಣೆ, ಸಂಭಾಷಣಾ ಶೈಲಿಯ ಕೌಶಲ, ಕಥೆಯ ನಿರೂಪಣಾ ಸಂವಿಧಾನ, ಅದರ ವಿನ್ಯಾಸ ಇವೆಲ್ಲಾ ಶರಚ್ಚಂದ್ರರಿಗೆ ಸಿದ್ಧಿಸಿರುವ ಪರಿಪಕ್ವ ಫಲಗಳಾಗಿವೆ. ಶರಚ್ಚಂದ್ರರ ಕಾದಂಬರಿಯ ಒಂದೆರಡು ಪುಟಗಳನ್ನು ತೆರೆದು ವಾಚಕರು ಓದಿದರೂ ಅವರ ಕಲೆಗಾರಿಕೆಯ ವಿಶೇಷತೆ ಅರ್ಥವಾಗುತ್ತದೆ.

ಶರಚ್ಚಂದ್ರ ಒಬ್ಬ ವಾಸ್ತವವಾದಿ ಕಾದಂಬರಿಕಾರ. ಸಮಾಜದಲ್ಲಿಯ ಕೆಡಕುಗಳ ವಿರುದ್ಧ ಇವರ ಭಾವೋದ್ರಿಕ್ತವಾದ ಪ್ರತಿಭಟನೆಯೇ ಎದ್ದು ಕಾಣುತ್ತದೆ. ಅವರ ಈ ಅಂಶ ಪ್ರಗತಿಶೀಲ ಕನ್ನಡದ ಕಾದಂಬರಿಕಾರರ ಮೇಲೆ ಪ್ರಭಾವ ಬೀರಿದೆ. ಯಾವ ದೃಷ್ಟಿಯಿಂದ ನೋಡಿದರೂ ಕಥೆ ಶರಚ್ಚಂದ್ರರ ಕೈಯಲ್ಲಿ ಒಂದು ಅದ್ಭುತವಾದ ಸಿದ್ಧಿಯಾಗಿದೆ. ಮಾನವರ ಸತ್ಯದ ದರ್ಶನವನ್ನು ಶರಚ್ಚಂದ್ರರು ತಮ್ಮ ಎಲ್ಲಾ ಕಾದಂಬರಿಗಳಲ್ಲಿ ಮಾಡಿಸಿದ್ದಾರೆ. ಕಾದಂಬರಿ ಸಾಹಿತ್ಯದ ಮೂಲಕ

ಶರಶ್ಚಂದ್ರರು ಕಂಡುಕೊಂಡಿರುವ ಬದುಕಿನ ಅಖಂಡತೆಯನ್ನು ಅಮರತ್ವದ ರಹಸ್ಯವನ್ನು ಅನಾವರಣಮಾಡಿದ್ದಾರೆ. ಇದು ಅವರ ಕಥಾಸಾಹಿತ್ಯದ ಹೆಚ್ಚುಗಾರಿಕೆ ಮತ್ತು ಶಕ್ತಿಯಾಗಿದೆ. "ಶರಶ್ಚಂದ್ರರ ಕೃತಿಗಳನ್ನು ಸಹೃದಯರು ಭಾವುಕತೆಯ ಗುಂಗಿನಲ್ಲಿ ಓದಿದ್ದಾರೆ. ಹೆಣ್ಣು ಮಕ್ಕಳಂತೂ ಅವರ ಕೃತಿಗಳನ್ನು ಓದಿ ಭಾವಪರವಶರಾಗಿ ಕಂಬನಿಗರೆದಿದ್ದಾರೆ, ರಸಾನುಭವ ಪಡೆದಿದ್ದಾರೆ."[೯] ಡಿ.ವಿ.ಕೆ. ಮೂರ್ತಿ ಅವರು ಶರಶ್ಚಂದ್ರರ ಸಾಹಿತ್ಯವನ್ನು ಕುರಿತು ಹೇಳಿರುವ ಈ ಮಾತುಗಳು ಶರಶ್ಚಂದ್ರರ ಕಥನ ಕಲೆಯ ಸಿದ್ಧಿಗೆ ಸರಿಹೊಂದುತ್ತವೆ.

---

೯. ಡಿ.ವಿ.ಕೆ. ಮೂರ್ತಿ, ಜೀವನ ಮೌಲ್ಯಗಳು ಮತ್ತು ಸಾಹಿತ್ಯ, ಡಿ.ವಿ.ಕೆ. ಮೂರ್ತಿ ಪ್ರಕಾಶನ, ಮೈಸೂರು, ೨೦೦೮, ಪುಟ ೫೦.

ಅಧ್ಯಾಯ - ಹತ್ತು

# ಕನ್ನಡ ಲೇಖಕರು ಕಂಡ ರವೀಂದ್ರನಾಥ ಠಾಕೂರರು ಮತ್ತು ಠಾಕೂರರ ಬಗೆಗಿನ ಕನ್ನಡ ವಿಮರ್ಶಾ ಕೃತಿಗಳು

೧೦.೧. ನಾನು ಕಂಡ ರವೀಂದ್ರನಾಥ ಟಾಗೋರರು : ಮಾಸ್ತಿ ವೆಂಕಟೇಶ ಅಯ್ಯಂಗಾರ್

೧೦.೨. ಶಾಂತಿನಿಕೇತನದಲ್ಲಿ: ಅ.ನ. ಕೃಷ್ಣರಾಯರು

೧೦.೩. ರವೀಂದ್ರನಾಥ ಠಾಕೂರರನ್ನು ಕುರಿತ ವಿಮರ್ಶಾ ಕೃತಿಗಳು

೧೦.೪. ಸ್ಮೃತಿಚಿತ್ರಗಳು ಮತ್ತು ಆತ್ಮಕಥೆಗಳು

ಅಧ್ಯಾಯ – ಹತ್ತು

# ಕನ್ನಡ ಲೇಖಕರು ಕಂಡ ರವೀಂದ್ರನಾಥ ಠಾಕೂರರು ಮತ್ತು ಠಾಕೂರರ ಬಗೆಗಿನ ಕನ್ನಡ ವಿಮರ್ಶಾ ಕೃತಿಗಳು

ಕನ್ನಡ ನಾಡಿನಿಂದ ರವೀಂದ್ರರ 'ಶಾಂತಿನಿಕೇತನ'ಕ್ಕೆ ಕಲಾವಿದ ವೆಂಕಟಪ್ಪ, ಅನುವಾದಕ ನಾರಾಯಣ ಸಂಗಮ ಮುಂತಾದ ಅನೇಕ ಚೇತನಗಳು ಹೋಗಿ ಅಲ್ಲಿದ್ದು ರವೀಂದ್ರರ ಸಾನ್ನಿಧ್ಯ ಪಡೆದು ತಮ್ಮ ಸೃಜನಶೀಲತೆಯನ್ನು ಅರಳಿಸಿಕೊಂಡಿದ್ದಾರೆ. ಒಮ್ಮೆ ಅಭಿಲಾಷೆಯಿಂದ ಮಾಸ್ತಿ ಮತ್ತು ಅನಕೃ ಅವರೂ ಶಾಂತಿನಿಕೇತನಕ್ಕೆ ಹೋಗಿ ಕವಿ ರವೀಂದ್ರರ ಸಾನ್ನಿಧ್ಯದಲ್ಲಿ ಕಂಡುಕೊಂಡ ತಮ್ಮಲ್ಲಿನ ಭಾವನೆಗಳನ್ನು, ಮೌಲ್ಯಗಳನ್ನು, ಆದರ್ಶಗಳನ್ನು ಹಂಚಿಕೊಂಡಿರುವುದನ್ನು ಮಾದರಿಯಾಗಿ ಎರಡು ಬರಹ ಇಲ್ಲಿ ದಾಖಲಿಸಲಾಗಿದೆ ಮತ್ತು ಠಾಕೂರರ ಬಗೆಗೆ ಕನ್ನಡದಲ್ಲಿ ಪ್ರಕಟವಾಗಿರುವ ಸ್ವತಂತ್ರ ಹಾಗೂ ಸಂಪಾದಿತ ಕೃತಿಗಳ ಸಮೀಕ್ಷೆಯನ್ನು ಇಲ್ಲಿ ವಿವೇಚಿಸಲಾಗಿದೆ.

## ೧೦.೧. ನಾನು ಕಂಡ ರವೀಂದ್ರನಾಥ ಟಾಗೋರರು : ಮಾಸ್ತಿ ವೆಂಕಟೇಶ ಅಯ್ಯಂಗಾರ್

ಆ ಮೊದಲು ನಾನು ರವೀಂದ್ರನಾಥ ಠಾಕೂರರನ್ನು ನೋಡಿದ್ದೆನಾದರೂ ನಿಜವಾಗಿ ಅವರನ್ನು ಕಂಡೆನೆನ್ನುವುದು 1933ರಲ್ಲಿ. ನೋಬೆಲ್ ಪಾರಿತೋಷಕವನ್ನೂ ಗಳಿಸಿ ಲೋಕವಿಖ್ಯಾತರಾಗಿ ಭರತವರ್ಷದ ಹೆಮ್ಮೆ ಭಾರತೀಯ ತರುಣರ ಪೂಜೆಯ ವಸ್ತುವಾಗಿ, ಅವರು ಬೆಂಗಳೂರಿನಲ್ಲಿ ನಡೆದ ಒಂದು ಉತ್ಸವಕ್ಕೆ ಅದಕ್ಕೆ 15 ವರ್ಷಕ್ಕೆ ಹಿಂದೆ ಬಂದಿದ್ದರು. ಆಗ ನಾನು ಅವರನ್ನು ಸಭೆಗಳಲ್ಲಿ ನೋಡಿದ್ದೆನು. ನಿಜದಲ್ಲಿ ಅಷ್ಟೇನೂ ಉನ್ನತವಾದ ವಿಗ್ರಹವಲ್ಲದಿದ್ದರೂ ಕೊರಳಿಂದ ಮೊಳಕಾಲವರೆಗೆ ಹರಿದಿಳಿಯತ್ತಿದ್ದ ಒಂದು ನಿಲುವಂಗಿಯಿಂದ, ತಲೆಯ ಮೇಲೆ ಎತ್ತರವಾಗಿ ಕುಳ್ಳಿರುತ್ತಿದ್ದ ಒಂದು ಟೊಪ್ಪಿಗೆಯ ಕಾರಣದಿಂದ ಅವರು ಎತ್ತರದ ಆಳು ಎಂದೇ ಕಾಣುತ್ತಿದ್ದರು. ಹೊರತಾಗಿ ಬೆಳೆದ ದಾಡಿ, ಮೀಸೆ, ಕೆನ್ನೆಯ ಮೂರು ಭಾಗವನ್ನು ಮುಟ್ಟಿ ಮಿರುಗುತ್ತಿರುವ ಕೂದಲು, ಮೇಲೆ ಸುಳಿ ಕುರುಳಿ, ಮಧ್ಯೆ ಆನೆಯ ದಂತದ ಬಣ್ಣದ ಮುಖಫಲಕ, ಅದರ ಮಧ್ಯ ಆಳವಾಗಿ ಹೊಳೆದು ಕಾಣುವ ಕಣ್ಣುಗಳು, ಕವಿಕೃತಿಯಿಂದಷ್ಟೇ ಅಲ್ಲ, ಆಕಾರ ವೇಷಭೂಷಣಗಳಿಂದಲೂ ಕವಿಯೆಂದೇ ಕಾಣುವರು. ಸಭೆಯಲ್ಲಿ ನಿಂತು ಮಾತನಾಡುವ ಕ್ಷಣದಲ್ಲಿ ಸಾವಿರಾರು ಜನರ ಸಮೂಹಗಳು ಒಂದು ಮಂತ್ರದಿಂದ ಗ್ರಸ್ತರಾದ

ಚೇತನರಂತೆ ಎವೆಯಿಕ್ಕದೆ ಅವರ ಕಡೆ ನೋಡುತ್ತಿದ್ದರು. ಮಾತು ಮೊದಲಾಯಿತೆ ಆ ಧ್ವನಿಯ ಇಂಪೆಂಥದು? ಕಂಚಿನ ಇಲ್ಲವೆ ಬೆಳ್ಳಿಯ ಜಾಗಟೆಯಿಂದ ಬರಬಹುದಾದ ಧ್ವನಿ ಈ ಮಾನವ ಕಂಠದಿಂದ ಕೇಳಿಬರುತ್ತಿದ್ದಿತು. ಠಾಕೂರರ ಆ ಸಂದರ್ಭದ ದರ್ಶನ ಚಿರಕಾಲ ನಡೆಯತಕ್ಕದಾಗಿದ್ದಿತು.

1933ರಲ್ಲಿ ನಾನು ಮೈಸೂರಿನ ವಿಶ್ವವಿದ್ಯಾನಿಲಯಕ್ಕಾಗಿ ಠಾಕೂರರನ್ನು ಕುರಿತು ನನ್ನ ಪುಸ್ತಕವನ್ನು ಬರೆಯುತ್ತಿದ್ದೆನು. ಅಂಥ ಹಿರಿಯ ಜೀವನವನ್ನು ವರ್ಣಿಸುವಲ್ಲಿ ಅವರನ್ನು ಒಮ್ಮೆಯಾದರೂ ಹತ್ತಿರದಿಂದ ಕಾಣುವುದು ಅವಶ್ಯಕವಾಯಿತು. ಜೊತೆಗೆ ಶಾಂತಿನಿಕೇತನ ಕವಿವರರು ನಿರ್ಮಿಸಿಕೊಂಡಿದ್ದ ವಿಶಿಷ್ಟ ಮನೋಧರ್ಮ ಕಾರ್ಯರಂಗ, ಅವನ್ನಾದರೂ ನೋಡುವುದು ಅವಶ್ಯಕ. ಹೀಗಾಗಿ ನಾನು ಆ ವರ್ಷದ ಮೊದಲಲ್ಲಿ ಶಾಂತಿನಿಕೇತನಕ್ಕೆ ಯಾತ್ರೆ ಹೊರಟೆನು. ಒಬ್ಬನೇ ಹೋಗಿ ಬೇಸರ ಪಡದಂತೆ ಗೆಳೆಯ ಶ್ರೀ ವಿ.ಸೀತಾರಾಮಯ್ಯನವರು ಜೊತೆಗೆ ಬಂದರು. ಕಲ್ಕತ್ತೆಯಲ್ಲಿ ಕನ್ನಡಿಗ ಹಿರಿಯ ಶ್ರೀ ಬಿ.ವಿ.ರಾಮಯ್ಯನವರು ನಮ್ಮನ್ನು ನೋಡಿಕೊಂಡು ಬೋಲ್ಪುರಕ್ಕೆ ಹೋಗುವ ರೈಲಿನಲ್ಲಿ ಕೂರಿಸಿದರು. ಬೋಲ್ಪುರವನ್ನು ಮುಟ್ಟಿ ರೈಲಿಳಿದು ಮೂರು ಮೈಲು ದಾರಿ ನಡೆದು ನಾವು ಶಾಂತಿನಿಕೇತನವನ್ನು ಒಂದು ಸಂಜೆಯ ಮುಂದು ಸೇರಿದವು.

ಶಾಂತಿನಿಕೇತನದಲ್ಲಿ ನಮ್ಮ ಗೆಳೆಯ ನಾರಾಯಣ ಸಂಗಮರು ದೊರೆಯುತ್ತಾರೆ. ಅವರು ನಮ್ಮನ್ನು ನೋಡಿಕೊಳ್ಳುತ್ತಾರೆ ಎಂದು ನಿರೀಕ್ಷಿಸಿದ್ದೆವು. ಈ ಗೆಳೆಯರು ಅಂದು ಅಲ್ಲಿರಲಿಲ್ಲ. ನಮಗೆ ಅತಿಥಿ ಮಂದಿರದಲ್ಲಿ ಸ್ಥಳ ದೊರೆಯಲಿಲ್ಲ. ಪಾಂಥಶಾಲೆ ಎಂದು ಹೆಸರು ಪಡೆದ ಒಂದು ಮಂಟಪ ಆಸರೆಯಾಯಿತು. ನಮ್ಮ ಬಟ್ಟೆ ಬರೆಯ ಗಂಟುಗಳನ್ನು ಅಲ್ಲಿಟ್ಟು ನಾವು ಆಶ್ರಮದಲ್ಲಿ ಸುತ್ತಲು ಹೊರಟೆವು. ಆಗ ಅತಿಥಿಮಂದಿರವಾಗಿದ್ದ ಕಟ್ಟಡ ಸುತ್ತಣ ಭಾಗವೇ ಶಾಂತಿನಿಕೇತನದ ಮೂಲಕ್ಷೇತ್ರ, ಅದು ಮಹರ್ಷಿ ದೇವೇಂದ್ರನಾಥರ ತಪೋಭೂಮಿ. ಇದರಾಚೆಗೆ ವಿದ್ಯಾರ್ಥಿ ಮಂದಿರಗಳು, ಆಶ್ರಮದ ಉಪಾಧ್ಯಾಯರ ಆವಾಸಗಳು, ಒಂದು ಕಡೆಗೆ ಹಸುಮಕ್ಕಳ ರಕ್ಷಾಭವನ, ಮತ್ತೊಂದು ಕಡೆಗೆ ಕವಿವರರ ವಾಸದ ಉತ್ತರಾಯಣ, ಅದರಾಚೆ ಅವರ ಕಾರ್ಯದರ್ಶಿಯ ವಾಸಗೃಹ, ಮತ್ತೂ ಆಚೆ ಒಂದೆರಡು ಬೇರೆಯ ದೊಡ್ಡ ಮನೆಗಳು. ಸ್ಥಳ ಕಾರ್ಯಶೀಲ ಔತಣಗಳಿಂದ ತುಂಬಿ ಹರಿಯುತ್ತಿದ್ದಿತು, ಇದಿಷ್ಟನ್ನು ಒಬ್ಬ ವ್ಯಕ್ತಿ ಕಟ್ಟಿ ಬೆಳೆಸಿದ್ದು. ಇದರಿಂದಲೇ ಒಂದರ್ಥದಲ್ಲಿ ನಮಗೆ ಠಾಕೂರರ ಆವಾಸದಲ್ಲಿ ರಾಜಾರಾಮ ಮೋಹನರಾಯರ ಜನ್ಮದಿನ ಅಥವಾ ಪುಣ್ಯದಿನದ ಸಲುವಾಗಿ ಒಂದು ಸಭೆ ನೆರೆಯುವುದೆಂದೂ ಕವಿ ಅದರಲ್ಲಿ ಮಾತನಾಡುವರೆಂದೂ ತಿಳಿಯಬಂತು. ಒಂದು ಹೊರಕೋಣೆ, ಹಿರಿಯರೂ ವಿದ್ಯಾರ್ಥಿನಿಯರೂ ನೂರು ಇನ್ನೂರರಷ್ಟು ಜನ ಅಲ್ಲಿ ಕುಳಿತಿದ್ದರು. ಸಭೆ ಆರಂಭವಾಗಲು ಸ್ವಲ್ಪ ತಡವಾಯಿತು. ಕವಿ ತಮ್ಮ ಭಾಷಣವನ್ನು ರಚಿಸುತ್ತಿದ್ದಾರೆ. ಅದು ಇನ್ನೂ ಸಿದ್ಧವಾಗಿಲ್ಲ ಎಂದು ತಿಳಿಯಿತು. ಸ್ವಲ್ಪ ಹೊತ್ತು ಕಳೆದ ಮೇಲೆ ಠಾಕೂರರು ಸಭೆಗೆ ಬಂದರು. ಸಭೆಯೆಲ್ಲ ಎದ್ದು ಅವರನ್ನು

ಬರಮಾಡಿಕೊಂಡಿತು. ಅವರು ಒಂದು ಬೆಂಚಿನ ಮೇಲೆ ಕುಳಿತ ಮೇಲೆ ಸಭೆ ಮತ್ತೆ ನೆಲದ ಮೇಲೆ ಕುಳಿತು ಠಾಕೂರರು ತಮ್ಮ ಭಾಷಣವನ್ನು ಓದಿ ಹೇಳಿದರು. ನಮಗೆ ಅದು ಅರ್ಥವಾಗಲಿಲ್ಲ. ವಾಕ್ಯವಾಕ್ಯದಲ್ಲೂ ಕೆಲವು ಸಂಸ್ಕೃತ ಶಬ್ದಗಳಿದ್ದುದರಿಂದ ಭಾಷಣದ ಸರಣಿ ಏನಿರಬಹುದೆಂದು ನಾವು ಊಹಿಸಿಕೊಂಡೆವು. ಮಧ್ಯೆ ಮಧ್ಯೆ ಚಮತ್ಕಾರವಾದ ವಾಕ್ಯಗಳು ಹಲವು ಇದ್ದಿರಬೇಕು. ಅವುಗಳಲ್ಲಿ ಕೆಲವು ಹಾಸ್ಯದವು. ಸಭೆ ಪುನಃ ತನ್ನ ಸಂತೋಷವನ್ನು ಹೊತ್ತು ತಮ್ಮ ರಚನೆಯನ್ನು ಓದಿ ಕವಿವರರು ಅಂದಿನ ಕೆಲಸವನ್ನು ಸಾಂಗ ಮಾಡಿದರು.

ಇದಾದ ಮೇಲೆ ಅಲ್ಲಿಯ ಒಬ್ಬ ಹಿರಿಯರು ಕವಿವರರಿಗೆ ನಮ್ಮ ಸಂಗತಿಯನ್ನು ನಿವೇದಿಸಿದರು, ಕವಿವರರು ನಮ್ಮನ್ನು ಬಳಿಗೆ ಬರಮಾಡಿಕೊಂಡರು. ನಾನು ಹಿರಿಯರಾದ ಶ್ರೀಮಾನ್ ಎನ್.ಎಸ್. ಸುಬ್ಬರಾಯರಿಂದ ಒಂದು ಪರಿಚಯ ಪತ್ತವನ್ನು ತೆಗೆದುಕೊಂಡು ಹೋಗಿದ್ದೆನು. ಅದನ್ನು ಅವರ ಕೈಗೆ ಕೊಟ್ಟೆನು. ಠಾಕೂರರು ಅದನ್ನು ಓದಿಕೊಂಡು ನಮ್ಮನ್ನು 'ನೀವು ಮೈಸೂರಿಂದ ಬಂದಿದ್ದೀರಿ' ಎಂದು ಹೇಳಿದರು. ನಾವು ಹೌದು ಎನ್ನಲು ಈ ಸುಬ್ಬರಾಯರು ತಮ್ಮ ಸ್ನೇಹಿತರು ಎಂದು ಹೇಳಿ ಅವರನ್ನು ಕುರಿತು ಕುಶಲ ಪ್ರಶ್ನೆ ಮಾಡಿದರು. ಇದಾದ ಮೇಲೆ ನಾನು ಬಂದ ಉದ್ದೇಶವನ್ನು ಅರಿಕೆ ಮಾಡಿದೆನು. ಕವಿವರರೊಂದಿಗೆ ಮಾತನಾಡಲು ಅವಕಾಶವನ್ನು ಬೇಡಿದೆನು. ಅವರು ಸದ್ಯ ಬಹಳ ಕೆಲಸದಲ್ಲಿರುವುದಾಗಿ ತಿಳಿಸಿದರು. ನಾನು 'I am not in hurry Sir, I will await your leisure' ಎಂದೆನು. ಕವಿವರರು ನಗುತ್ತ 'My leisure' ಎಂದು ಪ್ರಶ್ನೆ ಮಾಡಿದರು. ಅವರ ಬದಿಯ ದೊಡ್ಡ ಮನುಷ್ಯರೊಬ್ಬರು ಸ್ವಲ್ಪ ಗಟ್ಟಿಯಾಗಿಯೇ ನಕ್ಕು 'Don't you know, the poet never has leisure' ಎಂದರು. ನಾನು ಕವಿಗಳಿಗೆ 'Then I shall await your pleasure Sir' ಎಂದೆನು. ಮಾತು ಅವರಿಗೆ ಒಪ್ಪಿತೆಂದು ಕಾಣುತ್ತದೆ. ಅವರು ನಕ್ಕರು ಅವರನ್ನು ಕಾಣುವುದಕ್ಕೆ ಮೂರನೆಯ ದಿನ ಒಂದು ಹೊತ್ತನ್ನು ಗೊತ್ತುಮಾಡಿ ಕೊಡಿ ಎಂದು ಬದಿಯ ಹಿರಿಯರಿಗೆ ಹೇಳಿದರು, ಎದ್ದು ತಮ್ಮ ಕೋಣೆಗೆ ತೆರಳಿದರು. ರಾತ್ರಿಯ ವಿಶ್ರಾಂತಿಗೆ ನಾವು ಪಾಂಥಶಾಲೆಗೆ ಹೋದೆವು. ಮೂರನೆಯ ಬೆಳಿಗ್ಗೆ ಗೆಳೆಯ ಶ್ರೀನಾರಾಯಣ ಸಂಗಮರು ಪಾಂಥ ಶಾಲೆಯಲ್ಲಿ ಯಾರೋ ಕನ್ನಡಿಗರು ಬಂದು ಇಳಿದಿದ್ದಾರೆ ಎಂದು ತಿಳಿದು ಅಯ್ಯೋ ನೀವು ಪಾಂಥಶಾಲೆಯಲ್ಲಿ ಇಳಿಯುವಂತಾಯಿತೇ ಎಂದು ಮರುಗಿದರು. ಬೇರೆ ವಸತಿಯನ್ನು ಏರ್ಪಡಿಸಲು ಆಶ್ರಮದೊಳಕ್ಕೆ ಓಡಿದರು. ಠಾಕೂರರಿಗೆ ನಮ್ಮ ವಿಷಯವನ್ನು ತಿಳಿಸಿದಾಗ ಅವರು ಅವರಿಗೆ ಅತಿಥಿ ಮಂದಿರದಲ್ಲಿ ಸ್ಥಳ ಮಾಡಿಕೊಡು, ಅಲ್ಲಿ ಸ್ಥಳ ಇಲ್ಲದಿದ್ದರೆ ಇಲ್ಲಿಯೇ ನನ್ನ ಕೋಣೆಯ ಪಕ್ಕದ ಕೋಣೆಯನ್ನು ಕೊಡು ಎಂದರಂತೆ, ಅತಿಥಿ ಮಂದಿರದಲ್ಲಿ ಒಂದು ಕೋಣೆ ಇದ್ದಿತು, ನಮಗದನ್ನು ಕೊಟ್ಟರು. ನಾವು ಕವಿವರರ ಕೋಣೆಯ ಬದಿಯ ಕೋಣೆಯಲ್ಲಿ ಇರಬಹುದಾದಷ್ಟು ಅವರಿಗೆ ಇಷ್ಟರಾದೆವು ಎಂಬ ಸಂತೋಷದಲ್ಲಿ ಅತಿಥಿ ಮಂದಿರದಲ್ಲಿ ನಿಂತೆವು.

ಮರುದಿನ ಸಂಜೆಯಲ್ಲಿ ಕವಿವರರೊಡನೆ ಸಂಭಾಷಣೆ ಎಂದು ಗೊತ್ತಾಯಿತು. ಅದಕ್ಕೆ ಮೊದಲು ವಿಶೇಷ ಆತಿಥ್ಯದ ಅಂಗವಾಗಿ ನಾವು ಕವಿವರರ ಆಪ್ತ ಕಾರ್ಯದರ್ಶಿ ಡಾ.

ಅಮಿಯಚಂದ್ರ ಚರ್ಕವರ್ತಿ ಅವರ ಮನೆಯಲ್ಲಿ ಚಹಾ ಮುಗಿಸಿಕೊಂಡು ಒಂದೆರಡು ನಿಮಿಷ ಕಾಯುವ ಹೊತ್ತಿಗೆ ಠಾಕೂರರು ತಮ್ಮ ಆವಾಸದ ಮುಂದಣ ಕೈಸಾಲೆಗೆ ಬಂದರು. ಅವರಿಗಾಗಿ ಒಂದು ಕುರ್ಚಿ, ಎರಡೂ ಪಕ್ಕಕ್ಕೆ ಎದುರಿಗೆ ಆರೇಳು ಬೇರೆ ಕುರ್ಚಿ, ಠಾಕೂರರು ಕೈಸಾಲೆಗೆ ಬರುವಂತೆಯೇ ಡಾ. ಚಕ್ರವರ್ತಿಯವರು ನಮ್ಮನ್ನು ಅಲ್ಲಿಗೆ ಕರೆದುಕೊಂಡು ಹೋದರು. ಕವಿವರರು ಡಾ. ಚಕ್ರವರ್ತಿಯವರಿಂದ ನಮ್ಮ ಪರಿಚಯವನ್ನು ಪಡೆದು ಕುಳಿತುಕೊಳ್ಳಲು ಅಪ್ಪಣೆ ಮಾಡಿದರು. ಅದೇ ಆನೆಯ ದಂತದ ಆ ಬಿಳಿಯ ಮುಖ, ಮುಖದ ಮೇಲೆ ಸುಕ್ಕಿನ ಕಲೆ, ಒಂದೆರಡು ಕೂದಲು ನೆರೆತಿದ್ದಿತು. ಅದೇ ಧ್ವನಿ, ಕವಿಯ ಸಾನ್ನಿಧ್ಯ ಸಹಜವಾಗಿ ಕವಿಯದಾಗಿದ್ದಿತು. ನಾವು ಕುಳಿತ ಮೇಲೆ ಡಾ. ಚಕ್ರವರ್ತಿ ಹೊರಟು ಹೋದರು. ನಾವು ಮೂವರು ಮಾತ್ರ ಅಲ್ಲಿ ಉಳಿದೆವು.

ಠಾಕೂರರು ಮತ್ತೆ ಸುಬ್ಬರಾಯರ ಮಾತನ್ನಾಡಿದರು. ತಾವು ಬೆಂಗಳೂರಿಗೆ ಬಂದದ್ದನ್ನು ನೆನೆದುಕೊಂಡರು. ತಮ್ಮನ್ನು ಹಾಗೆ ಬರಮಾಡಿಕೊಂಡ ಸಂಸ್ಥೆಯ ಹೆಸರನ್ನು ಜ್ಞಾಪಕ ಮಾಡಿಕೊಂಡರು. ಅದು ಬೆಂಗಳೂರು ನಗರ 'ಅಮೆಚೂರ್ ಡ್ರಾಮಾಟಿಕ್ ಅಸೋಸಿಯೇಷನ್'. 1933ರಲ್ಲಿ ನಾನು ಆ ಸಂಸ್ಥೆಯ ಅಧ್ಯಕ್ಷನಾಗಿದ್ದೆನು. ಠಾಕೂರರಿಗೆ 'It happens Sir, that I am just now the president of the association' ಎಂದು ವಿಜ್ಞಾಪಿಸಿದೆನು. ಇದು ಇರಬಹುದು ಎಂದು ಅವರಿಗೆ ಸಂದೇಹ ತೋರಿರಬೇಕು. ಅವರನ್ನು ಕರೆದು ಸಂಸ್ಥೆಗೆ ಆಗ ಮೈಸೂರಿನಲ್ಲಿ ಕಂಟ್ರೋಲರ್ ಆಗಿದ್ದ ಶ್ರೀಜ್ಞಾನ ಚರಣ ಚಕ್ರವರ್ತಿಯವರು ಅಧ್ಯಕ್ಷರಾಗಿದ್ದರು. ಇದು ಅದೇ ಸಂಸ್ಥೆಯೇ ಎಂದು ಅವರು ಕೇಳಿದರು. ನಾನು 'ಅಹುದು' ಎಂದು ಹೇಳಿ 'Curiously enough I am also Comptroller to Government now' ಎಂದೆನು. 'ಶಾಂತಿನಿಕೇತನಕ್ಕೆ ಸಂಸ್ಥಾನಗಳಿಂದ ಸಹಾಯ ದೊರೆಯಬೇಕು. ತಾವು ಮೈಸೂರಿನಿಂದ ಸಹಾಯ ಮಾಡಿದ್ದುಂಟು' ಎಂದು ಅವರು ಅಪ್ಪಣೆ ಕೊಡಿಸಿದರು. ಆ ಮಾತನ್ನು ಮುಗಿಸಿ ನಾನು ಬಂದ ಕೆಲಸದ ವಿಷಯವನ್ನೆತ್ತಿದರು. ಮೈಸೂರಿನ ವಿಶ್ವವಿದ್ಯಾನಿಲಯ ಅದರ ಪ್ರಕಟನ ಕಾರ್ಯ, ಶ್ರೀ ಬಿ.ಎಂ. ಶ್ರೀಕಂಠಯ್ಯನವರ ಕನ್ನಡ ಸೇವೆ ಇಂಥ ಮಾತೆಲ್ಲ ಬಂದವು. ನಡೆಯುತ್ತಿರುವ ಕೆಲಸದ ವಿವರವನ್ನೆಲ್ಲ ಕೇಳಿ ಕವಿವರರು ತುಂಬ ಸಂತೋಷಪಟ್ಟರು. ನಾನು ಮತ್ತು ಸೀತಾರಾಮಯ್ಯನವರು ಮಾಡಿರುವ ಕೆಲಸದ ಸ್ವರೂಪವನ್ನು ವಿಚಾರಿಸಿ ತಿಳಿದುಕೊಂಡರು. ಒಂದೊಂದು ಭಾಷೆಯ ಹೊಸ ಸಾಹಿತ್ಯದ ಉತ್ತಮ ಭಾಗವನ್ನು ಇಂಗ್ಲಿಷಿಗಾದರೂ ಪರಿವರ್ತಿಸಿ ಇತರ ಪ್ರಾಂತಗಳಿಗೆ ಪರಿಚಯ ಮಾಡಿಕೊಡುವುದು ಅವಶ್ಯಕ ಎಂದರು.

ನಾನು ಕವಿವರರನ್ನು ಅವರ ಸಾಹಿತ್ಯ ಸೇವೆಯ ವಿಷಯವಾಗಿ ಎರಡು ಮಾತನ್ನು ತಿಳಿಯಹೇಳಬೇಕು ಎಂದು ಬೇಡಿದೆನು. ಕವಿವರರು ತಾವು ಎಲ್ಲ ವೇಳೆಯಲ್ಲಿಯೂ ಸುಧಾರಕರಾಗಿ ದುಡಿದಿರುವುದಾಗಿ ತಿಳಿಸಿದರು. "Has the younger generation benefitted by the changes you made and by your example Generally?" ಎಂದು ನಾನು ಕೇಳಿದೆನು. ಕವಿವರರು

ಸ್ವಲ್ಪ ತಡೆದು 'Is there enough writing of a high class among younger writers? There is some. The novels of Sarat Chander Chatterjee are of a high class.' ಹೀಗೆ ಇನ್ನೆರಡು ಮಾತನಾಡಿದ ಮೇಲೆ ನಾನು ನನ್ನ ಪುಸ್ತಕಕ್ಕಾಗಿ ಕವಿವರರ ಹಸ್ತಾಕ್ಷರದ ನಾಲ್ಕು ಪಂಕ್ತಿಯನ್ನು ಬೇಡಿದೆನು. ಅವರು ಅವಶ್ಯವಾಗಿ ಕೊಡುವೆನೆಂದು ಹೇಳಿ ತಮ್ಮ ಆಪ್ತಕಾರ್ಯದರ್ಶಿಗಳಿಗೆ ಈ ಸಂಗತಿಯನ್ನು ತಿಳಿಸಿ ಎಂದರು. ಈ ವೇಳೆಗೆ ನಮ್ಮ ಮಾತು ಮುಗಿದಿರಬೇಕೆಂದು ತಿಳಿದೇ ಇರಬೇಕು. ಆಶ್ರಮದ ಗುರುವರ್ಗದ ಕೆಲವರು ನಾವು ಕುಳಿತಿದ್ದ ಸ್ಥಳಕ್ಕೆ ಬಂದು ಸೇರಿದರು. ಬಂದ ಪ್ರತಿಯೊಬ್ಬರೂ ಠಾಕೂರರ ಸಮೀಪಕ್ಕೆ ಬಂದು ಬಾಗಿ ಅವರ ಕಾಲನ್ನು ಮುಟ್ಟಿ ನಮಸ್ಕಾರ ಮಾಡಿ ಆ ಮೇಲೆ ಅವರ ಅಪ್ಪಣೆಯಂತೆ ಕುರ್ಚಿಯಲ್ಲಿ ಕುಳಿತರು.

ಆಗ ನಡೆದ ಎಲ್ಲ ಮಾತೂ ನಮಗೆ ಅರ್ಥವಾಗಲಿಲ್ಲ. ನನ್ನ ಪಕ್ಕದಲ್ಲಿ ಕುಳಿತಿದ್ದ ಒಬ್ಬ ಮಿತ್ರರನ್ನು ಕೇಳಿ ಕೆಲವು ಸಂದರ್ಭವನ್ನು ನಾವು ಅರಿತುಕೊಂಡೆವು. ತರುಣ ಮುಸಲ್ಮಾನ ಕವಿಯೊಬ್ಬರು ಕವಿವರರಿಂದ ಯಾರೊ ಅಧಿಕಾರಿ ಒಬ್ಬರಿಗೆ ಒಂದು ಪತ್ರವನ್ನು ಬೇಡಿ ಬಂದಿದ್ದರು. ಕವಿವರರು ಅದನ್ನು ಕೊಡಲು ಏರ್ಪಾಟು ಮಾಡಿದರು. ಒಂದು ಕಡೆ ಯಾವುದೊ ಹಿಂದೂ – ಮುಸ್ಲಿಂ ಜಗಳ, ಅದರ ವಿಷಯ ಸ್ವಲ್ಪ ಚರ್ಚೆಯಾಯಿತು.

ಹೀಗೆ ಹಲವಾರು ಸಂಗತಿ ಚರ್ಚೆ ಆದ ಮೇಲೆ ಸಂಜೆಯ ಆ ಕಾರ್ಯಕ್ರಮ ಮುಗಿಯಿತು. ಸ್ವಲ್ಪ ಹೊತ್ತಿನ ಮೇಲೆ ಅದೇ ಸಂಜೆ ಶಾಂತಿನಿಕೇತನಕ್ಕೆ ನೀರನ್ನು ಒದಗಿಸಿದ ಒಬ್ಬ ಎಂಜಿನಿಯರ್ ಮಹಾಶಯನಿಗೆ ಸನ್ಮಾನ ನಡೆಯುವುದಿದ್ದಿತು. ಕವಿವರರು ಅದಕ್ಕೆ ಅಧ್ಯಕ್ಷರಾಗಿದ್ದರು. ಆ ಸಂದರ್ಭಕ್ಕಾಗಿ ಒಂದು ಗೀತವನ್ನು ರಚಿಸಿದ್ದರು. ಇವು ಗೀತದ ಮೊದಲ ಪದಗಳು, 'ಆಕಾಶ ವಿಹಾರಿ ನೀರದ ವಾಹನ ಜಲ್; ಆಚಲ ಶೈಲ ಶಿಖರಿ ಶಿಖರಿ ತುಮಾರಿ ಲೀಲಾಸ್ಥಲ್' ಆಶ್ರಮದ ಗಾಯಕ ವೃಂದದ ತರುಣ ತರುಣಿಯರು ಈ ಹಾಡನ್ನು ಜೊತೆಯಾಗಿ ಹಾಡಲು ಅಭ್ಯಾಸ ಮಾಡಿದ್ದರು. ಉತ್ಸವ ತುಂಬ ಸಂಭ್ರಮದಿಂದ ನಡೆಯಿತು. ತೋರಣ, ರಂಗವಲ್ಲಿ, ಪರಿಷ್ಕರಣ, ವೇಷಭೂಷಣ  ಎಲ್ಲ ಕಲಾ ಪ್ರಮುಖರ ಮನೋಧರ್ಮವನ್ನು ಪ್ರಕಟಿಸುತ್ತಿದ್ದವು. ಆ ಗಾನವಂತೂ ಮನಮೋಹಕವಾಗಿದ್ದಿತು.

ಮರುದಿನ ನಾವು ಶ್ರೀನಿಕೇತನಕ್ಕೆ ಹೋಗಿ ಕವಿವರರು ವ್ಯವಸಾಯ ಕೈಗಾರಿಕೆ ಗ್ರಾಮಾಭಿವೃದ್ಧಿ ಕಾರ್ಯ ಮುಂತಾದ ವಿವರದಲ್ಲಿ ನಡೆಸಿದ್ದ ಉದ್ಯಮಗಳನ್ನು ಕಂಡೆವು. ವ್ಯವಹಾರ ರಂಗದ ಇಂಥ ಕೆಲಸಗಳಲ್ಲಿಯೂ ಅವರ ಕವಿ ಮನೋಧರ್ಮ ಕಾಣುತ್ತಿದ್ದಿತು. ಅದೇ ಮಧ್ಯಾಹ್ನ ಕಲ್ಕತ್ತೆಗೆ ಹಿಂದಿರುಗಿದೆವು. ಬೆಂಗಳೂರಿನಿಂದ ಕಾಗದ ಬರೆದಿದ್ದ ಮೇಲೆ ಸಕಾಲದಲ್ಲಿ ಕವಿವರರ ಆಪ್ರಕಾರ್ಯದರ್ಶಿಗಳಿಂದ ಅವರ ಹಸ್ತಾಕ್ಷರದ ಕಾಗದ ಬಂದಿತು. ಅದರ ಒಂದು ಪ್ರತಿಕೃತಿ ಕವಿವರರನ್ನು ಕುರಿತ ನನ್ನ ಪುಸ್ತಕದಲ್ಲಿದೆ. ಶಾಂತಿನಿಕೇತನದಿಂದ ಬರುತ್ತ ಸ್ವಲ್ಪ ದೂರದಲ್ಲಿ ಒಂದು ನದಿ ಇದೆ. ಅದನ್ನು ಅಲ್ಲಿಯ ಜನರು ಅಜಯ ಎಂದು ಕರೆಯುತ್ತಾರೆ. ಇದು

ಅಜೇಯ ಅಥವಾ ಅಜಯ್ಯ ಶಬ್ದದ ಗ್ರಾಮ್ಯರೂಪ ಇರಬೇಕು, ಹೊಳೆ ಅಷ್ಟೇನೂ ದೊಡ್ಡದಲ್ಲ. ಆದರೆ ಅದರ ಬದಿಯಲ್ಲಿ ಠಾಕೂರ ಕವಿ ಸಿದ್ಧಿ ಪಡೆದರು. ಈ ಕಾರಣದಿಂದ ಅದು ವಾಲ್ಮೀಕಿಯ ತಮಸಾ ನದಿಯಂತೆ ಸಾಹಿತ್ಯದ ಇತಿಹಾಸದಲ್ಲಿ ಪ್ರಸಿದ್ಧವಾಗಬೇಕಾದದ್ದು ಎಂದು ನಮಗೆ ತೋರಿತು. ತಮಸಾ ಅಂಥ ದೊಡ್ಡ ನದಿ ಏನಲ್ಲ ಅದರ ಸಮೀಪದಲ್ಲಿ ವಾಲ್ಮೀಕಿ ಬಾಳಿದ್ದರಿಂದ ಅದು ರಾಮಾಯಣದಲ್ಲಿ ಅಮರವಾಯಿತು. ಹತ್ತಿರದಲ್ಲಿ ಠಾಕೂರರು ಬಾಳಿದ್ದರಿಂದ ಈ ನದಿಯೂ ಅಮರವೇ ಆಗಿದೆ.

**ಕೃಪೆ : ಆಕಾಶವಾಣಿ**

## ೧೦.೨. ಶಾಂತಿನಿಕೇತನದಲ್ಲಿ: ಅ.ನ. ಕೃಷ್ಣರಾಯರು

"ನೀನು ಎಷ್ಟು ಓದಿ, ಎಷ್ಟು ಬರೆದರೂ ಒಂದು ಡಿಗ್ರಿಯಿಲ್ಲದಿದ್ದರೆ ಅವುಗಳಿಗೆ ಬೆಲೆ ಬರುವುದಿಲ್ಲ" ಎಂದು ತಂದೆಯವರು ಪದೇಪದೇ ಹೇಳುತ್ತಿದ್ದರು.

"ವಜ್ರಗಳ ಪ್ರಕಾಶವನ್ನು ಕುಂದಿಸಿ, ಹರಳುಗಳಿಗೆ ಮೆರುಗು ಕೊಡುವ ಸಂಸ್ಥೆಗಳೇ ಕಾಲೇಜುಗಳು" ಎಂದು ಬರ್ನಾರ್ಡ್ ಷಾ ಹೇಳಿದ ಮಾತು ನನ್ನ ಮನಸ್ಸಿನಲ್ಲಿ ನಿಂತಿತ್ತು. ಕಾಲೇಜು ಸೇರಿ ವಿದ್ಯಾಭ್ಯಾಸ ಮುಂದುವರಿಸಲು ನಾನು ಉತ್ಸಾಹ ತೋರಲಿಲ್ಲ.

ಕವಿ ರವೀಂದ್ರರು ಮೈಸೂರಿಗೆ ಬಂದು ಹೋದ ಮೇಲೆ ಅವರಲ್ಲಿ ಹಾಗೂ ಅವರ ಸಾಹಿತ್ಯದಲ್ಲಿ ನನ್ನ ಆಸಕ್ತಿ ಕೆರಳಿತು. ಅವರ ಎಲ್ಲ ಕೃತಿಗಳನ್ನು ನಾನು ಓದಿದುದಲ್ಲದೆ, "ಚಿತ್ರಾ" "ಅಂಚೆಮನೆ" ನಾಟಕಗಳನ್ನೂ, "ಗೀತಾಂಜಲಿ" "ಕ್ರೆಸೆಮಟ್ ಮೂನ್ ಸ್ಟ್ರೇಬರ್ಡ್ಸ್" ಕಾವ್ಯಗಳಿಂದ ಕೆಲವು ಪದ್ಯಗಳನ್ನೂ ಕನ್ನಡಕ್ಕೆ ಅನುವಾದ ಮಾಡಿದ್ದೆ.

ರವೀಂದ್ರರ ವಿದ್ಯಾಸಂಸ್ಥೆ "ಶಾಂತಿನಿಕೇತನ" ಬಗ್ಗೆ ಪತ್ರಿಕೆಗಳಲ್ಲಿ ಬರುತ್ತಿದ್ದ ಲೇಖನಗಳನ್ನು ಓದಿದ್ದೆ. "ಶಾಂತಿನಿಕೇತನ"ವೆಂದರೆ ಭರದ್ವಾಜರ ಆಶ್ರಮ. ಅಲ್ಲಿಗೆ ನಾನು ಹೋಗಿ ಬಂದರೆ ಬೃಹಸ್ಪತಿ ಆಗಿಬಿಡುತ್ತೇನೆ ಎನ್ನುವ ಭಾವನೆ ನನ್ನ ಮನಸ್ಸಿನಲ್ಲಿ ಮೊಳೆಯಿತು.

ತಂದೆಯವರಿಗೆ ನನ್ನ ಅಭಿಪ್ರಾಯ ತಿಳಿಸಿದೆ. ಅವರು ಸಂತೋಷವಾಗಿ ಅನುಮತಿ ನೀಡಿದರು.

ಪ್ರಯಾಣದ ಸಿದ್ಧತೆ ಆರಂಭವಾಯಿತು.

ಬಟ್ಟೆ, ಬರೆಗಳನ್ನಲ್ಲದೆ ಒಂದು ಟ್ರಂಕಿನ ತುಂಬ ಕನ್ನಡ ಕಾವ್ಯ ಧಾರ್ಮಿಕ ಗ್ರಂಥಗಳನ್ನೂ ತೆಗೆದುಕೊಂಡೆ. ನನ್ನ ಸಡಗರ ಕಂಡ ನನ್ನ ಅಕ್ಕ ರಾಜಮ್ಮನವರು,

"ಕಿಟ್ಟಣ್ಣನಿಗೆ ನಮ್ಮ ಮೇಲಿನ ಪ್ರೀತಿಗಿಂತ ಪುಸ್ತಕಗಳ ಮೇಲಿನ ಪ್ರೀತಿ ಹೆಚ್ಚು" ಎಂದರು.

ಅವರ ಮಾತಿನಲ್ಲಿ ಸತ್ಯವಿತ್ತು. ನನಗೆ ಪುಸ್ತಕಗಳು ಕಾಗದದ ಕಟ್ಟುಗಳಾಗಿರಲಿಲ್ಲ. ಅವು ಜೀವಂತ ವ್ಯಕ್ತಿಗಳಾಗಿದ್ದುವು.

ಬೆಂಗಳೂರು ಬಿಟ್ಟ ನಾನು ಮದರಾಸಿಗೆ ಬಂದೆ. ಆಗ ನನ್ನ ಅಣ್ಣ ಲಾ ಪರೀಕ್ಷೆಗೆ ಮದರಾಸಿನಲ್ಲಿ ಓದುತ್ತಿದ್ದರು. ಅವರು ರೈಲ್ವೆ ನಿಲ್ದಾಣಕ್ಕೆ ಬಂದು ನನ್ನನ್ನು ತಮ್ಮ ಹಾಸ್ಟಲ್ಲಿಗೆ ಕರೆದುಕೊಂಡು ಹೋಗಿ ಆದರಿಸಿ ರಾತ್ರಿ ಹೌರಾ ಗಾಡಿ ಹತ್ತಿಸಿದರು.

ನಾನು ದೀರ್ಘ ಪ್ರಯಾಣ ಕೈಗೊಂಡುದು ಅದೇ ಮೊದಲು, ಹೊಸಜನ, ಹೊಸಭಾಷೆ, ಸ್ವಲ್ಪ ಹೆದರಿಕೆಯೇ ಆಯಿತು. ಬೆಜವಾಡ ದಾಟಿದ ಮೇಲೆ ಶಾಂತಿನಿಕೇತನಕ್ಕೆ ಹೊರಟಿದ್ದ ಒಬ್ಬ ಆಂಧ್ರ ಮಿತ್ರ ನನಗೆ ದೊರೆತ. ಈತನ ಹೆಸರು ಖುದಾ ಗರ್ಜಿ. ಕೊಯಿಲ್ ಕುಂಟಿ ಗ್ರಾಮದವನು. ಈತನ ಅಣ್ಣ ಅಕ್ಬರ್ ಅಲ್ಲಿ ಸಮಾಜ ಸೇವಕನೆಂದು ಪ್ರಸಿದ್ಧನಾಗಿದ್ದ. ಗರ್ಜಿ ಮುಸಲ್ಮಾನನಾದರೂ ಉರ್ದು ಈತನಿಗೆ ಬರುತ್ತಿರಲಿಲ್ಲ. ಆದರೆ ತೆಲುಗಿನಲ್ಲಿ ತಕ್ಕ ಮಟ್ಟಿಗೆ ಪರಿಶ್ರಮ ಗಳಿಸಿಕೊಂಡಿದ್ದ.

ಗರ್ಜಿ ಈ ಮೊದಲೇ ಶಾಂತಿನಿಕೇತನಕ್ಕೆ ಹೋಗಿ ಬಂದುದರಿಂದ ಅವನಿಗೆ ಕಲ್ಕತ್ತೆ, ಶಾಂತಿನಿಕೇತನದ ಪೂರ್ವ ಪರಿಚಯವಿತ್ತು. ಅವನ ಜತೆ ನಾನು ಕಲ್ಕತ್ತೆ ನೋಡಿಕೊಂಡು ಶಾಂತಿನಿಕೇತನಕ್ಕೆ ಹೋದೆ. ಅಲ್ಲಿಂದ ಅತಿಥಿ ಗೃಹದಲ್ಲಿ ನಾವು ತಾತ್ಕಾಲಿಕ ಬಿಡಾರ ಮಾಡಿದೆವು.

ಶಾಂತಿನಿಕೇತನದ "ವಿಶ್ವಭಾರತಿ"ಯಲ್ಲಿ ಯಾವ ಶಿಕ್ಷಣ ಪಡೆಯಬೇಕೆಂದು ನಾನು ನಿರ್ಧರಿಸಿರಲಿಲ್ಲ, "ಶಾಂತಿನಿಕೇತನ"ದಲ್ಲಿ ಸೊಗಸಾದ ಪುಸ್ತಕಭಂಡಾರವಿತ್ತು. ಅಲ್ಲಿ ಗ್ರಂಥಾಧ್ಯಯನ ಮಾಡುತ್ತ ನನ್ನ ವೇಳೆಯನ್ನೆಲ್ಲ ಕಳೆಯುತ್ತಿದ್ದೆ.

ದಿನವೂ ಗುರುದೇವರನ್ನು ದೂರದಿಂದ ನೋಡುತ್ತಿದ್ದೆ. ನನಗೆ ಅವರ ಪರಿಚಯವಾಗಿರಲಿಲ್ಲ. ಗರ್ಜಿಗೆ ನನ್ನ ಅಭಿಲಾಷೆ ವ್ಯಕ್ತಪಡಿಸಲು ಆತನು ಒಂದು ದಿನ ಗುರುದೇವರ ಮನೆಗೆ ಕರೆದೊಯ್ದು ನನ್ನ ಪರಿಚಯ ಮಾಡಿಕೊಟ್ಟ.

ಆರಾಮಾಸನದ ಮೇಲೆ ಕುಳಿತಿದ್ದ ಗುರುದೇವರು, ನಾನು ಮೈಸೂರಿನವನು ಎಂದು ಕೇಳಿದ ಕೂಡಲೇ ನೇರವಾಗಿ ಕುಳಿತು,

"ನಾನು ನಿಮ್ಮೂರಿಗೆ ಬಂದಿದ್ದೆ. ನಿಮ್ಮ ಜನ ತುಂಬ ಒಳ್ಳೆಯವರು– ಸುಸಂಸ್ಕೃತರು."

"ಲಾಲ್‌ಬಾಗಿನಲ್ಲಿ ನಡೆದ ತಮ್ಮ ಸ್ವಾಗತ ಸಮಾರಂಭಕ್ಕೆ ನಾನು ಬಂದಿದ್ದೆ. ತಮ್ಮ ಭಾಷಣ ಇಂದಿಗೂ ನನ್ನ ಕಿವಿಯಲ್ಲಿ ಮೊರೆಯುತ್ತಿದೆ."

ಗುರುದೇವರು ಪ್ರಸನ್ನವದನವಾಗಿ,

"ವಿಶ್ವಭಾರತಿ ಸೇರಲು ಬಂದಿರುವಿರಾ?"

"ಹೌದು."

"ಒಳ್ಳೆಯದು, ಅಪ್ಪ ಹೇಗಿದ್ದಾರೆ?"

"ಇಲ್ಲಿ ಚಿತ್ರಕಲಾ ಅಭ್ಯಾಸ ಮಾಡಿದ ವೆಂಕಟಪ್ಪ."

ಆಗ ನಾನು ವೆಂಕಟಪ್ಪರವರ ಹೆಸರನ್ನೂ ಕೇಳಿರಲಿಲ್ಲ. ಅಜ್ಞಾನ ಪ್ರದರ್ಶಿಸಬಾರದೆಂದು "ಚೆನ್ನಾಗಿದ್ದಾರೆ" ಎಂದೆ.

"ವೀಣೆ ಶೇಷಣ್ಣನವರು ಚೆನ್ನಾಗಿದ್ದಾರೆಯೇ? ಇನ್ನೂ ವೀಣೆ ನುಡಿಸುತ್ತಿದ್ದಾರೆಯೇ?"

ನಾನು ವೀಣೆ ಶೇಷಣ್ಣನವರು ಹೆಸರು ಕೇಳಿದ್ದೆ. ಆದರೆ ಅವರ ವೀಣಾ ವಾದನ ಕೇಳಿರಲಿಲ್ಲ. ಸುಳ್ಳಿನ ಸರಮಾಲೆ ನೇಯುವುದು ಸಾಧುವಲ್ಲವೆಂದುಕೊಂಡು. "ಶೇಷಣ್ಣನವರ ಪರಿಚಯ ನನಗಿಲ್ಲ. ಆದರೆ ಅವರ ವಿಷಯ ಬಹಳ ಕೇಳಿದ್ದೇನೆ" ಎಂದೆ.

ಗುರುದೇವರು ಧ್ವನಿಯೆತ್ತರಿಸಿ, "ಮೈಸೂರಿನವರಾಗಿ ವೀಣೆ ಶೇಷಣ್ಣನವರ ಪರಿಚಯವಿಲ್ಲವೆನ್ನುವಿರಲ್ಲ. ಆತ ಯುಗಪುರುಷ, ಒಂದು ನಾಡಿನ ಅನೇಕ ವರ್ಷಗಳ ಪುಣ್ಯದಿಂದ ಅಂತಹ ಕಲಾವಿದ ಹುಟ್ಟುತ್ತಾನೆ" ಎಂದರು.

"ಊರಿಗೆ ಹಿಂತಿರುಗಿದ ಮೇಲೆ ಅವರ ಪರಿಚಯ ಮಾಡಿಕೊಳ್ಳುತ್ತೇನೆ."

"ನಟ ಶಿರೋಮಣಿ ಆಚಾರ್ ಹೇಗಿದ್ದಾರೆ?"

ವರದಾಚಾರ್ಯರ ನಿಕಟ ಪರಿಚಯ ನನಗಿದ್ದುದರಿಂದ ನನ್ನ ನಾಲಿಗೆ ಚುರುಕಾಯಿತು. ನಾನೊಂದು ಸಣ್ಣ ಭಾಷಣವನ್ನೇ ಬಿಗಿದೆ. ಗುರುದೇವರು ಸಂತುಷ್ಟರಾಗಿ,

"ನೀವು ಹೇಳುವುದೆಲ್ಲಾ ನಿಜ. ಆಚಾರ್ ಮಟ್ಟಕ್ಕೆ ನಿಲ್ಲುವ ನಟನನ್ನು ನೋಡಿಯೇ ಇಲ್ಲ" ಎಂದರು.

ನನ್ನ ನಾಡಿನ ಮೂವರು ಋಷಿಗಳ ಬಗ್ಗೆ ಗುರುದೇವರು ತಳೆದಿದ್ದ ಗೌರವ, ವಿಶ್ವಾಸ ಕಂಡು ನನ್ನ ಹೃದಯ ಹಿಗ್ಗಿತ. ಕೆಲವು ದಿನಗಳಾದ ನಂತರ ವಿದಾರ್ಥಿನಿಲಯದಲ್ಲಿ ನನಗೆ ಒಂದು ಕೋಣೆ ಕೊಡಲ್ಪಟ್ಟಿತು. ಅದರಲ್ಲಿ ನಾನು, ಖುದಾ ಗರ್ಜಿ, ಸುಬೋಧ ಸನ್ಯಾಲ್ ಇರುತ್ತಿದ್ದೆವು. ಗರ್ಜಿಯೇ ನನಗೆ ಸನ್ಯಾಲ್‌ರನ್ನು ಪರಿಚಯ ಮಾಡಿಸಿದ, ಸನ್ಯಾಲ್ ಇಸ್ರಾಜ್ ವಾದ್ಯ ಕಲಿಯಲು ಶಾಂತಿನಿಕೇತಕ್ಕೆ ಬಂದಿದ್ದ. ಸನ್ಯಾಲನ ಸತತ ವಾದ್ಯವಾದನ ಕೇಳಿ ನನಗೆ ಸಾಕುಸಾಕಾಗುತ್ತಿತ್ತು. ಆದರೆ ವ್ಯಕ್ತಿ ಒಳ್ಳೆಯವ, ನನ್ನ ಬಗ್ಗೆ ತುಂಬ ಅಭಿಮಾನಿ. ನಾನು ಈ ಕಾರಣಗಳಿಗೆ ಅವನ ಇಸ್ರಾಜ್‌ವಾದನ ಸಹಿಸಿಕೊಳ್ಳುತ್ತಿದ್ದೆ.

ಶಾಂತಿನಿಕೇತನದಲ್ಲಿ ಊಟದ ವಿಷಯ ನನಗೆ ದೊಡ್ಡ ಸಮಸ್ಯೆಯಾಯಿತು. ಅಲ್ಲಿ ಎಲ್ಲರೂ ಮೀನು, ಮೊಟ್ಟೆ, ತಿನ್ನುತ್ತಿದ್ದುದರಿಂದ ಶುದ್ಧ ಶಾಖಾಹಾರಿಯಾದ ನಾನು ಅನ್ನ ಮೊಸರಿನಲ್ಲಿ ತೃಪ್ತನಾಗಬೇಕಾಗಿತ್ತು. ಈ ಊಟ ಬೇಸರವಾದಾಗ ನಾನು ಗರ್ಜಿ, ಸನ್ಯಾಲ್ ಕಲ್ಕತ್ತೆಗೆ ಹೋಗಿ ಅಲ್ಲಿನ ಆಂಧ್ರ ಅಥವಾ ಮದರಾಸ್ ಹೋಟೆಲಲ್ಲಿ ಊಟ ಮಾಡಿಕೊಂಡು ಬರುತ್ತಿದ್ದೆವು.

ವಿಶ್ವಭಾರತಿಯನ್ನು ವಿಶ್ವಜ್ಞಾನ ಮಂದಿರವನ್ನಾಗಿ ಮಾಡಬೇಕೆಂಬುದು ಗುರುದೇವರ ಇಚ್ಛೆಯಾಗಿತ್ತು. ಸಿ.ಎಫ್. ಆಂಡ್ರೂಸ್, ಪಿಯರ್‌ಸನ್, ಕಾಲಿನ್ಸ್, ಪಾರ್ಮಿಚಿಬಗ್‌ದನಚಿ ಮೊದಲಾದ ಪಾಶ್ಚಾತ್ಯ ಪಂಡಿತರನ್ನೂ ಗುರುದೇವರು ಕಲೆ ಹಾಕಿದ್ದರು. ಚಿತ್ರಕಲಾ ವಿಭಾಗದಲ್ಲಿ ನಂದಲಾಲ್ ಬಸು, ಸುರೇಂದ್ರನಾಥ ಕಾರ್, ರಮೇಂದ್ರ ಚಕ್ರವರ್ತಿ ಮೊದಲಾದ ಪ್ರಸಿದ್ಧ ಕಲಾವಿದರಿದ್ದರು. ಸಂಗೀತ ಶಾಲೆಯನ್ನು ಉತ್ತರ ಕರ್ನಾಟಕದ ಭೀಮರಾವ್ ಶಾಸ್ತ್ರಿ ನಡೆಸುತ್ತಿದ್ದರು.

**ಶಾಂತಿನಿಕೇತನದ ಬಗ್ಗೆ ನಾನು ಕಂಡಿದ್ದ ಕನಸು ಒಡೆಯುವ ಕೆಲವು ಪ್ರಸಂಗಗಳು ಜರುಗಿದವು. ಭಾರತೀಯ ಸ್ವಾತಂತ್ರ್ಯ ಆಂದೋಲನದಲ್ಲಿ ಬಂಗಾಳ ಬಹಳ ದೊಡ್ಡ ಪಾತ್ರವಹಿಸಿದ್ದರೂ ಬಂಗಾಳಿಗಳಿಗೆ ರಾಷ್ಟ್ರೀಯ ಭಾವನೆಯಿಲ್ಲ. ಬಂಗಾಳಿಗಳಿಗೆ ಬಂಗಾಳವೇ ಆದಿ ಅಂತ್ಯ. ಇತರ ಭಾಷಾ ಪ್ರಾಂತ್ಯಗಳಲ್ಲಿಯೂ ಸಂಸ್ಕೃತಿ ವಿಕಾಸವಾಗಿದೆಯೆನ್ನುವ ಕಲ್ಪನೆಯೂ ಅವರಿಗೆ ಬರುವುದಿಲ್ಲ. ಅವರ ಈ ಕಟು ಮನೋಭಾವ ನನ್ನ ಸ್ವಾಭಿಮಾನವನ್ನು ಕೆರಳಿಸಿತು. ಅವರು ಮಾತೆತ್ತಿದರೆ ಚಂಡೀದಾಸ, ವಿದ್ಯಾಪತಿ, ಜಯದೇವ, ಬಂಕಿಂಬಾಬು, ರವೀಂದ್ರ ಎನ್ನುತ್ತಿದ್ದರೆ ನಾವೇಕೆ ನಮ್ಮ ಕವಿಗಳು ಸಂತರ ಬಗ್ಗೆ ಅಭಿಮಾನ ತಳೆಯಬಾರದು ಎನ್ನಿಸಿತು. ನನ್ನಲ್ಲಿ ಸುಪ್ತವಾಗಿದ್ದ ಕನ್ನಡಾಭಿಮಾನ ಜಾಗೃತವಾಗಲು ಗುರುದೇವರ ಒಂದು ಮಾತು ಕಾರಣವಾಯಿತು.**

ಪ್ರತಿ ಶುಕ್ರವಾರ ಗುರುದೇವರು, ತಮ್ಮ ನೂತನ ಕೃತಿಗಳನ್ನು ಶಾಂತಿನಿಕೇತನದ ಅಧ್ಯಾಪಕರು ವಿದ್ಯಾರ್ಥಿಗಳಿಗೆ ಓದುತ್ತಿದ್ದರು. ಅವರ ವಾಚನ ಮುಗಿದ ಮೇಲೆ ವಿದ್ಯಾರ್ಥಿಗಳು ಪ್ರಶ್ನೆಗಳನ್ನು ಕೇಳಿ ಸಂದೇಹ ನಿವೃತ್ತಿ ಮಾಡಿಕೊಳ್ಳಲು ಅವಕಾಶವೀಯಲಾಗಿತ್ತು. ಒಂದು ಶುಕ್ರವಾರ– ಗುರುದೇವರ ವಾಚನ ಮುಗಿದಿದೆ. ಖುದಾ ಗರ್ಜಿ ಮತ್ತು ಒಬ್ಬ ಬಂಗಾಳಿ ವಿದ್ಯಾರ್ಥಿ ಪ್ರಶ್ನೆ ಕೇಳಲು ಒಟ್ಟಿಗೆ ಎದ್ದು ನಿಂತರು. ಗುರುದೇವರು ಗರ್ಜಿಯ ಕಡೆ ತಿರುಗಿ "ನನ್ನ ಬಂಗಾಳಿ ಸ್ನೇಹಿತನಿಗೆ ಮೊದಲು ಉತ್ತರಿಸುತ್ತೇನೆ. ಕುಳಿತುಕೊಳ್ಳಿ" ಎಂದರು. ವಿಶ್ವಕವಿ ವಿಶ್ವಮಾನವನಿಗೂ ಇಂಥ ಸಂಕುಚಿತ ಮನಸ್ಸೇ ಎಂದುಕೊಂಡೆ.

ಈ ವೇಳೆಗೆ ನನಗೆ ಗುರುದೇವರ ಆಪ್ತ ಕಾರ್ಯದರ್ಶಿ ಅಮಿಯ ಚಕ್ರವರ್ತಿಗಳ ಪರಿಚಯವಾಗಿತ್ತು. ಅವರು ಉತ್ತಮ ಸಾಹಿತಿಗಳೂ, ರಸಜ್ಞರೂ ಆಗಿದ್ದರು. ಸಂಭಾಷಣಾ ಸಂದರ್ಭಗಳಲ್ಲಿ ಅವರು ಬಂಗಾಳ ಕವಿಗಳನ್ನು ಉದಾಹರಿಸಿದರೆ ನಾನು ಕನ್ನಡ ಕವಿಗಳನ್ನು ಉದಾಹರಿಸುತ್ತಿದ್ದೆ. ಒಂದು ದಿನ ಅಮಿಯ ಬಾಬು, "ನೀವೇಕೆ ಕನ್ನಡ ಕವಿಸಂತರ ಬಗ್ಗೆ ಒಂದೆರಡು ಭಾಷಣಗಳನ್ನು ಮಾಡಬಾರದು" ಎಂದರು. ನಾನು ಆಗಲೆಂದು ಒಪ್ಪಿಕೊಂಡೆ. ಗುರುದೇವರ ಸಮ್ಮುಖದಲ್ಲಿಯೇ ನನ್ನ ಭಾಷಣಗಳಾದವು. ಅವುಗಳ ಸಾರಾಂಶ "ಭಾರತೀಯ ತ್ರೈಮಾಸಿಕ ಪತ್ರಿಕೆಯಲ್ಲಿ" ತರುವಾಯ ಪ್ರಕಟವಾಯಿತು. ಅವು ಮೆಚ್ಚಿಗೆ ಗಳಿಸಿದವೆಂದು ಮುಖ್ಯವಲ್ಲ. ಶಾಂತಿನಿಕೇತನದಲ್ಲಿ ನನಗೆ ಕೆಲವು ಒಳ್ಳೆಯ ಗೆಳೆಯರನ್ನು ದೊರಕಿಸಿಕೊಟ್ಟಿತು. ಶಾಂತಿನಿಕೇತನದ ವಿದುಶೇಖರ ಭಟ್ಟಾಚಾರ್ಯರು ಸಂಸ್ಕೃತ, ಪಾಳಿ, ಅರ್ಧಮಾಗಧಿ ಭಾಷೆಗಳಲ್ಲಿ

ಪ್ರಾವೀಣ್ಯ ಪಡೆದಿದ್ದರು. ವಿದ್ವತ್ಸಭೆಯಲ್ಲಿ ಅವರ ಮಾತು ವೇದವಾಕ್ಯ. ಸಂಸ್ಕೃತ ವಿದ್ಯಾರಕ್ಷಣೆ, ಪ್ರಚಾರಕ್ಕೆ ಮೈಸೂರಿನ ಸೇವೆಯ ಬಗ್ಗೆ ಅವರು ತುಂಬ ಗೌರವ ತಳೆದಿದ್ದರು.

ಪ್ರಸಿದ್ಧ ಚಿತ್ರ ಕಲಾವಿದರಾದ ನಂದಲಾಲ ಬಸು ಅವರು ನನ್ನ ಆಪ್ತರಾದರು. ಆಗಾಗ್ಗೆ ನನ್ನನ್ನು ಕರೆದು ರಸಗುಲ್ಲಾ ಸಂದೇಶ ಕೊಡುತ್ತಿದ್ದರು. ಅವರ ಚಿತ್ರಕಲಾ ತರಗತಿಗಳಿಗೆ ನಾನು ತಪ್ಪದೆ ಹೋಗುತ್ತಿದ್ದೆ. ಅಂತರರಾಷ್ಟ್ರೀಯ ಖ್ಯಾತಿ ಪಡೆದಿದ್ದ ನಂದಬಾಬು ತೀರ ಸರಳ ವ್ಯಕ್ತಿ. ಶಿಷ್ಯರೆಂದರೆ ಅವರಿಗೆ ಪಂಚಪ್ರಾಣ. ಶಿಷ್ಯರೊಂದಿಗೆ ತಾವೂ ಕುಳಿತು ಚಿತ್ರ ತೆಗೆಯುತ್ತಿದ್ದರು. ಒಂದು ದಿನ ನಾನು ಬಾಬುಗಳನ್ನು ಕೇಳಿದೆ – "ನಂದಬಾಬು, ಆದರ್ಶ, ವಾಸ್ತವ ಕಲೆಗಳಿರುವ ವ್ಯತ್ಯಾಸವೇನು?" ಅವರಾಗ ತಮ್ಮ ಮನೆಯ ಮುಂದಿದ್ದ ಬಿದಿರು ಮೆಳೆಯನ್ನು ಚಿತ್ರಿಸುತ್ತಿದ್ದರು. ತಮ್ಮ ಅಪೂರ್ಣ ಚಿತ್ರ ತೋರಿಸುತ್ತ, "ಬಿದಿರುಮಳೆ ಇದ್ದಂತೆಯೇ ಚಿತ್ರಿಸಿದರೆ ಅದು ವಾಸ್ತವ ಕಲೆ, ಬಿದುರು ಮಳೆ ನನ್ನ ಮನಸ್ಸಿನ ಮೇಲೆ ಮೂಡಿಸಿದ ಭಾವನೆಯನ್ನು ಮೂಡಿಸಿದರೆ ಅದು ಆದರ್ಶ ಕಲೆ" ಎಂದರು.

ಶಾಂತಿನಿಕೇತನದಲ್ಲಿ "ವಸಂತ ಪಂಚಮಿ" ಹಬ್ಬವನ್ನು ಬಹಳ ವಿಜೃಂಭಣೆಯಿಂದ ಆಚರಿಸುತ್ತಾರೆ. ಸುತ್ತಮುತ್ತಲಿನ ಹಳ್ಳಿಗರು ಬಂದು ಸಂಗೀತ, ನೃತ್ಯಗಳಿಂದ ಜನರನ್ನು ಸಂತೋಷಗೊಳಿಸುತ್ತಾರೆ. ಆ ಸಮಯದಲ್ಲಿ ನಂದಬಾಬುಗಳು ಒಂದು ಗುಡಿಸಲಿನಲ್ಲಿ ಕುಳಿತು, ಹಳ್ಳಿಗರ ಭಾವಚಿತ್ರಗಳನ್ನು ಬರೆದು ಅವರಿಗೆ ಅದನ್ನು ಒಂದಾಣೆಗೆ ಮಾರುತ್ತಾರೆ. "ಒಂದಾಣೆಗೆ ಏಕೆ ಮಾರುತ್ತೀರಿ ನಂದಬಾಬು" ಎಂದು ನಾನು ಕೇಳಿದ್ದಕ್ಕೆ "ಸುಮ್ಮನೆ ಕೊಟ್ಟರೆ ಹಳ್ಳಿಗರಿಗೆ ಅದರ ಬೆಲೆ ಗೊತ್ತಾಗುವುದಿಲ್ಲ" ಎಂದರು.

ಶಾಂತಿನಿಕೇತನದಲ್ಲಿ ನಾನು ಕಂಡ ಇನ್ನೊಬ್ಬ ದೊಡ್ಡ ವ್ಯಕ್ತಿಯೆಂದರೆ, ಡಾ. ಬಗ್‌ದನಂ. ಆಗರ್ಭ ಶ್ರೀಮಂತರಾದ ಇವರು ಹಾಲೆಂಡಿನವರು. ತಮ್ಮ ಸಮಸ್ತ ಆಸ್ತಿಯನ್ನು ದಾನ ಧರ್ಮ ಮಾಡಿ, ವೇದಾಭ್ಯಾಸ ಮಾಡಲು ಶಾಂತಿನಿಕೇತನಕ್ಕೆ ಬಂದಿದ್ದರು. ಋಷಿ ಜೀವನ ನಡೆಸಿಕೊಂಡು ವೇದಗಳ ಮೇಲೆ ಒಂದು ಗ್ರಂಥ ಮಾಲೆ ರಚಿಸುತ್ತಿದ್ದರು. ನಾನು ಇವರನ್ನು ಭೇಟಿಯಾದಾಗ ಇವರು ಮೈಸೂರು ವಿಶ್ವವಿದ್ಯಾನಿಲಯದ ಬಗ್ಗೆ ತಮ್ಮ ಮೆಚ್ಚುಗೆ ವ್ಯಕ್ತಪಡಿಸುತ್ತ, "ನಿಮ್ಮ ವಿಶ್ವವಿದ್ಯಾನಿಲಯದಲ್ಲಿ ವೈದಿಕ ಸಂಶೋಧನೆಗೆ ಪ್ರತ್ಯೇಕ ಪೀಠವಿದೆಯೇ?" ಎಂದರು.

"ಇಲ್ಲ ಡಾಕ್ಟರ್."

"ಅದೆಂಥ ವಿಶ್ವವಿದ್ಯಾನಿಲಯ. ಭಾರತದ ವಿಶ್ವ ವಿದ್ಯಾನಿಲಯಗಳಲ್ಲಿಯೇ ವೈದಿಕ ಸಂಶೋಧನೆಗೆ ಸ್ಥಾನ ಇಲ್ಲದಿರುವುದು ನಾಚಿಕೆಗೇಡು" ಎಂದರು.

ಶಾಂತಿನಿಕೇತನದಲ್ಲಿ ನನ್ನ ಭಾಷಣಗಳಾದ ಮೇಲೆ ಅಮಿಯ ಬಾಬು, ನಾನು ತುಂಬ ಗೆಳೆಯರಾದೆವು. ಅವರು ಒಬ್ಬ ಜರ್ಮನ್ ವಿದುಷಿಯನ್ನು ಲಗ್ನವಾಗಿದ್ದರು. ಶ್ರೀಮತಿ ಬಾಬು ಗುರುದೇವರ ಕೃತಿಗಳನ್ನು ಜರ್ಮನ್ ಭಾಷೆಗೆ ಅನುವಾದ ಮಾಡುತ್ತಿದ್ದರು. ನನಗೆ ರಸಗುಲ್ಲ,

ಸಂದೇಶ ತಿಂದು ತಿಂದು ಸಾಕಾಗಿತ್ತು. ಒಂದು ದಿನ ಅಮಿಯ ಬಾಬುಗಳ ಮನೆಯಲ್ಲಿ ಉಪ್ಪಿಟ್ಟು ಮಾಡಿ, ಅದರ ರಚನಾ ವಿಧಾನಗಳನ್ನು ಶ್ರೀಮತಿ ಬಾಬುಗಳಿಗೆ ತೋರಿಸಿಕೊಟ್ಟೆ. ನನ್ನ ಉಪ್ಪಿಟ್ಟಿನ ಖ್ಯಾತಿ ಗುರುದೇವರವರೆಗೂ ಮುಟ್ಟಿತು.

ಪುಸ್ತಕ ಭಂಡಾರ, ನಂದಾಬಾಬುಗಳ ಚಿತ್ರಶಾಲೆ, ವಿದ್ವಜ್ಜನರ ಸಂಗದಲ್ಲಿ ನಾನು ಕೆಲವು ಕಾಲ ಕಳೆದೆ. "ವಿಶ್ವಭಾರತಿ" ಸೇರಿ ಡಿಗ್ರಿ ಗಳಿಸಬೇಕೆಂಬ ಚಪಲ ಕೊನೆಯಾಗಿತ್ತು. ಊರಿಗೆ ಹಿಂದಿರುಗಲು ನಿರ್ಧರಿಸಿದೆ.

ನಾನು ವಿಶ್ವಭಾರತಿಗೆ ಹೋಗುವ ಮುನ್ನ ನಾರಾಯಣ ಸಂಗಮ, ಶೇಷ ಕುಲಕರ್ಣಿ, ಪದ್ಮರಾಜ, ಹುನಗುಂದ, ಹಂಜಿ ರುದ್ರಪ್ಪ, ಅಲ್ಲಿಗೆ ವಿದ್ಯಾಭ್ಯಾಸಕ್ಕೆ ಹೋಗಿದ್ದರು. ಇವರು "ಕನ್ನಡ ಸುಹೃತ್ ಸಂಘ"ವನ್ನು ಸ್ಥಾಪಿಸಿಕೊಂಡರು. ಕರ್ನಾಟಕ ಬಂಗಾಳಗಳ ಬಾಂಧವ್ಯ ಬೆಳೆಸಲೆತ್ನಿಸಿದರು. ಶಾಂತಿನಿಕೇತನದ ಪುಸ್ತಕ ಭಂಡಾರದಲ್ಲಿ ಇವರು ದಾನ ಮಾಡಿದ್ದ ಕೆಲವು ಪುಸ್ತಕಗಳಿದ್ದುವು. ನಾನು ಊರಿಗೆ ಹೊರಡುವ ಮುನ್ನ ನನ್ನಲ್ಲಿದ್ದ ಕನ್ನಡ ಪುಸ್ತಕಗಳನ್ನು ಭಂಡಾರಕ್ಕೆ ಅರ್ಪಿಸಿದೆ.

ಶಾಂತಿನಿಕೇತನದ ಯಾತ್ರೆ ನನಗೆ ಡಿಗ್ರಿ ದೊರಕಿಸದಿದ್ದರೂ, ಪ್ರಪಂಚ ಜ್ಞಾನ ವಿಕಾಸಕ್ಕೂ ಕನ್ನಡಾಭಿಮಾನ ಜಾಗೃತಿಗೂ ನೆರವಾಯಿತು. ಈ ವ್ಯಾಜದಲ್ಲಿ ನನಗೆ ಅನೇಕ ಬಂಗಾಳಿ ಕಾವ್ಯಗಳ, ಕವಿಗಳ, ನಾಟಕಗಳ ಪರಿಚಯವಾಯಿತು.

**ಕೃಪೆ : ಬರಹಗಾರನ ಬದುಕು (ಆತ್ಮ ಕಥೆ) – 1972**

## ೧೦.೩. ರವೀಂದ್ರನಾಥ ಠಾಕೂರರನ್ನು ಕುರಿತ ವಿಮರ್ಶಾ ಕೃತಿಗಳು

ಠಾಕೂರರ ಬದುಕು ಹಾಗೂ ವಾಙ್ಮಯವನ್ನು ಕುರಿತು ಸಾಂದರ್ಭಿಕ ಲೇಖನಗಳನ್ನು ಹೊರತುಪಡಿಸಿದರೆ, ಆರು ಪುಸ್ತಕಗಳು ಕನ್ನಡದಲ್ಲಿ ಬಂದಿವೆ (ಕೊನೆಗೆ ಕೊಟ್ಟಿರುವ ಗ್ರಂಥಸೂಚಿಯನ್ನು ನೋಡಿ). ಇವುಗಳಲ್ಲಿ, ಹಾ. ಮಾ. ನಾಯಕರು ಬರೆದಿರುವ ಠಾಕೂರರ ಜೀವನ ಚರಿತ್ರೆ 'ಮಹಾನ್ ವ್ಯಕ್ತಿಯ ಬದುಕು ಇತರರು ಅವನನ್ನು ಅನುಸರಿಸುವಂತೆ ಪ್ರೇರೇಪಿಸುತ್ತದೆ' ಎಂಬ ನಂಬಿಕೆಯನ್ನು ಆಧರಿಸಿದೆ; ಆ ಕಾರಣದಿಂದಲೇ, 'ಠಾಕೂರರ ಬದುಕೇ ಒಂದು ಕಾವ್ಯ' ಎಂದು ನಾಯಕರು ತಮ್ಮ ಮುನ್ನುಡಿಯಲ್ಲಿ ಹೇಳುತ್ತಾರೆ. ಜವರೇಗೌಡರು ಮತ್ತು ಸಿಂಪಿ ಲಿಂಗಣ್ಣನವರು ರಚಿಸಿರುವ ಠಾಕೂರರ ಜೀವನಚರಿತ್ರೆಗಳು ನಾಯಕರ ಮಾದರಿಯನ್ನೇ ಅನುಸರಿಸುತ್ತಾ, ಕೇವಲ ಠಾಕೂರರ ವೈಯಕ್ತಿಕ ಬದುಕಿನ ಮೇಲೆ ತಮ್ಮ ಲಕ್ಷ್ಯವನ್ನು ಕೇಂದ್ರೀಕರಿಸುತ್ತವೆ. ವಿಶೇಷವೆಂದರೆ ರವೀಂದ್ರರ ಸಾಹಿತ್ಯ ಚರಿತ್ರೆಯನ್ನು ಸಂಕ್ಷಿಪ್ತಗೊಳಿಸಿ ರವೀಂದ್ರರ ಜೀವನ ಚರಿತ್ರೆಯ ಬಗೆಗೆ ಹೆಚ್ಚಿನ ವಿಷಯಗಳನ್ನು ಇದು ಒಳಗೊಂಡಿದೆ.

ಕೃತಿಯ ಅರಿಕೆಯಲ್ಲಿ ರವೀಂದ್ರರ ಹಿರಿಮೆಯನ್ನು ವ್ಯಾಖ್ಯಾನಿಸಿರುವುದು ತುಂಬ ಪ್ರಬುದ್ಧವಾಗಿದೆ. ಅನಂತರ 'ಗುರುದೇವ' ಉಪಶೀರ್ಷಿಕೆಯಡಿ ರವೀಂದ್ರರನ್ನು ಕವಿಯಾಗಿ ವಾಲ್ಮೀಕಿ, ಕಾಳಿದಾಸರಿಗೆ ಹೋಲಿಸಿ ಸರಿಸಮನಾದ ಸ್ಥಾನಮಾನ ನೀಡಿದ್ದಾರೆ; ಕಾಯಕಯೋಗಿಯಾಗಿ, ಪ್ರೇಮಯೋಗಿಯಾಗಿ, ಸುಧಾರಣಾವಾದಿಯಾಗಿ, ಶಿಕ್ಷಣತಜ್ಞರಾಗಿ, ವಿಶ್ವಹಿತೈಷಿಯಾಗಿ ಅವರು ಬೋಧಿಸಿದ ಚಿಂತನೆಗಳು ಅವರನ್ನು 'ಗುರುದೇವ'ನ ಸ್ಥಾನಕ್ಕೇರಿಸಿವೆ ಎನ್ನುತ್ತಾರೆ.

ಠಾಕೂರರ ಮನೆತನ, ಬಂಗಾಳದ ಪರಿಸ್ಥಿತಿ, ಬಾಲ್ಯ, ಶಾಲೆಯ ಸೆರೆ, ಕಾವ್ಯದಯ, ಹಿಮಾಲಯ ದರ್ಶನ, ಶೆಲೈಡಾದ ಅನುಭವ, ಶಿಕ್ಷಣ ಸಂಸ್ಥೆಗಳು, ರವೀಂದ್ರರ ಪ್ರಸಿದ್ಧಿಯ ದಿಗ್ವಿಜಯ, ಚಿರಾಯುವಾದ ಕವಿಯಾಗಿ ಅಮರವಾದ ಅಂಶಗಳ ಹಿನ್ನೆಲೆಯಲ್ಲಿ ರವೀಂದ್ರರ ಬದುಕು ಮತ್ತು ಸಾಧನೆಯ ಹಾದಿಯನ್ನು ವಿವರಿಸಿದ್ದಾರೆ ಇದೇ ವಿಷಯಗಳನ್ನು ಸಾಕ್ಷರತೆ ಪ್ರಚಾರದ ನಿಟ್ಟಿನಲ್ಲಿ 'ಗುರುದೇವ ರವೀಂದ್ರರು' ಹೆಸರಿನಲ್ಲಿ ವಯಸ್ಕರಿಗೆ ಸರಳಗನ್ನಡದಲ್ಲಿ ರವೀಂದ್ರನಾಥ ಠಾಕೂರರ ಬಗೆಗೆ ಸಂಕ್ಷಿಪ್ತ ಪರಿಚಯವನ್ನು ಮಾಡಿ, ವಯಸ್ಕರ ಶಿಕ್ಷಣ ಸಮಿತಿಯಿಂದ ಹಾ.ಮಾ.ನಾಯಕರು ಪ್ರಕಟಿಸಿರುತ್ತಾರೆ.

ಇವುಗಳಿಗಿಂತ ಭಿನ್ನವಾಗಿ, ಮಾಸ್ತಿಯವರ ಕೃತಿ ಸಂಪೂರ್ಣವಾಗಿ ಠಾಕೂರರ ಸಾಹಿತ್ಯವನ್ನು ಲಕ್ಷಿಸುತ್ತದೆ; ಇದು ಮಾಸ್ತಿಯವರು ಶಾಂತಿನಿಕೇತನಕ್ಕೆ ಹೋಗಿ, ಅಲ್ಲಿ ಗುರುದೇವರನ್ನು ಭೇಟಿ ಮಾಡಿದ ನಂತರ ಬರೆಯಲಾದ ಕೃತಿ. ಈ ಕೃತಿರಚನೆಯಲ್ಲಿ ಮಾಸ್ತಿಯವರ ಉದ್ದೇಶ ಠಾಕೂರರ ಎಲ್ಲಾ ಪ್ರಮುಖ ಕೃತಿಗಳನ್ನೂ ಕನ್ನಡ ಓದುಗರಿಗೆ ಪರಿಚಯಿಸುವುದು; ಆ ಕಾರಣದಿಂದ, ಅವರು "ಸಂಧ್ಯಾ ಸಂಗೀತ್" ಕವನದಿಂದ ಪ್ರಾರಂಭಿಸಿ, "ಕನಿಕಾ" ವರೆಗೆ ಟಾಗೋರರ ಎಲ್ಲಾ ಪ್ರಮುಖ ಕವನಗಳನ್ನು/ಅವುಗಳ ಮುಖ್ಯ ಭಾಗಗಳನ್ನು ಅನುವಾದಿಸುತ್ತಾರೆ; ಮತ್ತು ಟಾಗೋರರ ಕಥೆ–ಕಾದಂಬರಿ–ನಾಟಕಗಳ ಕಥಾವಸ್ತುಗಳನ್ನೂ ಸಂಕ್ಷಿಪ್ತವಾಗಿ ಪರಿಚಯಿಸುತ್ತಾರೆ.

'ರವೀಂದ್ರ ಪ್ರಶಸ್ತಿ' ಎಂಬ ವಿಮರ್ಶಾ ಲೇಖನಗಳ ಸಂಕಲನ ಠಾಕೂರರ ಜನ್ಮ ಶತಮಾನೋತ್ಸವದ ಸಂದರ್ಭದಲ್ಲಿ, 1962ರಲ್ಲಿ, ಪ್ರಕಟವಾಯಿತು. ಇದರ ಮುಖ್ಯ ಸಂಪಾದಕರು ಮಾಸ್ತಿಯವರು. ಈ ಸಂಕಲನದಲ್ಲಿ ಒಟ್ಟು 23 ಲೇಖನಗಳಿವೆ ಮತ್ತು ಅವು ಟಾಗೋರರ ಸಾಹಿತ್ಯವನ್ನೇ ಅಲ್ಲದೆ 'ರವೀಂದ್ರ ಸಂಗೀತ', 'ರವೀಂದ್ರರ ವರ್ಣಚಿತ್ರಗಳು', ಇತ್ಯಾದಿ ವಿಷಯಗಳನ್ನೂ ಒಳಗೊಂಡಿವೆ; ಮತ್ತು ಅಂದು (ಅರವತ್ತರ ದಶಕದಲ್ಲಿ) ಪ್ರಖ್ಯಾತರಾಗಿದ್ದ ಶ್ರೀರಂಗ, ಎಸ್.ಕೆ. ರಾಮಚಂದ್ರರಾವ್, ವಿ.ಕೆ. ಗೋಕಾಕ್, ಎಲ್.ಎಸ್. ಶೇಷಗಿರಿರಾವ್, ಇತ್ಯಾದಿ ವಿದ್ವಾಂಸರು ಲೇಖನಗಳನ್ನು ಬರೆದಿದ್ದಾರೆ.

ರಾಮಚಂದ್ರರಾವ್ ಅವರು "ರಬೀಂದ್ರೊ ಸಂಗೀತ್" ಎಂಬ ತಮ್ಮ ಲೇಖನದಲ್ಲಿ ಆ ಬಗೆಯ ಸಂಗೀತದ ಬೇರುಗಳನ್ನು ಬಂಗಾಳದಲ್ಲಿ ಅನೇಕ ಶತಮಾನಗಳ ಕಾಲ ತುಂಬಾ ಜನಪ್ರಿಯವಾಗಿದ್ದ 'ಬಾವುಲ್ ಸಂಗೀತ'ದಲ್ಲಿ ಗುರುತಿಸುತ್ತಾರೆ. ಠಾಕೂರರ ನಾಟಕಗಳ ಗಾಯನ–

ನೃತ್ಯ ಭಾಗಗಳನ್ನು ವ್ಯಾಖ್ಯಾನಿಸುತ್ತಾ, ಶ್ರೀರಂಗರು "ರವೀಂದ್ರರ ನಾಟಕಗಳಲ್ಲಿ ವಿಚಾರಕ್ಕೆ ಪ್ರಾಧಾನ್ಯ ಎಂದು ನಾವು ಪ್ರತ್ಯೇಕವಾಗಿ ಸಿದ್ಧಾಂತವನ್ನು ಹೂಡುವ ಅಗತ್ಯವೇ ಇಲ್ಲ. .... ನಾಟಕವು ಮುಖ್ಯವಾಗಿ ಮೊದಲಿಗೆ ಸಾಹಿತ್ಯ; ಪದ್ಯವೇ ಆಗಿರಲಿ, ಗದ್ಯವೇ ಆಗಿರಲಿ, ಶೈಲಿಯಲ್ಲಿ ಸಾಹಿತ್ಯದ ಪ್ರತಿಭೆ ಮಿಂಚುತ್ತಿರಬೇಕು. .... ನಾಟಕ–ಸಾಹಿತ್ಯಕ್ಕೆ ತನ್ನ ಶಕ್ತಿಯನ್ನು ತೋರಿಸಿಕೊಟ್ಟ ಅವರ ಉಪಕಾರ ಚಿರಕಾಲ ಬಾಳುವುದು" ಎಂದು ದೀರ್ಘವಾಗಿ ವಾದಿಸುತ್ತಾರೆ. ಠಾಕೂರರ ಕಾವ್ಯದಷ್ಟೇ ಅವರ ಕಥೆ–ಕಾದಂಬರಿಗಳು ಮಹತ್ವಪೂರ್ಣವಾಗಿವೆ ಎಂದು ತಮ್ಮ ವಾದವನ್ನು ಮಂಡಿಸುವ ಶೇಷಗಿರಿರಾವ್ 'ಚತುರಂಗ್' ಮತ್ತು 'ಗೋರಾ' ಕಾದಂಬರಿಗಳನ್ನು ಇತರ ಕಾದಂಬರಿಗಳಿಗಿಂತ ಶ್ರೇಷ್ಠವೆಂದು ಪರಿಗಣಿಸುತ್ತಾರೆ. ಪ್ರಸಿದ್ಧ ಕಲಾ–ವಿಮರ್ಶಕರಾದ ಎ.ಎನ್. ಸುಬ್ಬರಾವ್ ಅವರ ಅಭಿಪ್ರಾಯದಲ್ಲಿ: ಚಿತ್ರಕಲೆಯಲ್ಲಿ ಠಾಕೂರರು ಅಜಂತಾ ಶೈಲಿಯ ಸಂಪೂರ್ಣ ಸಾಂಕೇತಿಕ ಮತ್ತು ಪಾಶ್ಚಿಮಾತ್ಯ ಸಮಾಜದ ಸಂಪೂರ್ಣ ವಾಸ್ತವಿಕತೆ ಇವೆರಡರ ನಡುವಿನ ದಾರಿಯನ್ನು ಆರಿಸಿಕೊಂಡರು ಎನ್ನುತ್ತಾರೆ. ಸಂಸ್ಕೃತ ಸಾಹಿತ್ಯ ಮತ್ತು ಠಾಕೂರರ ಸಾಹಿತ್ಯ ಇವೆರಡರ ನಡುವಿನ ಸಂಬಂಧವನ್ನು ವಿಶ್ಲೇಷಿಸುತ್ತಾ, ಸಿ.ಕೆ. ವೆಂಕಟರಾಮಯ್ಯನವರು ಠಾಕೂರರ 'ರಾಜಾ' ಎಂಬ ನಾಟಕವನ್ನು 'ಆಧ್ಯಾತ್ಮಿಕ ಅನ್ಯೋಕ್ತಿ' ಎಂದು ಗುರುತಿಸುತ್ತಾರೆ; ಅವರ ಅಭಿಪ್ರಾಯದಲ್ಲಿ, ಈ ನಾಟಕವು ಉಪನಿಷತ್ತುಗಳು ಜೀವಾತ್ಮ ಮತ್ತು ಪರಮಾತ್ಮ ಇವೆರಡರ ನಡುವೆ ಗುರುತಿಸಲು ವ್ಯತ್ಯಾಸವನ್ನು ನಾಟ್ಯೀಕರಿಸುತ್ತದೆ.

"ಶಾಂತಿನಿಕೇತನ ಮತ್ತು ಅಲ್ಲಿನ ಜೀವನ" ಎಂಬ ಲೇಖನದಲ್ಲಿ ಗೀತಾಂಜಲಿಯ ಪ್ರಸಿದ್ಧ ಅನುವಾದಕರಾದ ನಾರಾಯಣ ಸಂಗಮ, ದೀರ್ಘವಾಗಿ ಹಾಗೂ ಆಪ್ತವಾಗಿ ಶಾಂತಿನಿಕೇತನದ ಪವಿತ್ರ ವಾತಾವರಣವನ್ನು ಮತ್ತು ಮೇ 8, 1931ರಲ್ಲಿ ಅಲ್ಲಿ ನಡೆದ ಠಾಕೂರರ 70ನೆಯ ಜನ್ಮದಿನದ ಉತ್ಸವವನ್ನು ಪ್ರೀತ್ಯಭಿಮಾನಗಳಿಂದ ವರ್ಣಿಸುತ್ತಾರೆ. ಈ ವಿವರಗಳು, ಶಾಂತಿನಕೇತನದಲ್ಲಿ ಅಧ್ಯಯನ ಮಾಡುತ್ತಿದ್ದ ವಿದ್ಯಾರ್ಥಿಗಳು ಪ್ರತಿ ದಿನ ಬೆಳಿಗ್ಗೆ "ಓಂ ಪಿತಾನೋಸಿ, ಪಿತಾನೋ ಬೋಧಿ" ಇತ್ಯಾದಿ ವೇದಮಂತ್ರಗಳನ್ನು ಪಠಿಸುತ್ತಿದ್ದುದು, ಠಾಕೂರರ ಜನ್ಮದಿನದಂದು ದೀರ್ಘವಾಗಿ ಪಠಿಸಲ್ಪಟ್ಟ ವೇದ ಮಂತ್ರಗಳು ಮತ್ತು ಅವುಗಳ ಕನ್ನಡ ಅರ್ಥ, ಮತ್ತು ಅಂದು ಚೀನಾ–ಜಪಾನ್ ದೇಶಗಳಿಂದ ಬಂದಿದ್ದ ಚಿತ್ರಕಾರರು ಗುರುದೇವರಿಗೆ ಅರ್ಪಿಸಿದ ಪ್ರಸಿದ್ಧ ತೈಲ ಚಿತ್ರಗಳು, ಇತ್ಯಾದಿಗಳೆಲ್ಲವನ್ನೂ ಒಳಗೊಂಡಿವೆ. ಕೊನೆಗೆ, ಅಂದು ಸಾಯಂಕಾಲದಲ್ಲಿ ನಡೆದ ಅಭಿನಂದನಾ ಸಮಾರಂಭದಲ್ಲಿ ಠಾಕೂರರು ಮಾಡಿದ ಭಾಷಣದ ಮುಖ್ಯಾಂಶಗಳನ್ನು ಸಂಗಮ ಅವರು ಕೊಡುತ್ತಾರೆ. "ನಾನೊಬ್ಬ ಪ್ರೇಮೋಪಜೀವಿ, ಸೌಂದರ್ಯೋಪಾಸಕ, ಆನಂದೋನ್ಮತ್ತ ನರ್ತಕ, ತಲ್ಲೀನ ಗಾಯಕ. ನಾನು ಕವಿ! 70 ವರ್ಷಗಳ ಅನುಭವದ ಮಾತು ಹೇಳುತ್ತೇನೆ. ನಾನು ಇನ್ನೇನೂ ಅಲ್ಲ"–ಎಂದು ಅಂದು ಠಾಕೂರರು ಭಾವುಕರಾಗಿ ಘೋಷಿಸಿದರೆಂದು ಸಂಗಮರು ದಾಖಲಿಸುತ್ತಾರೆ.

ಕುವೆಂಪು ಅವರ "ಕವಿ ರವೀಂದ್ರರು" ಎಂಬ ಲೇಖನ (ವಿಭೂತಿಪೂಜೆ) ಠಾಕೂರರ ಕಾವ್ಯವನ್ನು ಕುರಿತ ಒಂದು ಪ್ರಮುಖ ವಿಮರ್ಶಾತ್ಮಕ ಲೇಖನ. ಈ ಲೇಖನದಲ್ಲಿ ಟಾಗೋರರು 'ಶ್ರೇಷ್ಠ' ಕವಿ, ಆದರೆ 'ಮಹಾಕವಿ'ಯಲ್ಲ ಎಂದು ಕುವೆಂಪು ವಾದಿಸುತ್ತಾರೆ: "ಅವರನ್ನು 'ಮಹಾಕವಿಯಾಗಿರುವ ಶ್ರೇಷ್ಠ ವ್ಯಕ್ತಿ' ಎಂದು ವರ್ಣಿಸುವುದಕ್ಕಿಂತಲೂ 'ಶ್ರೇಷ್ಠ ಕವಿಯಾಗಿರುವ ಮಹಾವ್ಯಕ್ತಿ' ಎಂದು ವರ್ಣಿಸಿದರೆ ಹೆಚ್ಚು ಸತ್ಯವಾಗಿ ತೋರುತ್ತದೆ". ಪರಿಣಾಮತಃ, ಅವರಿಗೆ ಹೋಮರ್ ಅಥವಾ ವ್ಯಾಸರಂತೆ ಇಡೀ ರಾಷ್ಟ್ರದ ಅಂತಃಸತ್ವವನ್ನು ಗ್ರಹಿಸಲು ಸಾಧ್ಯವಾಗಲಿಲ್ಲ; ಮತ್ತು "ಮಹಾಕಾವ್ಯಾತ್ಮಕವೂ ಆಗಬೇಕಾಗಿದ್ದ ಆ ಪ್ರತಿಭೆ ಭಾವಗೀತಾತ್ಮಕ ಮಾತ್ರವಾಗಿಯೇ ಪರ್ಯವಸಾನ ಹೊಂದಬೇಕಾಯಿತು" ಎಂದರೆ, ಕುವೆಂಪು ಅವರ ದೃಷ್ಟಿಯಲ್ಲಿ, ಒಂದು ರಾಷ್ಟ್ರದ ಸತ್ವ ಅಥವಾ ಆತ್ಮ ಅದರ ಪ್ರಾಚೀನ ಪುರಾಣಗಳಲ್ಲಿ ರೂಪಕಾತ್ಮಕವಾಗಿ ಅಸ್ತಿತ್ವದಲ್ಲಿರುತ್ತದೆ; ಮಹಾಕವಿಗೆ ಮುಖ್ಯವಾಗುವುದು ಇಡೀ ರಾಷ್ಟ್ರದ ಅಂತಃಸತ್ವದ ಅರಿವು; ಇದು ರವೀಂದ್ರರಿಗೆ ಸಾಧ್ಯವಾಗದ ಕಾರಣ ಅವರು ವ್ಯಾಸ-ವಾಲ್ಮೀಕಿಗಳಂತೆ ಮಹಾಕವಿಗಳಾಗಲು ಸಾಧ್ಯವಾಗಲಿಲ್ಲ.

ಟಿ.ಎಸ್.ವೆಂಕಣ್ಣಯ್ಯನವರು 1927ರಲ್ಲಿ ಠಾಕೂರರ 'ಪ್ರಾಚೀನ ಸಾಹಿತ್ಯ' ಎಂಬ ವಿಮರ್ಶಾ ಸಂಕಲವನ್ನು ಅನುವಾದಿಸಿದರು. ಈ ಲೇಖನವು ಈ ಕೃತಿಯಲ್ಲಿ ಸೇರಿದೆ. ಅದರಲ್ಲಿರುವ 'ಕಾವ್ಯೇರ್ ಅನಾದರ್' (ಕಾವ್ಯದ ಅನಾದರ) ಎಂಬ ಲೇಖನ ನವೋದಯ ಕಾಲದಲ್ಲಿ ಕನ್ನಡ ಸಾಹಿತಿಗಳನ್ನು ತುಂಬಾ ಪ್ರಭಾವಿಸಿತು ಎಂದು ಕಂಡುಬರುತ್ತದೆ. ಆ ಲೇಖನದಲ್ಲಿ ಠಾಕೂರರು ರಾಮಾಯಣದಲ್ಲಿ ಊರ್ಮಿಳಾದೇವಿ. ಶಾಕುಂತಲಾದಲ್ಲಿ ಅನಸೂಯಾ-ಪ್ರಿಯಂವದೆಯರು, ಬಾಣಭಟ್ಟನ ಕಾದಂಬರಿಯಲ್ಲಿ ಪತ್ರಲೇಖೆ, ಇತ್ಯಾದಿ ಪಾತ್ರಗಳನ್ನು ಆಯಾಯಾ ಕೃತಿಗಳು ಅನವಶ್ಯಕವಾಗಿ ಉಪೇಕ್ಷೆ ಮಾಡಿವೆಯೆಂದು ಆ ಪಾತ್ರಗಳನ್ನು ವ್ಯಾಖ್ಯಾನಿಸುತ್ತಾ. ಅವರು ಹೀಗೆ ಹೇಳುತ್ತಾರೆ.

> "ಕವಿಗಳಿಂದ ಸಂಪೂರ್ಣವಾಗಿ ಉಪೇಕ್ಷಿತರಾಗಿದ್ದರೂ
> ಅಮರಲೋಕದಿಂದ ಭ್ರಷ್ಟರಾಗದಿರುವಂತಹ ಒಬ್ಬಿಬ್ಬರು ಸ್ತ್ರೀಯರು
> ಕಾವ್ಯಪ್ರಪಂಚದಲ್ಲಿರುತ್ತಾರೆ. ಪಕ್ಷಪಾತಿಯೂ ಕೃಪಣವೂ ಆದ
> ಪಾಠಕರ ಹೃದಯವು ಮುಂದೆ ಬಂದು ಅವರಿಗೆ ಆಶ್ರಯವನ್ನು ಕೊಡುತ್ತದೆ."

ಈ ಲೇಖನವು ಅನುವಾದಗೊಂಡ ನಂತರ ಬಂದ ರಾಮಾಯಣಗಳಲ್ಲಿ ಲಕ್ಷ್ಮಣ, ಊರ್ಮಿಳೆ, ಮಂಥರೆ, ಶಬರಿ, ಮಂಡೋದರಿ, ಮುಂತಾದವರಿಗೆ ದೊರಕಿರುವ ಪ್ರಾಧಾನ್ಯತೆ ಮತ್ತು ಕವಿಯ ಅನುಕಂಪ – ಇವುಗಳಿಗೆ ಆಧುನಿಕ ಸಾಹಿತ್ಯದ ಬಂಡಾಯದ ಧ್ವನಿ, ಎಲ್ಲರನ್ನೂ ಸಮಾನವಾಗಿ ಕಾಣುವ ಪ್ರಜಾಪ್ರಭುತ್ವ ವ್ಯವಸ್ಥೆ, ಇತ್ಯಾದಿಗಳೊಡನೆ, ಸ್ವಲ್ಪ ಮಟ್ಟಿಗಾದರೂ ಠಾಕೂರರ ಲೇಖನದ ಪ್ರಭಾವವಿದೆಯೆಂದು ನಾವು ತರ್ಕಿಸಬಹುದು.

ಕನ್ನಡದಲ್ಲಿ ರವೀಂದ್ರನಾಥ ಠಾಕೂರರು ರವೀಂದ್ರರ ಮತ್ತು ಅವರ ಸಾಹಿತ್ಯದ ಬಗೆಗಿನ ಪರಿಚಯಿಸುವ ನಿಟ್ಟಿನಲ್ಲಿ ಮಾಸ್ತಿ ವೆಂಕಟೇಶ ಅಯ್ಯಂಗಾರರ ಕೊಡುಗೆ ಅಗ್ರಗಣ್ಯವಾದುದು.

ರವೀಂದ್ರರ ಬದುಕು ಮತ್ತು ಬರಹದ ಬಗೆಗೆ ಬೆಳಕು ಚೆಲ್ಲುವ 'ರವೀಂದ್ರನಾಥ ಠಾಕೂರ್' ಹಾಗೂ ಇವರ ಸಂಪಾದಕತ್ವದ 'ರವೀಂದ್ರ ಪ್ರಶಸ್ತಿ', 'ರವೀಂದ್ರ ಪೂಜನ', 'ವಿಶ್ವಮಾನವನೆಡೆಗೆ' ಕೃತಿಗಳು ಕನ್ನಡದಲ್ಲಿ ಮಹತ್ವದ ರವೀಂದ್ರ ಸಾಹಿತ್ಯದ ಬಗೆಗಿನ ಮೂಲ ಆಕರವಷ್ಟೇ ಅಲ್ಲದೆ ನಾನಾ ವಿದ್ವಾಂಸರ ಪಾಂಡಿತ್ಯಪೂರ್ಣ ವಿಮರ್ಶಾತ್ಮಕ, ಪರಿಚಯಾತ್ಮಕ ಲೇಖನಗಳಿಂದ ಉಪಯುಕ್ತ ಮಾಹಿತಿಗಳನ್ನು ಒದಗಿಸಿಕೊಟ್ಟಿದೆ. ಮಾಸ್ತಿ ಅವರ 'ರವೀಂದ್ರನಾಥ ಠಾಕೂರ್'ನಲ್ಲಿ ಸ್ವಲ್ಪಮಟ್ಟಿನ ರವೀಂದ್ರರ ಜೀವನದ ಹಿನ್ನೆಲೆಯಿದೆ. ಬಹುವಾಗಿ ರವೀಂದ್ರ ಸಾಹಿತ್ಯದ ಪರಿಚಯಕ್ಕೆ ಹೆಚ್ಚು ಒತ್ತು ಕೊಡಲಾಗಿದೆ. ರವೀಂದ್ರರ ಸಮಗ್ರ ಜೀವನ ಮತ್ತು ಸಾಹಿತ್ಯ ಚರಿತ್ರೆಯನ್ನು ಪರಿಪೂರ್ಣವಾಗಿ ಹೇಳಲಾಗಿಲ್ಲ; ಈ ಪರಿಮಿತಿಯೊಳಗೆ ಹೇಳಲಾಗುವುದೂ ಇಲ್ಲ. ಆದರೆ, ರವೀಂದ್ರ ಸಾಹಿತ್ಯ ಚರಿತ್ರೆಯನ್ನು ಸ್ವಲ್ಪ ವಿಷದವಾಗಿಯೇ ವಿವರಿಸುತ್ತಾ, ರವೀಂದ್ರರ ಮತ್ತು ಅವರ ಸಾಹಿತ್ಯದ ಬಗೆಗಿನ ವ್ಯಾಖ್ಯಾನಗಳು ಬಹಳ ಅರ್ಥಪೂರ್ಣವಾಗಿವೆ. ಪ್ರಮುಖ ಕೃತಿಗಳ ಬಗೆಗೆ ಆಯಾಯಾ ಸಾಂದರ್ಭಿಕ ಸನ್ನಿವೇಶಗಳ ಜೊತೆಗೆ ವಿಮರ್ಶಾತ್ಮಕವಾಗಿ ವಿಶ್ಲೇಷಿಸುತ್ತಾ, ರವೀಂದ್ರ ಸಾಹಿತ್ಯದ ಸ್ವರೂಪವನ್ನು ಸ್ಥೂಲವಾಗಿಯಾದರೂ, ಕನ್ನಡಿಗರಿಗೆ ಕಲ್ಪಿಸಿಕೊಡುವಲ್ಲಿ ಈ ರವೀಂದ್ರರ ಬಗೆಗಿನ ಮೊದಲ ಪರಿಚಯಾತ್ಮಕ ಕೃತಿ ರಚನೆಯ ಪ್ರಯತ್ನ ಸಫಲವಾಗಿದೆ.

**ಶಿಕ್ಷಕ ಠಾಕೂರ್**

ಕೆ.ಟಿ. ವೀರಪ್ಪ ಅವರ ಈ ಕನ್ನಡ ಅನುವಾದಿತ ಕೃತಿಯಲ್ಲಿ ರವೀಂದ್ರರು ಶಿಕ್ಷಣತಜ್ಞರಾಗಲು ಮೂಲ ಪ್ರೇರಣೆ, ಅವರು ಹಾಕಿಕೊಂಡ ಶಾಂತಿನಿಕೇತನ, ಶ್ರೀನಿಕೇತನ, ವಿಶ್ವಭಾರತಿ ಶಿಕ್ಷಣ ಸಂಸ್ಥೆಗಳು, ಅವುಗಳ ರೂಪುರೇಷೆಗಳು ಮತ್ತು ಶೈಕ್ಷಣಿಕ ಆದರ್ಶಗಳನ್ನು ಕುರಿತು ಉಪಯುಕ್ತವಾದ ವಿಪುಲ ಮಾಹಿತಿಗಳನ್ನು ಇದು ಒಳಗೊಂಡಿದೆ. ರವೀಂದ್ರರ ಕೃತಕವಾದ ಇಂಗ್ಲಿಷ್‌ರ 'ಕಾನ್ವೆಂಟ್ ಶಿಕ್ಷಣಪದ್ಧತಿ'ಯ ಶಾಲೆಯ ಸೆರೆಯಲ್ಲಿ ಕಳೆದ ಬೇಸರದ ವಿದ್ಯಾರ್ಥಿ ಜೀವನದ ಸ್ವಾನುಭವವೇ, ರವೀಂದ್ರರು ಆಗಿನಿಂದಲೂ ಒಂದು ಆದರ್ಶ ಶಾಲೆ ಮತ್ತು ಶಿಕ್ಷಣಪದ್ಧತಿಯನ್ನು ಚಿಂತಿಸಲಾರಂಭಿಸಿದರು. ಕೊನೆಗೆ 'ಶಾಂತಿನಿಕೇತನ'ದ ಹೆಸರಲ್ಲಿ ತಮ್ಮ ಕನಸನ್ನು ನನಸುಗೊಳಿಸಿದರು. ಆ ಬಗೆಗೆ, ಪ್ರಾಚೀನ ಗುರುಕುಲವನ್ನು ಹೋಲುವ ನಿಸರ್ಗದ ಸಹಜವಾದ ಒಡನಾಟದಲ್ಲಿ, ಜ್ಞಾನ, ಕಲೆ, ಕ್ರೀಡೆ, ದುಡಿಮೆಯಿಂದ ವ್ಯಕ್ತಿಯ ಸರ್ವತೋಮುಖ ಅಭಿವೃದ್ಧಿಯಾಗುವ ಮತ್ತು ಶಾಂತಿನಿಕೇತನದ ನಡಾವಳಿಗಳ ಬಗೆಗೆ ಮಾಹಿತಿ ಇದೆ. ಮಾತೃಭಾಷೆಯು ಶಿಕ್ಷಣ ಮಾಧ್ಯಮವಾಗಬೇಕೆಂದು ಕ್ರಾಂತಿಯನ್ನೇ ಹೂಡಿದರು. ಗ್ರಾಮೀಣದ ಅಭಿವೃದ್ಧಿಗಾಗಿ 'ಶ್ರೀನಿಕೇತನ'ವೆಂಬ ಗ್ರಾಮೀಣ ಕಸುಬು ತರಬೇತಿಯ ಶಿಕ್ಷಣದ ಸಂಸ್ಥೆ ತೆರೆದರು. ತದನಂತರದಲ್ಲಿ 'ವಿಶ್ವಭಾರತಿ' ಹೆಸರಿನಲ್ಲಿ ಅಂತರರಾಷ್ಟ್ರೀಯ ಆದರ್ಶದ ವಿಶ್ವವಿದ್ಯಾಲಯವೇ ಆಗಿ ಬೆಳೆಸಿ ಪಾಶ್ಚಾತ್ಯದ ಜಾನ್‌ಡೂಯಿಯಂತೆ ಪೌರ್ವಾತ್ಯದ ಮಹಾಶಿಕ್ಷಣ ತಜ್ಞ ಮತ್ತು ಮಹಾವಿದ್ಯಾಲಯಗಳ ಸಂಸ್ಥಾಪಕರಾಗಿ ಠಾಕೂರರು ಶೈಕ್ಷಣಿಕ ರಂಗದಲ್ಲಿ ಬೆಳೆದ ಚರಿತ್ರೆಯೇ ಈ ಕೃತಿ.

### ರವೀಂದ್ರ ಪ್ರಶಸ್ತಿ

ವಿಶ್ವಕವಿ ರವೀಂದ್ರನಾಥ ಠಾಕೂರರ ಶತಮಾನೋತ್ಸವ ಸ್ಮರಣಾರ್ಥವಾಗಿ ಭಾರತೀಯ ಕೇಂದ್ರ ಸಾಹಿತ್ಯ ಅಕಾಡೆಮಿಯು ರವೀಂದ್ರ ಸಾಹಿತ್ಯವನು ವಿವಿಧ ಭಾರತೀಯ ಭಾಷೆಗಳಲ್ಲಿ ಪ್ರಕಟಿಸಲು ಒಂಧು ವ್ಯವಸ್ಥಿತ ಯೋಜನೆಯಂತೆ ಸಮಿತಿಯನ್ನು ರೂಪಿಸಿತು. ಕನ್ನಡನಾಡಲ್ಲೂ ಡಾ. ಮಾಸ್ತಿ ವೆಂಕಟೇಶ ಅಯ್ಯಂಗಾರರ ಮುಖ್ಯ ಸಂಪಾದಕೀಯತ್ವದಲ್ಲಿ ರಾಜ್ಯಸಮಿತಿಯೊಂದು ಏರ್ಪಟ್ಟು 'ರವೀಂದ್ರ ಪ್ರಶಸ್ತಿ'ಯಾದಿಯಾಗಿ ಮಹತ್ವದ ಕೃತಿಗಳು ಘನ ವಿದ್ವಾಂಸರಿಂದ ರಚನೆಗೊಂಡು ಪ್ರಕಟವಾದವು.

ರವೀಂದ್ರ ಬದುಕು-ಬರಹದ ಬಗೆಗೆ ಕನ್ನಡ ವಿದ್ವಾಂಸರು ಸಮಗ್ರವಾದ ಮಾಹಿತಿಗಳನ್ನು ಈ ತಮ್ಮ ಸ್ವತಂತ್ರ ಲೇಖನಗಳಲ್ಲಿ ಸಂಯೋಜಿಸಿದ್ದಾರೆ. ಇದರ ಪ್ರಧಾನ ಸಂಪಾದಕರಾದ ಮಾಸ್ತಿ ಅವರು ಈ ಕೃತಿ ಅರಿಕೆಯಲ್ಲಿ, "..... ಇಲ್ಲಿ ಸೇರಿರುವ ಲೇಖನಗಳಿಂದ ಕವಿವರರ ಕುರರತ ತಕ್ಕಷ್ಟು ಸಮಗ್ರವಾದ ಒಂದು ಚಿತ್ರ ದೊರೆಯುತ್ತದೆಂದು ಹೇಳಬಹುದಾಗಿದೆ" ಎಂಬ ಮಾತಿನಂತೆ ರವೀಂದ್ರರ ಬದುಕು-ಬರಹದ ಬಗೆಗೆ ಪ್ರತ್ಯಕ್ಷವಾದ ನೆಲೆಗಳ ಜೊತೆಗೆ ಪೂರಕವಾದ ನೆಲೆಗಳ ಬಗೆಗೂ ಇಲ್ಲಿ ವಿಷಯ ಸಂಗ್ರಹಿಸಲಾಗಿದೆ. ಸಿದ್ಧಯ್ಯ ಪುರಾಣಿಕರ 'ಗುರುದೇವನ ಮಹಾಜೀವನ' ಎಂಬ ಈ ಕೃತಿ ಮೊದಲ ಲೇಖನದ ಹೆಸರೇ ರವೀಂದ್ರರ ಸಂಕೀರ್ಣ ಬದುಕಿನ ಪರಿಕಲ್ಪನೆಯಾಗಿ, ಅವರ ಅನಂತ ವಿಚಾರಗಳ ಕಣಕಣವಾಗಿ ಇಲ್ಲಿ ಸಂಕ್ಷಿಪ್ತವಾಗಿ ವಿವರಿಸಿದ್ದಾರೆ. ರವೀಂದ್ರರ ಕಾದಂಬರಿಗಳ ಬಗೆಗೆ ಎಲ್. ನಟರಾಜನ್, ಕಾವ್ಯಗಳ ಬಗೆಗೆ ನಾರಾಯಣ ಸಂಗಮ, ಪ್ರಬಂಧಗಳು ಮತ್ತು ಭಾಷಣಗಳ ಬಗೆಗೆ ಡಾ. ಕೆ. ಕೃಷ್ಣಮೂರ್ತಿ ಕಥೆಗಳ ಬಗೆಗೆ ಅ.ನ.ಕೃ., ಶೈಕ್ಷಣಿಕ ವಿಚಾರಗಳ ಬಗೆಗೆ ಸದಾಶಿವ ಒಡೆಯರ, ನಾರಾಯಣ ಸಂಗಮ, ವಿ. ಸೀತಾರಾಮಯ್ಯ; ಚಿತ್ರಕಲೆ ಬಗೆಗೆ ಅ.ನ. ಸುಬ್ಬರಾವ್, ಎಸ್.ಎ. ಕೃಷ್ಣನ್; ರವೀಂದ್ರ ಸಂಗೀತ ಕುರಿತು ಬಿ.ವಿ.ಕೆ. ಶಾಸ್ತ್ರೀ - ಮುಂತಾದ ಪ್ರಸಿದ್ಧ ಲೇಖಕರಿಂದ ರವೀಂದ್ರರ ಬಗೆಗಿನ ಮಾಹಿತಿಯ ಭಂಡಾರವಾಗಿ ಈ ಕೃತಿ ಮಹತ್ವದ್ದಾಗಿದೆ.

### ರವೀಂದ್ರ ಪೂಜನ

ಇದು ರವೀಂದ್ರರ ಸ್ಮರಣಾರ್ಥ ಕರ್ನಾಟಕ ರಾಜ್ಯ ಉತ್ಸವ ಸಮಿತಿಯು ಹೊರತಂದ ಎರಡನೆಯ ಕನ್ನಡದ ರವೀಂದ್ರರ ಬಗೆಗಿನ ಅನುವಾದಿತ ಪರಿಚಯಾತ್ಮಕ ಕೃತಿ. ಮಹಾಮಾನವರಾಗಿ-ವಿಶ್ವಕವಿಯಾಗಿ ವಿಶ್ವಮಾನ್ಯರಾದ ಇವರ ಬಗೆಗೆ ದೇಶೀಯ ವಿದ್ವಾಂಸರಲ್ಲಿ ಬಹಳಷ್ಟು ವಿಷಯಗಳು ಬಂದಿವೆ; ಇಲ್ಲಿ ಅತಿ-ಮಿತಿ ಇಲ್ಲವೆ ಸಮತೋಲನದ ಪರಾಮರ್ಶೆ ಇರಬಹುದು. ಆದುದರಿಂದ ಈ ವಿಶ್ವಮಾನವನನ್ನು ದೇಶೀಯರು ಹಾಗೂ ವಿದೇಶಿಯರ ಕಣ್ಣಿನಲ್ಲಿ ಹೇಗೆ ಅವರು-ಅವರ ಸಾಹಿತ್ಯ ಕಂಡಿದೆ ಎಂಬುದನ್ನು ವಸ್ತುನಿಷ್ಠವಾಗಿ ಅರಿಯಲು ದೇಶ-ವಿದೇಶಿಯರ ಠಾಕೂರರ ಬಗೆಗಿನ ಲೇಖನಗಳನ್ನು ಕನ್ನಡಕ್ಕೆ ಮಾಸ್ತಿಯವರ ಮುಖ್ಯ ಸಂಪಾದಕೀಯತ್ವದಲ್ಲಿ ಈ ಅನುವಾದ ಸಂಗ್ರಹ ಬಂದಿತು. ಒಟ್ಟಿನಲ್ಲಿ 'ರವೀಂದ್ರ ಪ್ರಶಸ್ತಿ' ಮತ್ತು

'ರವೀಂದ್ರ ಪೂಜನ' ಕೃತಿಗಳಿಂದ ರವೀಂದ್ರರ ದೇಶೀಯ ವಿದ್ವಾಂಸರಿಂದ, ವಿದೇಶಿ ಲೇಖಕರ ದೃಷ್ಟಿಯಿಂದ ಅವರ ಬದುಕು-ಬರೆಹವನ್ನು ಸಮಗ್ರವಾಗಿ ಹಾಗೂ ವಸ್ತುನಿಷ್ಠವಾಗಿ ಕಂಡುಕೊಳ್ಳಲು ಸಾಧ್ಯವಾಗಿದೆ.

**ವಿಶ್ವಮಾನವನೆಡೆಗೆ**

ಠಾಕೂರರ ಶತಮಾನೋತ್ಸವ ಸ್ಮರಣಾರ್ಥವಾಗಿ ಕೇಂದ್ರ ಸಾಹಿತ್ಯ ಅಕಾಡೆಮಿಯ ಯೋಜನೆಯಡಿ ಭಾರತದಲ್ಲಿರುವ ವಿದೇಶಿ ಫೋರ್ಡ್ ಸಂಸ್ಥೆಯ ಸಹಯೋಗದೊಂದಿಗೆ ಬಂಗಾಳದ ಪ್ರಸಿದ್ಧ ವಿದ್ವಾಂಸರು ಮತ್ತು ಭಾರತ ಸರ್ಕಾರದ ಸಂಸ್ಕೃತಿ ಮತ್ತು ವಿಜ್ಞಾನ ಸಂಶೋಧನಾ ಶಾಖೆಯ ಮಂತ್ರಿಯೂ ಆಗಿರುವ ಹುಮಾಯೂನ್ ಕಬೀರರ ನೇತೃತ್ವದ ಠಾಕೂರ್ ಸಮಿತಿಗೆ ಸಹಾಯಧನ ನೀಡಿ 'ಮಾಸ್ತಿ'ಯವರ ಮುಖ್ಯ ಸಂಪಾದಕೀಯದಲ್ಲಿ ವಿದೇಶಿ ಭಾಷಾಂತರಕಾರರಿಂದ ರವೀಂದ್ರರಿಗೆ ಸಂಬಂಧಿಸಿದ ಆಯ್ದ ಲೇಖನಗಳ "Towards universal man" ಎಂಬ ಇಂಗ್ಲಿಷ್ ಅನುವಾದಿತ ಸಂಕಲನವೂ ಬಂದಿದೆ.

ಭಾರತದ ಶ್ರೇಷ್ಠ ಸಮಾಜ ಸುಧಾರಕರಲ್ಲಿ ಅಗ್ರಮಾನ್ಯರಲ್ಲಿ ಒಬ್ಬರಾದ ಠಾಕೂರರನ್ನು, ಅವರ ಸಾಮಾಜಿಕ ಮತ್ತು ಆರ್ಥಿಕ ಅಭಿವೃದ್ಧಿಯ ಪ್ರಗತಿಪರವಾದ ಆಧುನಿಕ ಚಿಂತನೆಗಳು ಮತ್ತು ರಚನಾತ್ಮಕ ಸಾಧನೆಯನ್ನು, ಅವರನ್ನು ಕುರಿತ ಈ ಮಹತ್ವದ ಲೇಖನಗಳ ಮುಖಾಂತರ ಭಾರತೀಯ ಹಾಗೂ ಭಾರತೀಯೇತರರಿಗೆ ಪರಿಚಯ ಮಾಡಿಕೊಡುವ ಮಹತ್ವದ ಅವಶ್ಯಕತೆಯ ಹಿನ್ನೆಲೆಯಲ್ಲಿ ಈ ಮಹತ್ವದ ಕೃತಿ ಭಾಷೆಯಿಂದ ಭಾಷೆಗೆ ಭಾಷಾಂತರಗೊಳ್ಳುತ್ತಿದೆ. ಸಹಜವಾಗಿಯೇ ಕನ್ನಡದಲ್ಲಿ ಇಂತಹ ಮಹತ್ವದ ಕೃತಿಯನ್ನು ಶ್ರದ್ಧಾಪೂರ್ವಕವಾಗಿ ಸ್ವೀಕರಿಸಲಾಗಿದೆ. ಶಿಕ್ಷಣ, ಸಹಕಾರ, ನಾಗರಿಕತೆ, ಸಮಾಜ, ಅಧ್ಯಾತ್ಮ, ಸ್ವರಾಜ್ಯ, ರಾಜಕೀಯ, ಭಾರತೀಯ ಸಂಸ್ಕೃತಿ, ಕಲೆ, ಪೂರ್ವ-ಪಶ್ಚಿಮದ ಸಾಮರಸ್ಯ, ಮುಂತಾದ ಪ್ರಮುಖ ವಿಷಯಗಳನ್ನು ಕುರಿತು ಲೇಖನಗಳನ್ನು ಜಿ.ಎಸ್.ಶಿವರುದ್ರಪ್ಪ, ಚನ್ನವೀರ ಕಣವಿ, ಆರ್.ಸಿ. ಭೂಸನೂರು ಮಠ, ಎಂ.ಬಿ.ಬೂದಿಹಾಳಮಠ, ಆರ್.ಸಿ. ಹಿರೇಮಠ, ಗೌರೀಶ್ ಕಾಯ್ಕಿಣಿ, ಎಸ್.ರಾಮಚಂದ್ರರಾವ್, ಜಿ.ಎಸ್. ಅಮೂರ, ದೇವುಡು ನರಸಿಂಹಶಾಸ್ತ್ರಿ ಮುಂತಾದ ಕನ್ನಡ ಕವಿವರ್ಯರಿಂದ ಕನ್ನಡಕ್ಕೆ 'ವಿಶ್ವಮಾನವನೆಡೆಗೆ' ಹೆಸರಲ್ಲಿ ಅನುವಾದಿಸಿಕೊಳ್ಳಲಾಗಿದೆ. ಈ ಕೃತಿಯಿಂದ ರವೀಂದ್ರರ ಪ್ರಬಂಧ-ಲೇಖನಗಳಲ್ಲಿ ರವೀಂದ್ರರ ವ್ಯಾಪಕ ಚಿಂತನೆ, ಚರ್ಚೆ, ವಿಮರ್ಶೆ, ವಿಶ್ಲೇಷಣೆಯ ಹಿನ್ನೆಲೆಯಲ್ಲಿ ರಚಿತವಾದ ಅವರ ವಿಚಾರಗಳ ವಸ್ತುಸ್ಥಿತಿಯನ್ನು ಅರ್ಥ ಮಾಡಿಕೊಳ್ಳಲು ಸಹಕಾರಿಯಾಗುತ್ತದೆ.

**ರವೀಂದ್ರನಾಥ ಠಾಕೂರ್**

ಇದು ವಿದೇಶಿಯಳೊಬ್ಬಳಿಂದ ರಚಿತವಾದ ರವೀಂದ್ರರ ಜೀವನಚರಿತ್ರೆ ಗ್ರಂಥ. ಇಂಗ್ಲಿಷಿಗೆ ಅನುಗುಣವಾಗಿ 'ಠಾಗೋರ್' ಆಗಿ ಶೀರ್ಷಿಕೆಯಲ್ಲಿ ಬಳಕೆಯಾಗಿರುವುದು ಇವರ ವಿದೇಶಿತನದ ಕುರುಹು ಆಗಿದೆ. ರವೀಂದ್ರರ ಶಾಂತಿನಿಕೇತನದ ಒಡನಾಡಿಯಾಗಿದ್ದು ವಿಶ್ವಭಾರತಿ ಕಲಾಶಾಲಾ

ಅಧ್ಯಾಪಕಿಯಾಗಿದ್ದ ಮಾರ್ಜರಿ ಸೈಕ್ಸ್ ಬರೆದ ಕೃತಿ 1942ರಲ್ಲಿ ಅನುವಾದಗೊಂಡಿದೆ. ನಮ್ಮ ಮಹಾಕವಿಯ ಚರಿತ್ರೆ ವಿದೇಶಿಗಳಿಂದ ವಿದೇಶಭಾಷೆಯಲ್ಲಿ ರಚನೆಗೊಂಡು ಕನ್ನಡಕ್ಕೆ ಬರುವಾಗ ಮೂಲ ವಸ್ತುಸ್ಥಿತಿ ಗೌಣವಾಗಿರುವ ಸಾಧ್ಯತೆ ಇದ್ದರೂ, ಈಕೆ ಭಾರತದಲ್ಲೇ ವಾಸವಾಗಿದ್ದು, ಮಹಾಕವಿಯ ಒಡನಾಡಿಯಾಗಿದ್ದುದರಿಂದ ಸಹಜವಾಗಿಯೇ ಯಥಾವತ್ತಾದ ಚಿತ್ರಣ ನೀಡಿದ್ದಾರೆ. ಜೊತೆಗೆ ಪೂರ್ವಗ್ರಹ ಮುಕ್ತವಾಗಿ ವಿದೇಶಿ ದೃಷ್ಟಿಯಲ್ಲಿ ರವೀಂದ್ರರ ಜೀವನಚರಿತ್ರೆಯನ್ನು ವಸ್ತುನಿಷ್ಠವಾಗಿ ಅರ್ಥ ಮಾಡಿಕೊಳ್ಳಲು ನೆರವಾಗಿದೆ.

ಮಾತೃಭಾಷೆ ಪ್ರೇಮ ಮತ್ತು ಪ್ರಾಮುಖ್ಯತೆ, ಆಯಾಯ ಭಾಷೆಗಳ ಸ್ವಾವಲಂಬನೆ, ಸ್ವಂತಿಕೆ ಮತ್ತು ಸಮೃದ್ಧಿಯ ನಿಟ್ಟಿನಲ್ಲಿ ಪ್ರಗತಿದಾಯಕವೆಂದು ಠಾಕೂರರು 'ಬಂಗಾಳಿಯ ಏಳಿಗೆಗೆ ದುಡಿದ ವಿವರಗಳಿಂದ ಕೃತಿ ಆರಂಭವಾಗುತ್ತದೆ. ತದನಂತರದಲ್ಲಿ ಗಾಂಧೀಜಿ, ರೂಸೊ, ಜಾನ್‌ಡೂಯಿ ಮುಂತಾದವರ ಆಧುನಿಕ ಶೈಕ್ಷಣಿಕ ಸಿದ್ಧಾಂತಗಳನ್ನು ಅನ್ವಯಿಸಿಕೊಂಡು ವಿದ್ಯಾರ್ಜನೆಯು ವ್ಯವಸ್ಥಿತವಾದ ಪರಿಸರದಲ್ಲಿ, ಮಕ್ಕಳ ಮನಸ್ಸಿಗನುಗುಣವಾಗಿ, ಆಯಾಯ ಸಾಮಾಜಿಕ ಸಾಂದರ್ಭಿಕತೆ ಮತ್ತು ಸಮಷ್ಟಿಪ್ರಗತಿಗೆ ಪೂರಕವಾದ, ಪ್ರಗತಿಪರವೂ ಆಶಾದಾಯಕವೂ ಆದ ಹೊಸ ಶೈಕ್ಷಣಿಕ ಆದರ್ಶವನ್ನು ರೂಪಿಸಿದುದರ ಬಗೆಗೆ ಮಾಹಿತಿ ಇದೆ. ಬಂಗಾಳ ವಿಭಜನೆ, ಅಸಹಕಾರ ಚಳವಳಿಯಂತಹ ಸಂದರ್ಭಗಳಲ್ಲಿ ರವೀಂದ್ರರು ರಾಜಕೀಯ ಹೋರಾಟ–ಚಿಂತನೆ ನಡೆಸಿದುದರ ವಿವರವಿದೆ. ಯುದ್ಧಕಾರ್ಮೋಡ ಕವಿದ ವಿಶ್ವಕ್ಕೆ ಗೀತಾಂಜಲಿಯಿಂದ ವಿಶ್ವಶಾಂತಿ ಸಾರಿ ಮಾನವತೆಯ ಬೆಳಕು ಮೂಡಿಸಿದ ಬಗೆಗೆ ಅವರ ಶಿಕ್ಷಣ ಸಂಸ್ಥೆಗಳು ನಡೆಸಿದ ಅಭಿಯಾನದ ಬಗೆಗೆ ಇಲ್ಲಿ ಮಾಹಿತಿಗಳಿವೆ.

### ರವೀಂದ್ರ ದರ್ಶನ

ರವೀಂದ್ರರು ವಿಶ್ವವಂದ್ಯರಾಗಿ ಬೆಳೆಯಲು ಅವರ ಸಾಹಿತ್ಯ ಸೃಜನೆ ಬಹುಮಟ್ಟಿಗೆ ಕಾರಣವಾದುದರಿಂದ ಈ ಕೃತಿಯಲ್ಲಿ ರವೀಂದ್ರರ ಶಿಶುಗೀತೆ, ಭಾವಗೀತೆಗಳು, ಕಾವ್ಯ, ಕಾದಂಬರಿ, ನಾಟಕ ಮುಂತಾಗಿ ಪ್ರಕಾರಗಳಿಗನುಗುಣವಾಗಿ ಪ್ರಮುಖ ಕೃತಿಗಳನ್ನು ನಿದರ್ಶನಪೂರ್ವಕವಾಗಿ ಪರಾಮರ್ಶಿಸಿದ್ದಾರೆ. ಹೀಗೆ ರವೀಂದ್ರ ಸಾಹಿತ್ಯ ಪರಿಚಯಿಸಿಕೊಡುವುದರ ಜೊತೆಗೆ ಠಾಕೂರರ ಶೈಕ್ಷಣಿಕ ಸಾಧನೆ, ಪೂರ್ವ–ಪಶ್ಚಿಮ ಸಾಮರಸ್ಯ, ಪ್ರಮುಖ ರಾಜಕೀಯ ಚಿಂತನೆಗಳ ಮುಖೇನ ಇತರ ಪ್ರಮುಖ ಅಂಶಗಳಿಗೂ ಗಮನ ಕೊಡಲಾಗಿದೆ. ಈ ಕೃತಿಯ ಲೇಖಕರು ಸದಾಶಿವ ಒಡೆಯರ ಅವರು.

### ನನ್ನ ಬಾಲ್ಯದ ದಿನಗಳು

ರವೀಂದ್ರರ 'ಚೇಟೆ ಬಾಲ' (Chete Bala) ಕೃತಿಯಿಂದ ಅಹೋಬಲ ಶಂಕರ ಅವರು ಈ ಅನುವಾದವನ್ನು ರಚಿಸಿದ್ದಾರೆ. ಚೆನ್ನಾಗಿ ಬಂಗಾಳ ದೇಶ, ಬಂಗಾಳಿ ಭಾಷೆ ಹಾಗೂ ರವೀಂದ್ರರನ್ನು ಸಾಕಷ್ಟು ಮಟ್ಟಿಗೆ ಪ್ರತ್ಯಕ್ಷವಾಗಿ ಕಂಡುಂಡು ಅಹೋಬಲ ಅವರು

ರವೀಂದ್ರರ ಯಥಾವತ್ತಾದ ಜೀವಾನಾನುಭವಗಳನ್ನು ಕನ್ನಡಿಗರಿಗೆ ಪರಿಚಯಿಸುವಲ್ಲಿ ಯಶಸ್ವಿಯಾಗಿದ್ದಾರೆ.

ಕೃತಿಯ ಆರಂಭದಲ್ಲಿ ರವೀಂದ್ರರು ಸಮಕಾಲೀನ ಕಲ್ಕತ್ತೆಯ ಸ್ವರೂಪವನ್ನು ಚಿತ್ರಿಸುತ್ತಾ; ಕಾರು, ಸ್ಕೂಟರು, ಬಸ್ಸು, ವಿದ್ಯುಚ್ಛಕ್ತಿ ಮುಂತಾದ ಆಧುನಿಕ ಸೌಲಭ್ಯಗಳೇ ಇಲ್ಲದ ಕಲ್ಕತ್ತ ಒಂದು ಸಾಮಾನ್ಯ ಹಳ್ಳಿಯಂತೆ ನಾಗರಿಕತೆಯ ಸೋಂಕೇ ಇಲ್ಲದೆ ಅಜ್ಞಾನ ಮೂಢನಂಬಿಕೆಗಳ ತಾಣವಾಗಿದ್ದು, ಕಗ್ಗಾಡಿನ ಕುಗ್ರಾಮದಂತಿದ್ದುದು ಇಂದಿನ ಕಲ್ಕತ್ತಕ್ಕೆ ಹೋಲಿಸಿದರೆ ಅಚ್ಚರಿಯಾಗದೆ ಇರದು.  ಅಂತಹ ಪರಿಸರದಲ್ಲಿ ಅತ್ಯಾಧುನಿಕತೆ ಮತ್ತು ಸುಸಂಸ್ಕೃತ ಅತ್ಯುತ್ತಮ ಜೀವನಕ್ಕೆ ಹೆಸರಾಗಿದ್ದ ಠಾಕೂರರ ಮನೆತನದಲ್ಲಿ ರವೀಂದ್ರರು ಹುಟ್ಟಿ ಬೆಳೆದು ಬಂದ ಬಗೆಯನ್ನು ಠಾಕೂರರ ಸ್ವಾನುಭವದ ಮಾತುಗಳಲ್ಲಿ ಸಹಜವಾಗಿ ವಿವರಿಸಿದ್ದಾರೆ.

**ಕವಿ ಠಾಗೂರರ ಜೀವನ ದರ್ಶನ**

ಇದರ ಲೇಖಕರಾದ ಎಲ್.ಆರ್.ಕುಲಕರ್ಣಿ ಅವರು ರವೀಂದ್ರರನ್ನು ಕುರಿತ ವಂದನಾ ಪದ್ಯದೊಂದಿಗೆ ರವೀಂದ್ರರ ಬಾಲ್ಯ, ಸಾಹಿತ್ಯ, ಶಿಕ್ಷಣ, ರಾಷ್ಟ್ರಸೇವೆ, ಕಲೆ ಕುರಿತಂತೆ ಸಂಕ್ಷಿಪ್ತವಾಗಿ ಪ್ರಾಥಮಿಕ ಅಂಶಗಳನ್ನ ಪರಿಚಯಿಸುತ್ತಾರೆ.

**ಮಹರ್ಷಿ ದೇವೇಂದ್ರನಾಥ ಟ್ಯಾಗೋರ**

ಡಾ.ವ್ಹಿ.ಎಸ್.ಕಂಬಿ ಅವರು ಇಂಗ್ಲಿಷ್‌ನಿಂದ ಠಾಕೂರರ ಆತ್ಮಚರಿತ್ರೆಯನ್ನು ಇಲ್ಲಿ ಅನುವಾದಿಸಿದ್ದಾರೆ. ತಂದೆಯಂತೆಯೇ ರವೀಂದ್ರರೂ ಮುಖ್ಯವಾಗಿ ಆಧ್ಯಾತ್ಮಿಕ ವಿಕಾಸದಲ್ಲಿ ಬೆಳೆದು ಬಂದ ಬಗೆಯನ್ನು ಠಾಕೂರರ ಪರವೃತ್ತಿ, ಪ್ರತಿಭೆ, ದಿವ್ಯಾನುಭವ, ಜ್ಞಾನೋದಯ, ತತ್ವಬೋಧನೆ, ಸಭೆ ಮತ್ತು ಪತ್ರಿಕೆಯ ಪ್ರಭಾವ, ಭಕ್ತಿ, ಧರ್ಮ, ಕಾಯಕ, ದೇವರು ಕುರಿತಂತೆ ರವೀಂದ್ರರ ಭಾವನೆಗಳು ಇಲ್ಲಿ ಬಿಂಬಿತವಾಗಿವೆ.

**ರವೀಂದ್ರ ಸಮೀಕ್ಷೆ**

ರವೀಂದ್ರರ ಹಿರಿಯ ಬದುಕು ಮತ್ತು ಸಾಹಿತ್ಯ ಸಾಧನೆಯ ಬಗೆಗಿನ ಡಾ.ರಾಧಾಕೃಷ್ಣನ್, ಡಾ.ಕಜಿನ್ಸ್, ಅವರ ಮಹತ್ವ ವ್ಯಾಖ್ಯಾನಗಳನ್ನೊಳಗೊಂಡ ಪೀಠಿಕೆಯೊಂದಿಗೆ ರವೀಂದ್ರರ ಪ್ರಕೃತಿ, ಪಣಯಗೀತೆಗಳನ್ನು ವಿಶೇಷವಾಗಿ ಪರಿಗಣಿಸಿ ರವೀಂದ್ರರನ್ನು, ಅವರ ಕಾವ್ಯ, ಕತೆ, ಕಾದಂಬರಿಗಳಾದಿಯಾಗಿ ಅವರ ಸಾಹಿತ್ಯದ ಉದ್ಧರಣೆಯ ತುಣುಕುಗಳ ಸಹಿತ ಇದರ ಕರ್ತೃ ಎಂ.ರಾಮರಾವ್ ಮಾಡಿಕೊಟ್ಟಿದ್ದಾರೆ. ಹಾಗೆಯೇ ಅವರ ಶಿಕ್ಷಣ ಸಂಸ್ಥೆಗಳು, ರಾಷ್ಟ್ರಾಭಿಮಾನ, ವಿಶ್ವಪ್ರೇಮಗಳಿಗೂ ಹೆಚ್ಚಿನ ಗಮನ ಕೊಡಲಾಗಿದೆ.

**ವಿಶ್ವಕವಿ**

ಸಿಂಪಿ ಲಿಂಗಣ್ಣ ಅವರು ತಮ್ಮ ಆಧ್ಯಾತ್ಮಿಕ ಹಾಗೂ ಗಾಂಧೀವಾದಿ ನೆಲೆಯಲ್ಲಿ ಹೆಚ್ಚು ಒತ್ತುಕೊಟ್ಟು, ಗುರುದೇವರ ಆತ್ಮಚರಿತ್ರೆಯ 'ನೆನಹುಗಳು' ಆಧರಿಸಿ ರವೀಂದ್ರರನ್ನು ಈ ಕೃತಿ

ಮುಖಾಂತರ ಕನ್ನಡಿಗರಿಗೆ ಪರಿಚಯಿಸಿದ್ದಾರೆ. ಆರಂಭಿಕ ಶಿಶುಕಾವ್ಯ, ಆ ನಂತರ ಪ್ರೇಮಗೀತೆ, ತದನಂತರ ಭಕ್ತಿಗೀತೆಗಳ ವಿಕಾಸಗತಿಯನ್ನು ವಿವರಿಸಿ ಕೊನೆಗೆ ಮಹಾತ್ಮ ಗಾಂಧೀಜಿಯವರು ರೂಪಿಸಿದ ಸ್ವತಂತ್ರಭಾರತ ಹೆಚ್ಚು ಅರ್ಥಪೂರ್ಣವೂ-ಸತ್ವಯುತವೂ ಆಗಬೇಕಾದರೆ ರವೀಂದ್ರರ ಸಾಹಿತ್ಯ-ವಿಚಾರಗಳ ಸಂಸ್ಕಾರ ಬೇಕಾಗುತ್ತದೆ ಎಂದಿದ್ದಾರೆ.

**ಕವೀಂದ್ರ-ರವೀಂದ್ರ**

ಇದೊಂದು ಸೃಜನಾತ್ಮಕವಾದ ಠಾಕೂರರನ್ನು ಕುರಿತು ಬಿ.ಎಚ್.ಶ್ರೀಧರ್ ಅವರು ಬರೆದ ಜೀವನಚರಿತ್ರೆ. ಮುದ್ದಣ್ಣ-ಮನೋರಮೆಯರ ಸರಸ-ಸಲ್ಲಾಪದ ರಾಮಾಶ್ವಮೇಧದಲ್ಲಿನ ವಾಗ್ವಾದದ ಶೈಲಿಯಂತೆ ಸಂಭಾಷಣಾತ್ಮಕವಾಗಿ ರವೀಂದ್ರರ ಚರಿತ್ರೆಯನ್ನು ವಿವರಿಸುತ್ತಾ, ವಿಶ್ಲೇಷಿಸುತ್ತಾ, ಇವರ ಪಾಶ್ಚಾತ್ಯ ಕವಿಗಳು ಮತ್ತು ಸಾಹಿತ್ಯ, ಇಂಗ್ಲಿಷ್ ಭಾಷೆಯ ಸಾಹಿತ್ಯವನ್ನು ತೌಲನಿಕವಾಗಿ ಪರಾಮರ್ಶಿಸುತ್ತಾ ಹಾಸ್ಯ-ಪರಿಹಾಸ್ಯ, ಸರಸ-ಸಲ್ಲಾಪ, ಜೋಕು-ಚಟಾಕಿಗಳಿಂದ ಭಾವಗಳನ್ನು ಮಿಂಚಿಸುತ್ತಾ ಸೃಜನಾತ್ಮಕವಾಗಿಯೂ-ಕಲಾತ್ಮಕವಾಗಯೂ ಇದನ್ನು ರಚಿಸಿದ್ದಾರೆ. ಆರಂಭದಲ್ಲಿ ರವೀಂದ್ರರ ಸಾಹಿತ್ಯದ ಮೂರು ನೆಲೆಗಳ ಬಗೆಗೆ, ಕೌಟುಂಬಿಕ ಪರಿಸರ, ಸಾಮಾಜಿಕ, ಶೈಕ್ಷಣಿಕ ಚಟುವಟಿಕೆಗಳು, ಗೀತಾಂಜಲಿಯ ಔನ್ನತ್ಯ, ವಿಶ್ವಭಾರತಿಯ ನಿರ್ಮಾಣ ಕುರಿತು ಬರೆದಿದ್ದಾರೆ.

**ರವೀಂದ್ರನಾಥ ಠಾಕೂರ್**

ಒಬ್ಬ ರಾಷ್ಟೀಯ ನವೋದಯ ಮತ್ತು ಸ್ವಾತಂತ್ರ್ಯಕ್ಕೆ ಪ್ರಮುಖ ಕಾರಣರಾದ ಠಾಕೂರರ ಜೀವನ ಮತ್ತು ಸಾಧನೆಯನ್ನು ಈ ಕೃತಿಯಲ್ಲಿ ಹಿರಣ್ಮಯ್ ಬ್ಯಾನರ್ಜಿ ಸರಳ ಭಾಷೆಯಲ್ಲಿ ಸಂಗ್ರಹವಾಗಿ ಈ ಕೃತಿಯನ್ನು, ಎಲ್ಲ ರಾಷ್ಟ್ರೀಯ ಮಹನೀಯರ ಇಂಥ ಕೃತಿಗಳನ್ನು ತರಬೇಕೆನ್ನುವ ಭಾರತದ ವಾರ್ತಾ ಮತ್ತು ಪ್ರಚಾರ ಇಲಾಖೆಗೆ ಬರೆದುಕೊಟ್ಟಿದ್ದಾರೆ. ಇದನ್ನು ಕನ್ನಡಕ್ಕೆ ಎಲ್.ಎಸ್.ಶೇಷಗಿರಿರಾವ್ ಅವರು ಅನುವಾದಿಸಿದ್ದಾರೆ.

ರವೀಂದ್ರರ ಬದುಕು ಸಂಕೀರ್ಣವಾದದ್ದು; ಅಂತೆಯೇ ಅವರ ಸಾಹಿತ್ಯವೂ ಕೂಡ. ಠಾಕೂರರ ಬಗೆಗಿನ ಇತರ ಕನ್ನಡಪರಿಚಯಾತ್ಮಕ ಕೃತಿಗಳಲ್ಲಿ ಇಡೀ ರವೀಂದ್ರರ ಬದುಕು-ಬರೆಹ ಹಾಗೂ ಇನ್ನಿತರ ಕ್ಷೇತ್ರಗಳಲ್ಲಿನ ಅವರ ಸಾಧನೆಯ ಬಗ್ಗೆ ಸಂಕ್ಷಿಪ್ತವಾಗಿ ಬೆಳಕು ಚೆಲ್ಲುವ ಪ್ರಯತ್ನ ಮಾಡಿದವುಗಳಾಗಿವೆ. ಆದರೆ ಇಲ್ಲಿ ರವೀಂದ್ರರ ಬದುಕಿನ ಆಳವೂ-ವ್ಯಾಪಕವೂ ಆದ ಚಿತ್ರಣ ಕಂಡುಬರುತ್ತದೆ.

ರವೀಂದ್ರರ ಪೂರ್ವಿಕರು, ಕುಟುಂಬ, ಜನನ ಮತ್ತು ಬಾಲ್ಯ, ವಿದ್ಯಾಭ್ಯಾಸ, ಸಾಹಿತ್ಯಾಸಕ್ತಿಯ ಬೆಳವಣಿಗೆ, ಮದುವೆ ಮತ್ತು ದಾಂಪತ್ಯ, ಶಿಕ್ಷಣ, ಸಾವು-ನೋವು, ಆಧ್ಯಾತ್ಮಿಕ ಸಾಕ್ಷಾತ್ಕಾರ, ವಿಶ್ವಮಾನ್ಯತೆ, ಆಧ್ಯಾತ್ಮಿಕ ರಾಯಭಾರಿ, ಸಾಮಾಜಿಕ ಸೇವೆ, ಚಿತ್ರಕಲಾ ಪ್ರತಿಭೆ, ಕೊನೆಯ ದಿನಗಳು – ಎಂಬಂಥ ವಿಷಯಗಳಿಗನುಗುಣವಾಗಿ ಅಧ್ಯಾಯಗಳನ್ನು ಮಾಡಿಕೊಂಡು ವಿವಿಧ

ಆಕರ-ಪರಿಕರಗಳನ್ನು ಬಳಸಿಕೊಂಡು ವ್ಯಾಪಕದ ವಿಶ್ಲೇಷಣೆಯೊಂದಿಗೆ ರವೀಂದ್ರರ ಜೀವನವನ್ನು ಚಿತ್ರಿಸಲಾಗಿದೆ. ಆದರೆ ಕೆಲವು-ಉದ್ಧರಣೆಗಳಿಗೆ ಅಡಿಟಿಪ್ಪಣಿ ಸೂಚಿಸಿರುವುದಿಲ್ಲ.

ಪ್ರೊ. ಎಲ್.ಎಸ್. ಶೇಷಗಿರಿರಾವ್ ಅವರ ಪ್ರಧಾನ ಸಂಪಾದಕತ್ವದಲ್ಲಿ ರಾಜೇಶ್ವರಿ ಕೃಷ್ಣ ಅವರು ಶೇಷಗಿರಿರಾವ್ ಅವರ ರವೀದ್ರ ಕಾವ್ಯದ ಕೆಲವು ಉದ್ಧರಣೆಗಳೊಂದಿಗೆ "ರವೀಂದ್ರನಾಥ ಠಾಕೂರ್" ಹೆಸರಿನಲ್ಲಿ ರವೀಂದ್ರರ ಮನೆತನ, ಬಾಲ್ಯ, ಮಾನವತಾವಾದ, ವಿದೇಶಪ್ರವಾಸ ಮುಂತಾದ ವಿಷಯಗಳ ಬಗೆಗೆ ರೇಖಾಚಿತ್ರಗಳ ಸಹಿತ ಪ್ರಾಥಮಿಕ ಮಾಹಿತಿಗಳನ್ನು ಕೊಡುತ್ತಾರೆ.

**ಬಾಳನೆನಹು**

ಇದು ರವೀಂದ್ರರ ಆತ್ಮಚರಿತ್ರೆ. 'ಜೀವನಸ್ಮೃತಿ' (Reminiscience)ಯನ್ನು ಸ್ವಾಮಿ ಶಂಕರಾನಂದ ಸರಸ್ವತಿ ಅವರು ಈ ಹೆಸರಲ್ಲಿ ಕನ್ನಡಾನುವಾದಿಸಿದ್ದಾರೆ. ಇದು ಮಹಾಕವಿ-ಸಾಹಿತಿಯೊಬ್ಬನ ಆತ್ಮಚರಿತ್ರೆಯಾದುದರಿಂದ ಇತಿಹಾಸದಂತೆ ಘಟನೆಗಳ ವಿವರವಾಗದೆ, ಠಾಕೂರರ ಅಂತರಂಗದ ಸೂಕ್ಷ್ಮಸಂವೇದನೆಯ ಮತ್ತು ಬದುಕಿನ ಚಿತ್ತಾರವನ್ನು ಕಲಾತ್ಮಕವಾಗಿ ಕಾವ್ಯಾತ್ಮಕ ಸೊಗಸಿನಲ್ಲಿ ಕಟ್ಟಿದ ಶೋಭಾಯಮಾನವಾದ ಆತ್ಮದರ್ಪಣವಾಗಿದೆ. ಠಾಕೂರರು ತಮ್ಮ ಜೀವನ ಚರಿತ್ರೆಯ ರಚನೆಯನ್ನು ಅನೌಪಚಾರಿಕವಾಗಿ ಸ್ಮತಿಗಿಳಿದು ನಾಲ್ಕೈದು ಘಟನೆಗಳನ್ನು ವಿವರವಾಗಿ ಕೃತಕವಾಗಿ ಬರೆಯಲಾರಂಭಿಸಲು, ಆ ನಂತರದ ಬೆಳವಣಿಗೆಯನ್ನು ರವೀಂದ್ರರ ಸೃಜನಶೀಲ ಪ್ರತಿಭೆಯೇ ಅವರ ಆತ್ಮಚರಿತ್ರೆಯ ವಿನ್ಯಾಸವನ್ನು ರೂಪಿಸಿದಂತೆ; "...ಕದತೆರೆದು ನೋಡಲು ಬಾಳ ನೆನಹು ಬಾಳಿನ ಯಾತ್ರೆಯಲ್ಲ – ಅದೊಂದು ಅದೃಶ್ಯ ಚಿತ್ರಗಾರನ ಸ್ವಹಸ್ತ ಚಿತ್ರಿಸಿದ ಚಿತ್ರ ಎಂಬುದು ಅರಿವಾಯಿತು" ಎಂಬ ಠಾಕೂರರ ಮಾತಿನಲ್ಲೇ ಈ ಕೃತಿಯ ಮತ್ತು ರಚನೆಯ ವಿಶೇಷತೆಯನ್ನು ಕಾಣಬಹುದು. ರವೀಂದ್ರರ ಅರಳು ಮರಳಿನ ಮಸುಬಾಗುತ್ತಿರುವ ಸಂಜೆಗಣ್ಣಿನಲ್ಲಿ ನೆನಪಿನ ಸೂರ್ಯೋದಯವಾಗಿ, ಆತ್ಮಸ್ಫೂರ್ತಿಗೊಂಡು, ಬಾಳಿನ ಚಿತ್ತಾರವನ್ನು ದಟ್ಟವಾಗಿ ಚಿತ್ರಿಸಲಾಗಿದೆ. ಇಲ್ಲಿ ರವೀಂದ್ರರ ಸ್ವಾನುಭವದಲ್ಲಿ ಸಮಗ್ರವಾದ ಮತ್ತು ಸೂಕ್ಷ್ಮವಾದ ಅವರ ಬದುಕನ್ನು ಕಂಡುಕೊಳ್ಳಲು ಸಾಧ್ಯವಾಗಿದೆ. ರವೀಂದ್ರರ ಬಾಲ್ಯ, ವಿದ್ಯೆ, ಸೇವಕರು, ಶಾಲೆ, ಕಾವ್ಯರಚನೆ, ಒದೆ, ಮನೆತನ, ಪಾಶ್ಚಾತ್ಯ ಪ್ರಭಾವ, ಕಲೆ-ಸಾಹಿತ್ಯ ಬೆಳವಣಿಗೆ, ಕರ್ನಾಟಕದ ಕಾರವಾರದ ಸ್ಫೂರ್ತಿ ಮುಂತಾದ ಹಲವಾರು ಪ್ರಮುಖ ವಿಷಯಗಳ ಬಗೆಗೆ ಇಲ್ಲಿ ಬೆಳಕು ಚೆಲ್ಲಲಾಗಿದೆ.

**ಬಾಲ ಸಾಹಿತ್ಯ**

ಎಸ್.ಜಿ. ಕುಲಕರ್ಣಿಯವರು ಬಂಗಾಳಿಯಿಂದ ಅನುವಾದಿಸಿರುವ ಈ ಕೃತಿ, ರವೀಂದ್ರರು ಚಿಕ್ಕಂದಿನಲ್ಲಿ ರಚಿಸಿದ ಕವನಗಳು, ಪುಟ್ಟ ಕತೆಗಳನ್ನು ಪರಿಚಯಿಸುತ್ತದೆ; 'ನಮ್ಮ ಕವಿ' ಹೆಸರಿನಲ್ಲಿ ಕೃತಿಯ ಆರಂಭದಲ್ಲಿ ರವೀಂದ್ರರ ಬಗೆಗೆ ಸಂಕ್ಷಿಪ್ತ ಪರಿಚಯ ನೀಡಲಾಗಿದೆ. "ಲಕ್ಷ್ಮಿಯ ಪರೀಕ್ಷೆ" ಎಂಬ ರವೀಂದ್ರರ ಆರಂಭಿಕ ಪುಟ್ಟ ಪದ್ಯ ನಾಟಕವೂ ಸೇರಿದೆ. ರವೀಂದ್ರರ ಸಾಹಿತ್ಯ ಸೃಜನೆಯ ಆರಂಭಿಕ ಸ್ವರೂಪವನ್ನು ಈ ಕೃತಿ ಕಟ್ಟಿಕೊಡುತ್ತದೆ.

### ವಿಶ್ವಕವಿ ರವೀಂದ್ರನಾಥ ಠಾಕೂರ್

ಈ ಕೃತಿಯ ಲೇಖಕರಾದ ಒಡೆಯರ್ ಡಿ.ಹೆಗ್ಗಡೆ ಅವರು ಬೆಂಗಳೂರು ವಿಶ್ವವಿದ್ಯಾನಿಲಯದ 'ಮನೆಗೊಂದು ಮಣಿದೀಪ ಮಾಲೆ'ಗೆ ರವೀಂದ್ರನಾಥ ಠಾಕೂರರ ವೈಚಾರಿಕ ಚಿಂತನೆ ಮತ್ತು ಕಾರ್ಯ ಚಟುವಟಿಕೆಗಳ ಪರಿಚಯದೊಂದಿಗೆ ಅವರ ದಾರ್ಶನಿಕತೆ, ಸಾಂಸ್ಕೃತಿಕ ಚಿಂತನೆ, ಸಂಗೀತ, ಸೌಂದರ್ಯೋಪಾಸನೆ, ಸಾಮಾಜಿಕ–ರಾಜಕೀಯ, ಸ್ವಾತಂತ್ರ್ಯ–ರಾಜಕೀಯ, ಸ್ವಾತಂತ್ರ್ಯ–ರಾಷ್ಟ್ರೀಯತೆ, ಶೈಕ್ಷಣಿಕ ವಿಚಾರ, ಗ್ರಾಮೀಣಾಭಿವೃದ್ಧಿ ಮುಂತಾದ ವಿಚಾರಗಳ ಬಗೆಗೆ ಸುಮಾರು ಹದಿನೈದು ವರ್ಷಗಳಲ್ಲಿ ಈ ರೀತಿ ತಾವು ರವೀಂದ್ರರ ವಿಚಾರಗಳ ಬಗೆಗೆ ಚಿಂತನೆ ನಡೆಸಿದ ಪ್ರಬಂಧಗಳ ಸಂಕಲನ ಇದು; ಮನೆ ಮನೆಯ ಪ್ರಜ್ಞಾವಂತರಿಗೆ ತಲುಪಬೇಕಾದ ಪ್ರೌಢ ಕೃತಿಯಾಗಿದೆ. ಇನ್ನಿತರ ಭಾರತೀಯ ಮಹನೀಯರೊಂದಿಗೆ ತೌಲನಿಕ ವಿಶ್ಲೇಷಣೆಯನ್ನು ನಡೆಸಿದ್ದಾರೆ.

### ನಿಬಂಧಮಾಲಾ (ಪ್ರಬಂಧಗಳು)

### ಇತರ ಕೃತಿಗಳು

ಈ ಸಂಶೋಧನೆ ಮುಖ್ಯವಾಗಿ 'ಅನುವಾದ' ಪ್ರಕಾರವನ್ನು ಆಧರಿಸಿರುವುದರಿಂದ ಸಾಂದರ್ಭಿಕವಾಗಿ ಹಾಗೂ 'ಅನುವಾದಗಳು' 'ಆದರ್ಶ ಭಾಷಾಂತರಕಾರರು' ಕುರಿತ ಏಳನೆಯ ಅಧ್ಯಾಯದಲ್ಲಿ ಚಿಂತನೆ ನಡೆಸುವಾಗ ಪೂರಕವಾಗಿ 'ಅನುವಾದ' ಪರಿಕಲ್ಪನೆಯ ಅರ್ಥ, ಮೂಲಭೂತ ತತ್ವ, ಪ್ರಾಯೋಗಿಕತೆ, ಪ್ರಸ್ತುತತೆ ಕುರಿತಾಗಿ ಕನ್ನಡದಲ್ಲಿ ರಚನೆಯಾಗಿರುವ 'ಭಾಷಾಂತರ' ಕುರಿತ ಸೈದ್ಧಾಂತಿಕ ಕೃತಿಗಳನ್ನು ಪೂರಕ ಪರಿಕರಗಳಾಗಿ ಬಳಸಿಕೊಂಡು 'ಭಾಷಾಂತರ ಕುರಿತಾಗಿ ಅದರ ಪರಿಭಾಷೆ, ಅಗತ್ಯ, ಪ್ರಯೋಜನ, ಆದರ್ಶ ಭಾಷಾಂತರ ಪ್ರಕಾರಗಳು, ಸಮಸ್ಯೆಗಳು ಇತ್ಯಾದಿಯಾಗಿ ಮೂಲಭೂತ ತಾತ್ವಿಕ ವಿಚಾರಗಳನ್ನು ಕುರಿತು ಅಧಿಕಾರಯುತವಾಗಿ ರಚನೆಯಾದ ಮೊದಲ ಕೃತಿ. ಪ್ರೊ. ಲಕ್ಷ್ಮೀನಾರಾಯಣ ಅರೋರಾ ಅವರ "ಭಾಷಾಂತರ ಸೌರಭ" ತೌಲನಿಕ ಪ್ರಾಯೋಗಿಕ ಭಾಷಾಂತರ ದೃಷ್ಟಿಯಿಂದ ಮುಖ್ಯವಾಗಿದೆ. "ಭಾಷಾಂತರದ ಸಾಂಸ್ಕೃತಿಕ ನೆಲೆಗಳು" ಎಂಬ ಡಾ. ಕರೀಗೌಡ ಬೀಚನಹಳ್ಳಿಯವರು ಸಂಪಾದಿಸಿದ ಕೃತಿ; ಕನ್ನಡ ಭಾಷಾಂತರ ಭಾಷೆಯಾಗಿ, ರಾಜಕೀಯ–ಸಾಂಸ್ಕೃತಿಕ ಒತ್ತಡದ ನಡುವೆಯೂ ಒಂದು ಕಲ್ಯಾಣ ಘಟನೆಯಾದಂಥ ಪ್ರಮುಖ ವಿಷಯಗಳ ಬಗೆಗೆ ಪ್ರಬುದ್ಧ ಲೇಖನಗಳನ್ನು ಒಳಗೊಂಡಿದೆ.

### ೧೦.೪. ಸ್ಮೃತಿಚಿತ್ರಗಳು ಮತ್ತು ಆತ್ಮಕಥೆಗಳು

ನಾರಾಯಣ ಸಂಗಮ, ಅನಕೃ, ಮಾಸ್ತಿ, ಮುಂತಾದವರು ತಾವು ಶಾಂತಿನಿಕೇತನಕ್ಕೆ ಹೋದಾಗ ಅದರ ಸ್ವರೂಪವು ಹಾಗೂ ಅಲ್ಲಿಯ ಶಿಕ್ಷಣ ಕ್ರಮ, ಅಲ್ಲಿ ಗುರುದೇವರೊಡನೆ ಅವರಿಗೆ ಆದ ಭೇಟಿ, ಗುರುದೇವರ ವ್ಯಕ್ತಿತ್ವ, ಇತ್ಯಾದಿಗಳನ್ನು ಕುರಿತು ಸಾಕಷ್ಟು ದೀರ್ಘವಾಗಿ ತಮ್ಮ ಆತ್ಮಕಥೆಗಳಲ್ಲಿ ಅಥವಾ ಸ್ಮೃತಿಚಿತ್ರಗಳಲ್ಲಿ ದಾಖಲಿಸಿದ್ದಾರೆ. ಹಾಗೆಯೇ, ೧೯೧೮ ಮತ್ತು ೧೯೨೦ರಲ್ಲಿ ಠಾಕೂರರು ಬೆಂಗಳೂರು ಮತ್ತು ಮೈಸೂರಿಗೆ ಭೇಟಿಯಿತ್ತುದು, ಆಗ ನಡೆದ

ಕಾರ್ಯಕ್ರಮಗಳು, ಠಾಕೂರರು ಮಾಡಿದ ಭಾಷಣಗಳು, ಇತ್ಯಾದಿಗಳನ್ನೂ ಅನೇಕರು ದಾಖಲಿಸಿದ್ದಾರೆ. ಇವುಗಳಲ್ಲಿ ಪ್ರಾತಿನಿಧಿಕವಾಗಿ ವಿ.ಸೀ. ಅವರ ಸ್ಮೃತಿಚಿತ್ರ ಸಂಪುಟವನ್ನು ಗಮನಿಸಬಹುದು.

೧೯೧೮ರಲ್ಲಿ ವಿ.ಸೀ. ಮಹಾರಾಜ ಕಾಲೇಜಿನ ವಿದ್ಯಾರ್ಥಿಯಾಗಿದ್ದರು. ಠಾಕೂರರು ಅದೇ ವರ್ಷ ಬೆಂಗಳೂರಿಗೆ ಬರುವ ಸುದ್ದಿ ತಿಳಿದು, ಅವರನ್ನು ನೋಡಲು, ಉತ್ಸಾಹದಿಂದ ವಿ.ಸೀ. ಮತ್ತು ಅವರ ಗೆಳೆಯರು ರೈಲಿನಲ್ಲಿ ಬೆಂಗಳೂರಿಗೆ ಬಂದು ಅಲ್ಲಿನ ಕಾರ್ಯಕ್ರಮಗಳಲ್ಲಿ ಭಾಗವಹಿಸಿ, ತುಂಬಾ ಸಂತೋಷಪಟ್ಟರು. ಆದರೆ ಅವರಿಗಿದ್ದ ಖೇದವೆಂದರೆ, ಅಷ್ಟು ದೊಡ್ಡ ಕವಿ ಬೆಂಗಳೂರಿಗೆ ಬಂದಾಗ ಧರ್ಮಾಂಬುಧಿ ಕೆರೆ ಇದ್ದ ಹಾಗೆಯೇ ಇದೆ. ಅರಳೆಪೇಟೆ, ರಾಣಾಸಿಂಗನ ಪೇಟೆ, ಚಾಮರಾಜ ಪೇಟೆ ಯಾವ ಸಂಭ್ರಮವನ್ನೂ ತೋರಿಸದೆ ಎಂದಿನಂತೆಯೇ ಇದ್ದುವು ಎಂಬುದು. ಅನಂತರ, ೧೯೨೦ರಲ್ಲಿ ಠಾಕೂರರು ಮೈಸೂರಿಗೇ ಬಂದು ಸಮ್ಮರ್ ಪ್ಯಾಲೇಸ್‌ನಲ್ಲಿ ಇಳಿದುಕೊಂಡಿದ್ದರು. ಆಗ, ಅವರೊಡನೆ ಹತ್ತು ನಿಮಿಷಗಳ ಕಾಲದ ಭೇಟಿಯ ಅನುಭವವನ್ನು ವಿ.ಸೀ ಹೀಗೆ ವರ್ಣಿಸುತ್ತಾರೆ:

> "ಮೈಸೂರು ಆಗ ಇನ್ನೂ ಮಲ್ಲಿಗೆ ಹೂವಿಗೂ ಚಿಗುರು ವೀಳೆಯದೆಲೆಗೂ ಈರನಗೆರೆಯ ಬದನೆಕಾಯಿಗೂ ಉತ್ತಮ ಊದುಕಡ್ಡಿಗೂ ಖ್ಯಾತವಾದ ಪಟ್ಟಣ. ಅಲ್ಲಿ ದೊರೆಯುತ್ತಿದ್ದ ಪನ್ನೀರು, ಅತ್ತರು, ನಿಜವಾದ ಶ್ರೀಗಂಧ, ಹಸಿ ಗಂಧ ಸೌಗಂಧವು. ಯುವರಾಜರ ಅರಮನೆಗೆ ಸೇರಿದ ಒಬ್ಬ ಯವಕ ನಮಗೆ ಪರಿಚಯಸ್ಥನಾದುದರಿಂದ ಖಾಸಾ ಹಾರ ಮಾಡುವ ಒಬ್ಬರಿಗೆ ಹೇಳಿ, ನಾಲ್ಕೂವರೆ ಅಡಿ ನಿಲವುಳ್ಳ, ನಾಲ್ಕೈದು ಎಳೆ ಕಟ್ಟಿ ತೋರವಾದ ಆದರೂ ಹಗುರವಾದ, ಹೊಸ ಮಲ್ಲಿಗೆ ಮೊಗ್ಗಿನ ಹಾರವೊಂದನ್ನು ಮಾಡಿಸಿದ್ದೆವು. ಅದಕ್ಕೆ ಮಾರು ಸಣ್ಣ ಕುಚ್ಚು, ಕೊರಲ ಹಿಂದೆ, ತೋಳಿಗೆ ತೂಗಲು; ಕೆಳಗೆ ಪದಕದಂತೆ ಇನ್ನೊಂದ ದೊಡ್ಡ ಕುಚ್ಚು, ಕೆಂಪು ಗುಲಾಬಿಯ ಐದೈದು ಮೊಗ್ಗುಗಳಿಂದ ಮಾಡಿಸಿತ್ತು, ನಡುವೆ ಅಲ್ಲಲ್ಲಿ ಕೆಂಡಸಂಪಿಗೆ, ಮರುಗ, ಪಚ್ಚೆಯ ತೆನೆ, ಕಸ್ತೂರಿ ಜಾಜಿಯ ಸೇರುವೆ, ನೆಯಿಗೆ ಇತ್ತು. ಅದಕ್ಕೆ ಪನ್ನೀರು ಚಿಮುಕಿಸಿ ತೆಗೆದುಕೊಂಡು ಹೋಗಿದ್ದೆವು. ಒಂದು ಸಣ್ಣ ಬೆಳ್ಳಿಯ ಡಬ್ಬಿಯಲ್ಲಿ ಅತ್ತರಿತ್ತು. ಮಾರು ತೊಲೆ ಅಂಬರ್ ಊದುಕಡ್ಡಿಯನ್ನು ತೆಗೆದುಕೊಂಡು ಹೋಗಿದ್ದವು. .... ಆ ಹೂಮಾಲೆಯನ್ನು ನಾವು ಕೊರಳಿಗೆ ಅರ್ಪಿಸಿದಾಗ, ತುರಾಯನ್ನು ಕೈಗೆ ಕೊಟ್ಟಾಗ, ಅವರಿಗೆ ನಿಜವಾಗಿ ಸಂತೋಷವಾಗಿರಬೇಕು. 'Beautiful Flowers, marvellous flowers; some of the finest I have worn;
> You have brought me Joy, Joy!' ಎಂದರು. ಹತ್ತು ಸಲ ಮೂಸಿ ನೋಡಿದರು. ಎರಡು ಸಲ ಕಣ್ಣಿಗೊತ್ತಿಕೊಂಡರು. ನಮ್ಮಲ್ಲಿ ಒಬ್ಬೊಬ್ಬರನ್ನೂ ಅವರ ಭುಜದ ಎತ್ತರಕ್ಕೆ ಹೋಗುವವರು ಯಾರೂ ಇರಲಿಲ್ಲ... ಅಪ್ಪಿಕೊಂಡರು. ಹತ್ತು ನಿಮಿಷಗಳ ಸಂದರ್ಶನ 45 ನಿಮಿಷಗಳಿಗೆ ಬೆಳೆಯಿತು..."
> (ಸಂಚಯ, ಕನ್ನಡದ ಕಣ್ಣಲ್ಲಿ ಠಾಕೂರ್ 150, ಪು. 55)

ಹೀಗೆಯೇ, ವಿವರವಾಗಿ, ಭಾವಪೂರ್ಣವಾಗಿ ಆ ಎರಡು ಘಟನೆಗಳನ್ನು (ಠಾಕೂರರು ಬೆಂಗಳೂರು-ಮೈಸೂರುಗಳಿಗೆ ಭೇಟಿಯಿತ್ತುದನ್ನು) ವಿ.ಸೀ. ಸುಮಾರು ಆರು ಪುಟಗಳಲ್ಲಿ ದೀರ್ಘವಾಗಿ ವರ್ಣಿಸುತ್ತಾರೆ.

ಇಲ್ಲಿಯವರೆಗಿನ ಚರ್ಚೆಯನ್ನು ಆಧರಿಸಿ, ಈ ಲೇಖನ ಮುಖ್ಯಾಂಶಗಳನ್ನು ಹೀಗೆ ಗುರುತಿಸಬಹುದು:

೧) ಸ್ಥೂಲವಾಗಿ, 20ನೆಯ ಶತಮಾನದ ಆದಿ ಭಾಗದಲ್ಲಿ (ನವೋದಯ ಕಾಲಘಟ್ಟದಲ್ಲಿ) ತುಂಬಾ ಗಾಢವಾಗಿದ್ದ ಟಾಗೋರರ ಪ್ರಭಾವವು ನವ್ಯ ಯುಗದಲ್ಲಿ ಮತ್ತು ಅನಂತರ ಕ್ಷೀಣಿಸಿತು; ಆದರೆ, ಆ ಕಾಲಘಟ್ಟಗಳಲ್ಲಿಯೂ ಅಲ್ಪ ಸ್ವಲ್ಪ ಪ್ರಭಾವವಿದ್ದೇ ಇದ್ದಿತು (ಗೀತಾಂಜಲಿಯ ಐದನೆಯ ಅನುವಾದ ಇತ್ತೀಚೆಗೆ, 2008ರಲ್ಲಿ, ಪ್ರಕಟವಾಯಿತು).

೨) ನವೋದಯದ ಕಾಲದಲ್ಲಿ ಕನ್ನಡ ಸಾಹಿತಿಗಳು ಗಾಢವಾದ ಪ್ರೀತ್ಯಭಿಮಾನಗಳಿಂದ, ಟಾಗೋರರನ್ನು ಪೂರ್ವ-ಪಶ್ಚಿಮಗಳನ್ನು ಬೆಸೆಯುವ ಶಾಂತಿದೂತನಂತೆ ಕಂಡರು; ಬಿ.ಎಂ.ಶ್ರೀ. ಅವರು ಮಾಸ್ತಿಯವರ ಕೃತಿಯ ಮುನ್ನುಡಿಯಲ್ಲಿ ವ್ಯಕ್ತಪಡಿಸಿದ ಭಾವನೆಗಳನ್ನು ಆ ಕಾಲದ ಸರಿ ಸುಮಾರು ಎಲ್ಲಾ ಸಾಹಿತಿಗಳೂ ಮಾನ್ಯ ಮಾಡುತ್ತಿದ್ದರು ಎಂದು ಹೇಳಬಹುದು:

> "ಶ್ರೀ ಠಾಕೂರರು ಭರತಭೂಮಿಗೇ ಅಲ್ಲ, ಇಡಿಯ ವಿಶ್ವಕ್ಕೆ ಅಲಂಕಾರ ಪ್ರಾಯರು, ಆದರ್ಶ ಪುರುಷರು, ಮೂಡಣ ಮತ್ತು ಪಡುವಣ ಧರ್ಮ ಸಂಸ್ಕೃತಿ ನಾಗರಿಕತೆಗಳ ಸಾವನ್ನೂ ಆಳವನ್ನೂ ಚೆನ್ನಾಗಿ ವಿಮರ್ಶಿಸಿ, ಸಮತಾ ಬುದ್ಧಿಯಿಂದ ಎರಡರ ಗುಣಗಳನ್ನೂ ಐಕ್ಯ ಮಾಡಿ ವಿಶ್ವಜನರನ್ನು ಮುಂದುವರಿಸಬೇಕೆಂಬುದೇ ಇವರು ಕೈಕೊಂಡ ದೀಕ್ಷೆ. ... ಇವರ ಅತಿಪ್ರಿಯವಾದ ಕಾರ್ಯವೆಂದರೆ ಇವರು ಶಾಂತಿನಿಕೇತನದಲ್ಲಿ ಸ್ಥಾಪಿಸಿರುವ 'ವಿಶ್ವಭಾರತಿ' ಎಂಬ ವಿಶ್ವವಿದ್ಯಾಲಯ. ವಿಶ್ವ, ಭಾರತಿ, ಶಾಂತಿ... ಈ ಮೂರು ಮಾತುಗಳು ಇವರ ಬಾಳಿಕೆಯ ರಹಸ್ಯ. ಶಾಂತಿಯಲ್ಲಿ, ಸರಸ್ವತಿಯಿಂದ ಜ್ಞಾನವನ್ನು ಪಡೆದು ವಿದ್ಯಬುದ್ಧಿಗಳನ್ನು ಶುದ್ಧಮಾಡಿ, ಸಮಾಜಗಳನ್ನೆತ್ತಿ, ಲೋಕವನ್ನೆಲ್ಲಾ ಅಣ್ಣ-ತಮ್ಮಂದಿರಂತೆ ಒಂದುಗೂಡಿಸಿ, ಧರ್ಮಜೀವನದಲ್ಲಿ, ಕಲೋಪಾಸನೆಯಲ್ಲಿ, ಸಾತ್ವಿಕ ಸ್ಪರ್ಧೆಯಲ್ಲಿ, ಪ್ರತಿಯೊಬ್ಬ ಮಾನವನೂ ತನ್ನ ಆತ್ಮವನ್ನು ಪರಿಪೂರ್ಣಗೊಳಿಸಿ ಆನಂದ ಪಡಬೇಕೆಂಬುದೇ ಇವರ ಬೋಧನೆ... ನಡೆದು ತೋರಿಸಿಕೊಟ್ಟ ಸಂದೇಶ" (ಮಾಸ್ತಿಯವರ ಕೃತಿಗೆ ಬರೆದ ಬಿ.ಎಂ.ಶ್ರೀ ಅವರ ಮುನ್ನುಡಿಯಿಂದ; 1935).

## ಬಂಗಾಳದ ಧಾರ್ಮಿಕ ಸಂತರ ಪ್ರಭಾವ ಕನ್ನಡ ಪರಿಸರದ ಮೇಲೆ

**ರಾಜಾರಾಂ ಮೋಹನರಾಯ್ (೧೭೭೪- ೧೮೩೩)**

'ಭಾರತದ ಪುನರುಜ್ಜೀವನ ಚಳುವಳಿಯ ಪಿತಾಮಹ' ಎಂದೇ ಪ್ರಸಿದ್ಧರಾಗಿರುವ ರಾಜಾರಾಂ ಮೋಹನರಾಯ್ 1774ರ ಮೇ 22ರಂದು ಬಂಗಾಳದ ಬರ್ದ್ವಾನ್ ಜಿಲ್ಲೆಯ ರಾಧಾನಗರದ ಸಂಪ್ರದಾಯವಾದಿ ಬ್ರಾಹ್ಮಣ ಕುಟುಂಬದಲ್ಲಿ ಜನಿಸಿದರು. ಬಾಲ್ಯದಲ್ಲೇ ಮಹಾಮೇಧಾವಿಯಾಗಿದ್ದ ರಾಜಾರಾಮ್ ಮೋಹನರಾಯ್ ಎಲ್ಲಾ ಭಾಷೆಗಳ ಧಾರ್ಮಿಕ ಗ್ರಂಥಗಳನ್ನು ಅಧ್ಯಯನ ಮಾಡಿ 19ನೇ ಶತಮಾನದ ಶ್ರೇಷ್ಠ ಮಾನವತಾವಾದಿ ಚಿಂತಕರಾಗಿ ರೂಪುಗೊಂಡರು.

**ಬ್ರಹ್ಮಸಮಾಜದ ಸ್ಥಾಪನೆ (೧೮೨೮)**

೧೯ನೇ ಶತಮಾನದಲ್ಲಿ ಜನ್ಮತಾಳಿದ ಪ್ರಥಮ ಸಾಮಾಜಿಕ ಮತ್ತು ಧಾರ್ಮಿಕ ಸುಧಾರಣಾ ಸಂಸ್ಥೆಯೆಂದರೆ ಬ್ರಹ್ಮಸಮಾಜ. ವೇದಗಳು ಮತ್ತು ಉಪನಿಷತ್ತುಗಳ ನೈತಿಕ ತಳಹದಿಯ ಮೇಲೆ ರಾಜಾರಾಮ್ ಮೋಹನರಾಯರು ಬ್ರಹ್ಮಸಮಾಜವನ್ನು ಸ್ಥಾಪಿಸಿದರು. ರವೀಂದ್ರನಾಥ ಠಾಕೂರರ ತಂದೆ ದೇವೇಂದ್ರನಾಥ ಠಾಕೂರರು ಮತ್ತು ಕೇಶವಚಂದ್ರ ಸೇನರು ಬ್ರಹ್ಮ ಸಮಾಜದ ಸದಸ್ಯರಾಗಿದ್ದರು. ಏಕೇಶ್ವರ ತತ್ವದಲ್ಲಿ ನಂಬಿಕೆ ಇರಿಸಿದ್ದ ಈ ತರುಣ ಸದಸ್ಯರು ಸತಿಪದ್ಧತಿ, ಬಾಲ್ಯವಿವಾಹ ನಿಷೇಧ, ವಿಧವಾವಿವಾಹ, ಇಂಗ್ಲಿಷ್ ಶಿಕ್ಷಣದ ಪ್ರಸಾರ ಕೈಗೊಂಡು ಹೊಸ ಕ್ರಾಂತಿಯನ್ನು ಉಂಟುಮಾಡಿದರು. ಭಾರತೀಯ ಕಾದಂಬರಿ ಸಂದರ್ಭದಲ್ಲಿ ವಿಶಿಷ್ಟ ಕಾದಂಬರಿಯಾಗಿರುವ 'ಗೋರಾ' ಕಾದಂಬರಿಯಲ್ಲಿ ಹಿಂದುತ್ವ ಮತ್ತು ಬ್ರಹ್ಮಸಮಾಜದ ತಾತ್ವಿಕ ಸಂಘರ್ಷವನ್ನು ಗುರುತಿಸಬಹುದಾಗಿದೆ.

**ಕರ್ನಾಟಕ ಹಾಗೂ ಬಂಗಾಳ ನಡುವಣ ಧಾರ್ಮಿಕ ಸಂಬಂಧ**

ಆಂಗ್ಲರ ಆಗಮನದಿಂದಾಗಿ ಬಂಗಾಳದಲ್ಲಿ ಜರುಗಿದ ಪುನರುಜ್ಜೀವನದ ಪರಿಣಾಮವಾಗಿ ಧಾರ್ಮಿಕ ಕ್ಷೇತ್ರದಲಿ ಆಂದೋಲನ ಉಂಟಾಯಿತು. ಭಾರತದ ಪ್ರತಿನಿಧಿಯಂತಿದ್ದ ಬಂಗಾಳದಲ್ಲಿ ರಾಷ್ಟ್ರನಾಯಕರು ಧಾರ್ಮಿಕ, ಸಾಮಾಜಿಕ ಕ್ಷೇತ್ರದಲ್ಲಿ ಸುಧಾರಣೆಯನ್ನು ಜಾರಿಗೆ ತಂದರು. ಆಂಗ್ಲರ ಶಿಕ್ಷಣನೀತಿಯಿಂದಾಗಿ ಆಗಷ್ಟೇ ವಿದ್ಯಾವಂತರಾದ ವರ್ಗವೊಂದು ಬಂಗಾಳದ ರಾಷ್ಟ್ರ ನಾಯಕರ ವಿಚಾರಗಳೊಂದಿಗೆ ಸಂಪರ್ಕವೇರ್ಪಡಿಸಿಕೊಂಡು ಅನುಸಂಧಾನ ನಡೆಸುತ್ತಾ ಬಂದರು. ಭಾರತದ ಹಲವು ಪ್ರಾಂತ್ಯಗಳ (ಸಮಾಜಗಳ) ಮೇಲೆ ಬಂಗಾಳದ ಧಾರ್ಮಿಕ ಸುಧಾರಣೆಗಳು ಪ್ರಭಾವ ಬೀರಿದರೂ, ಕರ್ನಾಟಕದ ಮೇಲೆ ಗಣನೀಯ ಪ್ರಭಾವವನ್ನು ಉಂಟುಮಾಡಿದೆ.

**ಶ್ರೀ ರಾಮಕೃಷ್ಣ ಪರಮಹಂಸ (೧೮೩೬ – ೧೮೮೬)**

ರಾಮಕೃಷ್ಣ ಪರಮಹಂಸರು ಧ್ಯಾನ ಮತ್ತು ಭಕ್ತಿ ಮಾರ್ಗಗಳ ಮೂಲಕ ಧಾರ್ಮಿಕ ಮುಕ್ತಿಯನ್ನು ಬಯಸಿದ ಸಂತರಾಗಿದ್ದಾರೆ. ಎಲ್ಲಾ ಧರ್ಮದವರೊಂದಿಗೆ ಉದಾರ ಮನೋಧರ್ಮವನ್ನು ಬೋಧಿಸಿದ, ಮನುಷ್ಯನು ದೇವರ ಪ್ರತಿರೂಪ ಎಂದು ಹೇಳಿದ ರಾಮಕೃಷ್ಣ ಪರಮಹಂಸರ ಉನ್ನತ ಧ್ಯೇಯಗಳ ಆಲೋಚನೆಗಳು, ಸರಳವಾಗಿದ್ದುದರಿಂದ ಎಲ್ಲರನ್ನು ಬಹುಬೇಗ ತಲುಪಿತು. ಬಂಗಾಳದ ಈ ಧಾರ್ಮಿಕ ಮಹಾಪುರುಷರ ವಿಚಾರಗಳನ್ನು ಜನಸಾಮಾನ್ಯರಿಗೆ ತಲುಪಿಸಲು ಕರ್ನಾಟಕದ ಹಲವು ಕಡೆ ಆಶ್ರಮಗಳು ಸ್ಥಾಪನೆಯಾಗಿವೆ. ಮೈಸೂರು, ಬೆಂಗಳೂರಿನ ಹಲಸೂರು ಹಾಗು ಬಸವನಗುಡಿಯಲ್ಲಿರುವ ರಾಮಕೃಷ್ಣಾಶ್ರಮ, ಪೊನ್ನಂಪೇಟೆ, ಬೆಳಗಾವಿ, ಆನೇಕಲ್ ಬಳಿಯ ಶಿವನಹಳ್ಳಿ ಹಾಗೂ ಮಂಗಳೂರಿನ ಕಡೆ ರಾಮಕೃಷ್ಣ ಆಶ್ರಮಗಳು ಸ್ಥಾಪನೆಯಾಗಿವೆ.

**ಶ್ರೀ ಸ್ವಾಮಿ ವಿವೇಕಾನಂದ (೧೮೬೩ – ೧೯೦೨)**

ರಾಮಕೃಷ್ಣ ಪರಮಹಂಸರ ಅಂತರಂಗದ ಶಿಷ್ಯರಾಗಿದ್ದ ವಿವೇಕಾನಂದರು ಧಾರ್ಮಿಕ ಸುಧಾರಣಾ ಕ್ಷೇತ್ರದಲ್ಲಿ ಹೊಸ ಕ್ರಾಂತಿಯನ್ನು ಉಂಟುಮಾಡಿದವರು. ಜಾತಿಪದ್ಧತಿ ಮತ್ತು ಮೂಢನಂಬಿಕೆಗಳಿಗೆ ವರ್ತಮಾನದಲ್ಲಿ ಭಾರತೀಯರು ನೀಡುತ್ತಿರುವ ಪ್ರಾಶಸ್ತ್ಯವನ್ನು ಖಂಡಿಸಿದರಲ್ಲದೆ, ವೇದಾಂತ ಪರಂಪರೆಯಲ್ಲಿನ ದಾರ್ಶನಿಕತೆಯನ್ನು ಜಗತ್ತಿನ ಮುಂದೆ ಮಂಡಿಸಿ ಭಾರತೀಯ ಸಂತರಲ್ಲಿ ಅಗ್ರಪೀಠವನ್ನು ಅಲಂಕರಿಸಿದರು.

ಕನ್ನಡದ ಮಹಾಕವಿ ಕುವೆಂಪು ಅವರು ತಮ್ಮ ವಿದ್ಯಾರ್ಥಿ ಜೀವನದ ಬಹುಭಾಗವನ್ನು ಮೈಸೂರಿನ ರಾಮಕೃಷ್ಣ ಆಶ್ರಮದಲ್ಲಿ ಕಳೆದು ಶ್ರೀ ಸಿದ್ಧೇಶ್ವರಾನಂದ ಸ್ವಾಮಿಗಳಿಂದ ದೀಕ್ಷೆ ತೆಗೆದುಕೊಂಡಿದ್ದನ್ನು ತೇಜಸ್ವಿ ಅವರು 'ತಮ್ಮ ಅಣ್ಣನ ನೆನಪು' ಕೃತಿಯಲ್ಲಿ ದಾಖಲಿಸಿದ್ದಾರೆ. ಕುವೆಂಪು ಅವರು ತಮ್ಮ ಆತ್ಮಕತೆಯಾದ 'ನೆನಪಿನ ದೋಣಿಯಲ್ಲಿ' "ಶ್ರೀ ಮಹಾಮಾತೆ ಶಾರದಾದೇವಿಯವರ ಜನ್ಮತಿಥಿಯೂ ನನ್ನ ಜನ್ಮತಿಥಿಯೂ ಒಂದೇ ಆಗಿರುವುದು ನನಗೆ ಆನಂದದ ಮತ್ತು ಹೆಮ್ಮೆಯ ವಿಷಯವಾಗಿದೆ" ಎಂದು ಶ್ರೀ ಗುರು ಮತ್ತು ಶ್ರೀ ಮಾತೆಯವರನ್ನು ಸ್ಮರಿಸಿ ಆತ್ಮಕತೆಯನ್ನು ಪ್ರಾರಂಬಿಸಿದ್ದಾರೆ. ಬಂಗಾಳದ ಧಾರ್ಮಿಕ ಮಹಾಪುರುಷರ ವಿಚಾರಗಳಿಗೆ ಕನ್ನಡದ ಸೂಕ್ಷ್ಮ ಮನಸ್ಸುಗಳು ಹೇಗೆ ಪ್ರತಿಸ್ಪಂದಿಸಿವೆ ಎಂಬುದನ್ನು ತಿಳಿಯಬಹುದಾಗಿದೆ.

**ಶ್ರೀ ಅರವಿಂದರು (೧೯೫೦)**

ಬಂಗಾಳದ ಮತ್ತೋರ್ವ ಧಾರ್ಮಿಕ ಮಹಾಪುರುಷರಾದ ಶ್ರೀ ಅರವಿಂದರು ಕರ್ನಾಟಕವನ್ನು ಬಹು ಪ್ರಭಾವಿಸಿದ್ದಾರೆ. ಕರ್ನಾಟಕ ಏಕೀಕರಣಕಾಗಿ ದುಡಿದ ಆಲೂರು ವೆಂಕಟರಾಯ ಮತ್ತು ಹರ್ಡೇಕರ ಮಂಜಪ್ಪನವರು ಶ್ರೀ ಅರವಿಂದರ ಪ್ರಬಾವಕ್ಕೆ ಒಳಗಾಗಿದ್ದರು. ಗಾಂಧೀಜಿಯವರ ನೇತೃತ್ವದಲ್ಲಿ ರಾಷ್ಟ್ರೀಯ ಹೋರಾಟದಲ್ಲಿ ಭಾಗವಹಿಸಿ ನಂತರ ಅಧ್ಯಾತ್ಮ ಕ್ಷೇತ್ರದಲ್ಲಿ ತೊಡಗಿಸಿಕೊಂಡ ಮಹಾಯೋಗಿ ಶ್ರೀ ಅರವಿಂದರು. ದ.ರಾ.ಬೇಂದ್ರೆಯವರು ಕಟ್ಟಿದ ಗಳೆಯರ ಗುಂಪಿನ ಸದಸ್ಯರೆಲ್ಲರೂ ಶ್ರೀ ಅರವಿಂದರ ಸಾಹಿತ್ಯದ ವಿಚಾರಗಳಿಗೆ ಆಕರ್ಷಿತರಾಗಿದ್ದರು. ಗೆಳೆಯರ ಗುಂಪಿನ ಸದಸ್ಯರಾದ ವಿ.ಕೃ.ಗೋಕಾಕ್, ಮಧುರಚೆನ್ನ, ಡಾ.ಗುರುಲಿಂಗ ಕಾಪಸೆ, ಸಿಂಪಿಲಿಂಗಣ್ಣ, ಕೋ. ಚೆನ್ನಬಸಪ್ಪ ಮೊದಲಾದ ಲೇಖಕರು ಅರವಿಂದರ ಪ್ರಭಾವಕ್ಕೆ ಒಳಗಾಗಿರುವುದನ್ನು ಗುರುತಿಸಬಹುದಾಗಿದೆ. ಕರ್ನಾಟಕದ ಕೆಲವು ಕಡೆ ಶ್ರೀ ಅರವಿಂದ ಮಂಡಲಗಳೂ ಇವೆ. ಕರ್ನಾಟಕದಲ್ಲಿ ಒಟ್ಟು 80 ಶ್ರೀ ಅರವಿಂದ ಕೇಂದ್ರಗಳು ಕಾರ್ಯ ನಿರ್ವಹಿಸುತ್ತಿವೆ. ಬೇಂದ್ರೆಯವರು ಕಟ್ಟಿದ ಗೆಳೆಯರ ಗುಂಪಿನ ಮೇಲೆ ಶ್ರೀ ಅರವಿಂದರ ಪ್ರಭಾವ ಬಹಳಷ್ಟು ಆಗಿದ್ದರೆ ದಕ್ಷಿಣಕರ್ನಾಟಕ ಭಾಗದಲ್ಲಿ ರಾಮಕೃಷ್ಣ, ವಿವೇಕಾಂದರ ಪ್ರಭಾವ ಹೆಚ್ಚಾಗಿರುವುದನ್ನು ಗುರುತಿಸಬಹುದಾಗಿದೆ.

ಹೀಗೆ ಕನ್ನಡ ಸಾಂಸ್ಕೃತಿಕ ಪರಿಸರದ ಮೇಲೆ ರಾಜಕೀಯವಾಗಿ, ಧಾರ್ಮಿಕವಾಗಿ, ಸಾಂಸ್ಕೃತಿಕವಾಗಿ, ಸಾಹಿತ್ಯಕವಾಗಿ ಗಣನೀಯವಾಗಿ ಪ್ರಭಾವ ಬೀರಿರುವ ಬಂಗಾಳ ಹಾಗೂ ಕರ್ನಾಟಕ ನಡುವಿನ ರಾಜಕೀಯ ಮತ್ತು ಧಾರ್ಮಿಕ ಸಂಬಂಧವನ್ನು ಸ್ಥೂಲವಾಗಿ ಪರಿಶೀಲಿಸಿದ್ದೇನೆ.

**ಭಾಷಾಂತರಕಾರರು**

ಆದರ್ಶ ಭಾಷಾಂತರಕಾರ ಇಲ್ಲವೆ ಅನುವಾದಕ ಎಂದರೆ ಬೇರೊಂದು ಭಾಷೆಯ ಸಾಹಿತ್ಯ ಕೃತಿಯನ್ನು ಮೂಲದ ಕವಿಯೇ ಆ ಕೃತಿಯನ್ನು ತನ್ನ ಭಾಷೆಯಲ್ಲಿ ಬರೆದರೆ ಹೇಗಿರುತ್ತಿತ್ತೋ ಹಾಗೆ ಪರಕಾಯ ಪ್ರವೇಶ ಮಾಡಿದಂತೆ ಮೂಲ ಕೃತಿಯನ್ನು ಉದ್ದಿಷ್ಟ ಭಾಷೆಗೆ ತರುವವ. ಇದು ಪುನರ್‌ಸೃಷ್ಟಿ ಕಾರ್ಯವಾದುದರಿಂದ 'ದ್ವಿತೀಯ ಪುನರಾವೃತ್ತಿ ಕೆಲಸ' (Secondary rework)ವೇ ಆದರೂ ಇದು ಯಾಂತ್ರಿಕವೋ, ಉದಾಸೀನವಾದುದೋ, ಸೃಜನಶೀಲರಲ್ಲದವರು ಈ ನೆವದಲ್ಲಿ ತಾವೂ ಬರೆಹಗಾರರೆಂದು ತೋರ್ಪಡಿಸಿಕೊಳ್ಳುವ ಉಪಾದಿಯ ಕೆಲಸವೋ ಅಲ್ಲ. ಒಬ್ಬ ಆದರ್ಶ ಭಾಷಾಂತರಕಾರ ಎನಿಸಿಕೊಳ್ಳಲು ಬಹುಮುಖ ಮಹಾಪ್ರತಿಭಾ ಸಂಪನ್ನನೇ ಆಗಬೇಕು. ಭಾಷಾಂತರಕಾರನಿಗೆ ಕನಿಷ್ಠ ಎರಡು ಭಾಷೆಗಳ ಮೇಲೆ ಪರಿಪೂರ್ಣ ಪ್ರಭುತ್ವವಿರಬೇಕು; ಮೂಲ ಭಾಷೆಯಲ್ಲಿ ಕನಿಷ್ಠತಮ ಸೂಕ್ಷ್ಮ ಪರಿಜ್ಞಾನ ಇರಬೇಕು. ಉದ್ದಿಷ್ಟ ಭಾಷೆಯಲ್ಲಿ ಬರೆಹದ ಅನುಭವವಿರಬೇಕು; ಪರಮ ಪ್ರಭುತ್ವವಿರಬೇಕು. ಸಮಗ್ರವೂ–ಆಳವೂ ಆದ ಅಧ್ಯಯನ–ಅಭ್ಯಾಸಗಳಿಂದ ಭಾಷಾಂತರ ಸಾಮರ್ಥ್ಯವನ್ನು ವೃದ್ಧಿಸಿಕೊಳ್ಳುತ್ತಲಿರಬೇಕು. ಸಮಕಾಲೀನ ಸಾಹಿತ್ಯದ ಜಾಯಮಾನ, ಅನುಶೀಲನ; ವಿವಿಧ ಶಾಸ್ತ್ರ, ಜ್ಞಾನ–ವಿಜ್ಞಾನಗಳ ಪರಿಚಯವಿರಬೇಕು. ತನ್ನ ಭಾಷಾಂತರ ಪ್ರತಿಭೆಯಿಂದ, ಮೂಲ ಭಾವದ ಜಾಯಮಾನದ ರೀತಿಯಲ್ಲೇ ಶಬ್ದ, ಧ್ವನಿ, ಲಯ, ವಿನ್ಯಾಸ, ಭಾವ, ವಿಶಿಷ್ಟಾರ್ಥಗಳು ಸ್ಫುರಿಸುವಂತೆ ಔಚಿತ್ಯಪೂರ್ಣ ಪ್ರಜ್ಞೆಯಿಂದ ಅಳವಡಿಸಬೇಕಾಗುತ್ತದೆ; ಈ ಅರ್ಥದಲ್ಲಿ ಇದು ಸೃಜನೆ, ಕಲೆಯೂ ಎನಿಸಿಕೊಳ್ಳುತ್ತದೆ. ಮೂಲದ ಭಾಷೆಯಲ್ಲಿ ಭಾಷಾಂತರಕಾರ ನಿತಿಶಮತಿಯಾಗಿರಬೇಕು; ಅದರ ಭಾವವನ್ನು ಚಾತುರ್ಯದಿಂದ ತನ್ನ ಭಾಷೆಗೆ ಅಳವಡಿಸಬೇಕು; ವ್ಯಾಕರಣದ, ಛಂದಸ್ಸಿನ ವಿಶಿಷ್ಟತೆಯನ್ನು ಮೂಲದಂತೆಯೇ ತರಬೇಕು. ಭಾಷಾಶಾಸ್ತ್ರಜ್ಞನೂ ಆಗಿ ಸಾಂದರ್ಭಿಕ ಅನಿವಾರ್ಯತೆಯಲ್ಲಿ ಹೊಸ ಪಾರಿಭಾಷಿಕ ಪದಗಳನ್ನು ಸೃಷ್ಟಿಸಲೂ ಸಾಮರ್ಥ್ಯ ಇರಬೇಕು. ಮೂಲದ ಭಾವದ ಯಥಾರ್ಥವನ್ನು ಗ್ರಹಿಸಿ ಅದರ ಧ್ವನಿ ತರಂಗಗಳನ್ನೂ ಅಂತೆಯೇ ಉದ್ದಿಷ್ಟ ಭಾಷೆಯಲ್ಲಿ ಅಭಿವ್ಯಕ್ತಿ ನೀಡಬೇಕು. ಮೂಲಕ್ಕೆ ನಿಷ್ಠೆ, ಕೆಲಸದಲ್ಲಿ ಶ್ರದ್ಧೆ–ಪರಿಶ್ರಮವಿರಬೇಕು. ಮೂಲ ಕೃತಿಯಲ್ಲಿ ಮುಳುಗಿ ಆಳ–ಅಗಲವನ್ನು ಅರ್ಥ ಮಾಡಿಕೊಳ್ಳುವವನಾಗಿರಬೇಕು ಮತ್ತು ಪೂರ್ವಗ್ರಹಕ್ಕೆ ಜಡವಾಗಬಾರದು ಹಾಗೂ ಸ್ವಂತಿಕೆಯನ್ನೂ ಸೇರಿಸಬಾರದು.

ಒಟ್ಟಾರೆ ಆದರ್ಶ ಭಾಷಾಂತರಕಾರ ಎರಡು ಭಾಷೆಗಳಲ್ಲಿ ಸಮರ್ಥಶೀಲನಾಗಿದ್ದುಕೊಂಡು ತನ್ನ ಭಾಷಾಂತರದಲ್ಲಿ ನಿರ್ದಿಷ್ಟತೆ, ಸ್ಪಷ್ಟತೆ, ಸರಳತೆ, ಮಾಧುರ್ಯ ಗುಣಗಳನ್ನು ತಂದು, ಮೂಲದ ವಸ್ತು, ರೀತಿ ಶೈಲಿಯನ್ನು ಯಥಾವತ್ತಾಗಿ ಮೂಲದಂತೆಯೇ ತಂದಾಗ ಮಾತ್ರವೇ ಆದರ್ಶ ಭಾಷಾಂತರದ ಅವತರಣಿಕೆ ಯಶಸ್ಸಾಗುವುದರಿಂದಲೇ 'ಸೋಮಾರಿತನ ಭಾಷಾಂತರಕಾರನ ಪ್ರಥಮ ಶತ್ರು' ಎನ್ನುವುದು; ಇದೇ ಧನಿಯೊಂದಿಗೆ ಈ ಎಲ್ಲ ಭಾವಗಳನ್ನು ಒಗ್ಗೂಡಿಸಿ ದೇಜಗೌ ಅವರು: ಕನ್ನಡದಲ್ಲಿನ ಬಂಕಿಮ, ರವೀಂದ್ರ, ಶರಶ್ಚಂದ್ರ ಅವರ ಸಾಹಿತ್ಯದ ಬಿ.

ವೆಂಕಟಾಚಾರ್ಯ ಅನುವಾದಕರಲ್ಲೂ ನರೇಗಲ್ಲ ಪ್ರಹ್ಲಾದರಾಯ, ಅ.ನಾರಾಯಣಸ್ವಾಮಿ ಅಯ್ಯರ್, ಆಹೋಬಲ ಶಂಕರ, ಶ್ರೀನಾರಾಯಣ ಸಂಗಮ, ಸ್ವಾಮಿ ಶಂಕರಾನಂದ ಸರಸ್ವತಿ, ಎಚ್.ವಿ.ಸಾವಿತ್ರಮ್ಮ, ಟಿ.ಎಸ್.ವೆಂಕಣ್ಣಯ್ಯ, ಎ.ಆರ್.ಕೃಷ್ಣಶಾಸ್ತ್ರಿ, ಎ.ಎನ್.ನರಸಿಂಹಯ್ಯ ಮುಂತಾದವರು ಆದರ್ಶ ಭಾಷಾಂತರಕಾರರು ಎನಿಸುವಷ್ಟರ ಮಟ್ಟಿಗೆ ಸಮರ್ಥಶಾಲಿ ಅನುವಾದಕರಾಗಿ ಅಭಿನಂದನೀಯರಾಗಿದ್ದಾರೆ.

ಬಂಗಾಳಿ ಭಾಷೆ ಅತ್ಯಂತ ವಿಶಿಷ್ಟ-ವಿಚಿತ್ರದ ಭಾಷೆ. ಅಚ್ಚಬಂಗಾಳಿಯಲ್ಲಂತೂ ದೇಶೀಯ ತದ್ಭವ ಪದಗಳು, ಸರ್ವನಾಮ-ಕ್ರಿಯಾಪದಗಳು, ಕಾಲವಾಚಿಕ ಪದಗಳು ಮುಂತಾದವನ್ನು ಭಾಷಾಂತರದಲ್ಲಿ ಯಥಾರೂಪವಾಗಿ ಸಮನ್ವಯಿಸುವುದು ಸಾಧ್ಯವೇ ಆಗುವುದಿಲ್ಲ. ಬಿ.ವೆಂಕಟಾಚಾರ್ಯರು ಆರಂಭದಲ್ಲಿ ಇಂಥ ಮೂಲನಿಷ್ಠವಾದ ಅನುವಾದ ಕೊಡುವ ಪ್ರಯತ್ನ ಪೆಡಸೇ ಎನಿಸಿ, ಕೊನೆಗೆ ಕನ್ನಡದ ಜಾಯಮಾನಕ್ಕೆ-ಸಹಜತೆಗೆ ಒತ್ತುಕೊಟ್ಟು, ಜನಾನುರಾಗೀ ಅನುವಾದಗಳನ್ನು ನೀಡಿ ಮನ್ನಣೆಗೆ ಪಾತ್ರರಾದರು. ಬಂಕಿಮಚಂದ್ರರ ಸಾಹಿತ್ಯ ಕೃತಿಗಳ ಬಗೆಗೆ ವಿಮರ್ಶೆ ಬರೆಯುವಾಗ ಎ.ಆರ್.ಕೃಷ್ಣಶಾಸ್ತ್ರಿಗಳು ಬಿ.ವೆಂಕಟಾಚಾರ್ಯರು ಕನ್ನಡಕ್ಕೆ ಅನುವಾದಿಸಿದ ಬಂಕಿಮರ ಕೃತಿಗಳನ್ನು ಪರಿಶೀಲಿಸಲು, ಆ ಕೃತಿಗಳು ಜನಪ್ರಿಯವಾಗಿದ್ದಾಗ್ಯೂ, ಮೂಲಕೃತಿಯ ನಿಜಸ್ವರೂಪ ಮಾಸುಹೋಗಿದೆ ಎಂದಭಿಪ್ರಾಯಿಸಿದ್ದಾರೆ. ಠಾಕೂರರಂಥ ಬಹುಮುಖ ಪ್ರತಿಭಾವಂತ ರಸಋಷಿಯ ಸಾಹಿತ್ಯವನ್ನು ಯಥಾವತ್ತಾಗಿ ಅನುವಾದಿಸಬೇಕಾದರೆ ಅಂತದ್ದೇ ಸಮರ್ಥಶಾಲಿ ಅನುವಾದಕ ಬೇಕಾಗುತ್ತಾನೆ.

**೧. ಬಿ. ವೆಂಕಟಾಚಾರ್ಯ (೧೮೪೫-೧೯೧೪)**

ಆಧುನಿಕ ಕನ್ನಡ ಗದ್ಯ ಪ್ರಕಾರವಾದ ಬಂಗಾಳಿ ಅನುವಾದಿತ ಕಾದಂಬರಿ ಸಾಹಿತ್ಯದಲ್ಲಿ ಅಳಿಸಲಾಗದ ಹೆಜ್ಜೆಯನ್ನು ಬಿಟ್ಟುಹೋಗಿರುವ ವ್ಯಕ್ತಿ ಬಿ. ವೆಂಕಟಾಚಾರ್ಯರು. ೧೯ನೆಯ ಶತಮಾನದಲ್ಲಿ ಕನ್ನಡದ ಮಧ್ಯಮವರ್ಗದ ಮನೆಗಳಲ್ಲಿ ಅವರ ಹೆಸರು ಮನೆಮಾತಾಗಿತ್ತು. ಅವರ ಬಂಗಾಳಿ ಕಾದಂಬರಿಗಳು ಕನ್ನಡದಲ್ಲಿ ಒಂದು ಹೊಸ ಓದುಗ ವರ್ಗವನ್ನೇ ನಿರ್ಮಾಣ ಮಾಡಿತು. ಅವರು ಅನುವಾದಕ್ಕೆ ತೊಡಗಿದ ಕಾಲ ಕನ್ನಡದ ಅರುಣೋದಯದ ಅಂದರೆ ನವೋದಯದ ಪೂರ್ವದ ಕಾಲವಾಗಿತ್ತು. ಪ್ರಾಚೀನ ಕಾವ್ಯಗಳ ವಾಚನ ಪರಂಪರೆ ನಿಂತುಹೋಗಿತ್ತು. ಕನ್ನಡದ ಓದುಗರು ಹೊಸದಕ್ಕಾಗಿ ತಹತಹಿಸುತ್ತಿದ್ದ ಕಾಲ ಅದು. ಇಂತಹ ಆರಂಭದ ಕಾಲದಲ್ಲಿ ಎಸ್.ಬಿ. ಕೃಷ್ಣಸ್ವಾಮಿ, ಎಂ.ಎಸ್. ಪುಟ್ಟಣ್ಣ, ಬಿ. ವೆಂಕಟಾಚಾರ್ಯರಂತಹ ಲೇಖಕರು ಕನ್ನಡ ಭಾಷೆ, ಸಾಹಿತ್ಯಗಳ ಬಗ್ಗೆ ಅಭಿಮಾನ, ಆಸಕ್ತಿ ಮೂಡಿಸುವ ಕೆಲಸವನ್ನು ಅನುವಾದಗಳ ಮೂಲಕ ಪೂರೈಸಿದವರಾಗಿದ್ದರು.

೧೮೪೫ರಲ್ಲಿ ವೆಂಕಟಾಚಾರ್ಯರು ಹುಟ್ಟಿದ್ದು ಕೊಳ್ಳೇಗಾಲದಲ್ಲಿ. ಅವರ ತಂದೆ ಗರುಡಾಚಾರ್ಯರು ಸಂಸ್ಕೃತ ಪಂಡಿತರಾಗಿದ್ದರು. ತಮ್ಮ ಬಾಲ್ಯ ವಯಸ್ಸಿನಿಂದಲೂ ಧಾರ್ಮಿಕ ಪರಿಸರದಲ್ಲಿ ವೆಂಕಟಾಚಾರ್ಯರು ಬೆಳೆದರು. ಅದರಿಂದ ಅವರಿಗೆ ಉತ್ತಮ ಸಂಸ್ಕಾರ ಮತ್ತು

ಸನಾತನ ಸಂಸ್ಕೃತಿಯ ಬಗ್ಗೆ ಆಸಕ್ತಿ ಮೂಡಿತು. ಪ್ರತಿಭಾವಂತ ವಿದ್ಯಾರ್ಥಿ ಆಗಿದ್ದ ಅವರಿಗೆ ಆರಂಭದ ಶಿಕ್ಷಣ ಮನೆಯಲ್ಲಿ ದೊರೆಯಿತು. ನಂತರ ಅವರ ತಂದೆ ಮಗನನ್ನು ತುಮಕೂರಿನ ಇಂಗ್ಲಿಷ್ ಶಾಲೆಯೊಂದಕ್ಕೆ ಸೇರಿಸಿದರು. ಅಲ್ಲಿ ವೆಂಕಟಾಚಾರ್ಯರು ನಾಲ್ಕೈದು ವರ್ಷಗಳಲ್ಲಿ ಜೂನಿಯರ್, ಸೀನಿಯರ್ ಪರೀಕ್ಷೆಗಳನ್ನು ಮುಗಿಸಿ ಸರ್ಕಾರಿ ಗುಮಾಸ್ತರಾಗಿ ಕೆಲಸಕ್ಕೆ ಸೇರಿದರು.

ಅನಂತರ ಅವರು ಚಿತ್ರದುರ್ಗದಲ್ಲಿ ಅಕೌಂಟೆಂಟ್ ಆದರು. ಅವರ ಕಾರ್ಯದಕ್ಷತೆ, ಶ್ರದ್ಧೆ, ಪರಿಶ್ರಮಗಳಿಂದ ಶೀಘ್ರದಲ್ಲಿಯೇ ಡಿವಿಜನ್ ಹೆಡ್ ಮುನ್ಸಿಯಾದರು, ಡಿಸ್ಟ್ರಿಕ್ಟ್ ಕೋರ್ಟ್‌ನಲ್ಲಿ ಶಿರಸ್ತೇದಾರರಾದರು ಮತ್ತು ಪಬ್ಲಿಕ್ ಪ್ರಾಸಿಕ್ಯೂಟರ್ ಆಗಿ ಕೊನೆಗೆ ಮುನ್ಸೀಫರಾಗಿ ಬಡ್ತಿ ಪಡೆದರು. ಅವರು ಈ ಸರ್ಕಾರಿ ಕಾರ್ಯಭಾರದ ನಡುವೆಯೂ ಸಾಹಿತ್ಯಿಕ ಸಾಧನೆ, ಆಸಕ್ತಿಗಳನ್ನು ಉಳಿಸಿಕೊಂಡು ಬಂದರು. ಅದರ ಫಲವಾಗಿ ಅನೇಕ ಬಂಗಾಳಿ ಕಾದಂಬರಿಗಳನ್ನು ಕನ್ನಡದ ಜನತೆಗೆ ಅನುವಾದದ ಮೂಲಕ ದೊರಕಿಸಿ ಕೃತಾರ್ಥರಾದರು. ಸಾಹಿತ್ಯ ಮತ್ತು ಶಾಸ್ತ್ರಾಧ್ಯಯನಗಳು ಅವರ ಉಸಿರಾಗಿತ್ತು. ಮನೆಯಲ್ಲಿ ಸಹಸ್ರಾರು ಬೆಲೆ ಬಾಳುವ ಗ್ರಂಥಗಳ, ನಿಘಂಟುಗಳ, ವಿಶ್ವಕೋಶಗಳ ಗ್ರಂಥ ಭಂಡಾರವನ್ನೇ ಹೊಂದಿದ್ದರು.

ಬಿ. ವೆಂಕಟಾಚಾರ್ಯರ ಮನೆ ಮಾತು ತಮಿಳು. ಕೊಳ್ಳೇಗಾಲ ತಮಿಳು – ಕನ್ನಡ ಭಾಷೆಗಳ ದ್ವಿಭಾಷಿಕ ಪರಿಸರವಾಗಿತ್ತು. ತಂದೆಯ ಧಾರ್ಮಿಕ ಶ್ರದ್ಧೆಯ ಪ್ರಭಾವದಿಂದ ಅವರು ಮೊದಮೊದಲು ಸ್ತೋತ್ರ ಸಾಹಿತ್ಯ ರಚನೆಗಾಗಿ ತೊಡಗಿದ್ದರು. ಕೆಲವು ಮೌಲಿಕವಾದ ತಮಿಳು ಕೃತಿಗಳನ್ನೂ ಕೆಲವು ಇಂಗ್ಲಿಷ್ ಕೃತಿಗಳನ್ನು ಅನುವಾದಿಸಿದರು. ಆದರೆ ಅವರು ಭದ್ರವಾಗಿ ಬೇರೂರಿದ್ದು ಬಂಗಾಳಿ ಭಾಷೆಯ ಕೃತಿಗಳ ಕನ್ನಡ ಅನುವಾದದಿಂದ ಅದಕ್ಕೆ ಅವರಿಗೆ ಅವರ ದೂರದ ಸಂಬಂಧಿಯೊಬ್ಬರು ಬಹುವಾಗಿ ನೆರವಾದರು. ಅವರು ವೆಂಕಟಾಚಾರ್ಯರು ಬಂಗಾಳಿ ಭಾಷೆಯನ್ನು ಕಲಿಯಲು ಅವಕಾಶ ಕಲ್ಪಿಸಿಕೊಟ್ಟರು. ಅದಕ್ಕಾಗಿ ಬಿ. ವೆಂಕಟಾಚಾರ್ಯರು ಕಲ್ಕತ್ತಾಗೆ ತೆರಳಿದರು. ಅಲ್ಲಿಂದ ಹಿಂದಿರುಗುವಾಗ ಬಂಗಾಳಿ ಪುಸ್ತಕಗಳನ್ನು ತಂದು, ಅವರು ಬಂಗಾಳಿ ಭಾಷೆಯನ್ನು ಕಲಿಯುವಂತೆ ಆ ಸಂಬಂಧಿಕರು ಏರ್ಪಾಟು ಮಾಡಿದರು. ಅದರಿಂದ ಬಹುಬೇಗ ಬಂಗಾಳಿ ಭಾಷೆಯನ್ನು ಕಲಿತರು. ಆಸಕ್ತಿ, ಶ್ರದ್ಧೆ, ಅಭಿರುಚಿ ಇದ್ದರೆ ಯಾವುದೂ ಕಷ್ಟ ಅಲ್ಲ ಎಂಬುದನ್ನು ಅವರು ಇದರಿಂದ ತೋರಿಸಿಕೊಟ್ಟರು. ಅಲ್ಲಿಂದ ಬಂಗಾಳದ ಈಶ್ವರ ಚಂದ್ರವಿದ್ಯಾಸಾಗರ ಅವರೊಡನೆ ಸಂಪರ್ಕ, ಪತ್ರ ವ್ಯವಹಾರ ಇಟ್ಟುಕೊಂಡು ಬಂಗಾಳಿ ಭಾಷೆಯನ್ನು ಓದುವುದರಲ್ಲಿ, ಬರೆಯುವುದರಲ್ಲಿ ಸಿದ್ಧಿಯನ್ನು ಪಡೆದರು.

ವೆಂಕಟಾಚಾರ್ಯರು ಮೊದಲಿಗೆ ತಮ್ಮ ಪತ್ರಗುರುಗಳೂ, ಆಪ್ತರೂ ಆಗಿದ್ದ ಈಶ್ವರಚಂದ್ರ ವಿದ್ಯಾಸಾಗರ ಅವರ 'ಭ್ರಾಂತಿವಿಲಾಸ' (ಕಾಮೆಡಿ ಆಫ್ ಎರರ್ಸ್‌ನ ಗದ್ಯರೂಪ)ವನ್ನು ಕನ್ನಡಕ್ಕೆ ಅನುವಾದಿಸಿದರು. ಇದನ್ನು ವೆಂಕಟಾಚಾರ್ಯರ ಸಂಬಂಧಿಗಳಾದ ವಿ.ಎನ್. ನರಸಿಂಹಾಚಾರ್ಯರು ೧೮೭೬ರಲ್ಲಿ ಕನ್ನಡದಲ್ಲಿ ಅಚ್ಚು ಹಾಕಿಸಿದರು. ಇದರಿಂದ ಅವರಿಗೆ ನಿರೀಕ್ಷೆ ಮೀರಿ ಜನಪ್ರಿಯತೆ

ಬಂತು. ಈ ಕೃತಿ ಮರುವರ್ಷವೇ ಮದ್ರಾಸ್ ವಿಶ್ವವಿದ್ಯಾಲಯದಲ್ಲಿ ಪಠ್ಯಗ್ರಂಥವಾಯಿತು. ಅನಂತರ ಅವರು ಈಶ್ವರಚಂದ್ರ ವಿದ್ಯಾಸಾಗರ ಅವರ 'ಶಾಕುಂತಲ', 'ಸೀತಾ ವನವಾಸ' ಕಥಾ ಸಂಕಲನಗಳನ್ನು ಕನ್ನಡಕ್ಕೆ ಅನುವಾದಿಸಿದರು. ಅವು ಕೂಡಾ ಕನ್ನಡಿಗರ ಮನವನ್ನು ಗೆದ್ದವು. ಇದರಿಂದ ಅವರಿಗೆ ಪ್ರೋತ್ಸಾಹ ಸಿಕ್ಕಿ ಇನ್ನೂ ಹೆಚ್ಚು ಹೆಚ್ಚು ಬಂಗಾಳಿ ಕೃತಿಗಳನ್ನು ಕನ್ನಡಕ್ಕೆ ತಂದರು. ಅವರ ಈ ಬಂಗಾಳಿ ಕಾದಂಬರಿಗಳ ಅನುವಾದಕ್ಕಾಗಿ ಕನ್ನಡದ ಓದುಗರು ಕಾಯುತ್ತಿದ್ದರೆಂದು ಹೇಳಲಾಗುತ್ತದೆ. ಇಂತಹ ಒಂದು ಹೊಸ ಅನುವಾದದ ಯುಗದ ಪ್ರಾರಂಭಕ್ಕೆ ಅವರು ನಾಂದಿ ಹಾಡಿದ್ದರು. ಅವರು ಬಂಕಿಮಚಂದ್ರ ಚಟ್ಟೋಪಾಧ್ಯಾಯರ ಬಂಗಾಳಿ ಕಾದಂಬರಿ 'ವಿಷವೃಕ್ಷ'ವನ್ನು ಅನುವಾದಿಸಿ ಕರ್ನಾಟಕ ಗ್ರಂಥಮಾಲೆಯಲ್ಲಿ ಧಾರವಾಹಿಯಾಗಿ ಮೂರು ವರ್ಷ ಕಾಲ ಪ್ರಕಟಿಸಿದರು. ಇದು ೧೯೦೦ರಲ್ಲಿ ಪೂರ್ಣಗೊಂಡಿತ್ತು. ಆದಲ್ಲದೆ, ಆ ವೇಳೆಗಾಗಲೇ ಅವರ ಬಂಗಾಳಿ ಅನುವಾದಿತ ಕಾದಂಬರಿಗಳೂ ಪ್ರಕಟವಾಗಿದ್ದವು.

ಬಂಕಿಮರ ಬಂಗಾಳಿ ಕಾದಂಬರಿಗಳ ವಸ್ತು, ಶೈಲಿ, ಸಂವಿಧಾನಗಳಿಗೆ ಬಿ. ವೆಂಕಟಾಚಾರ್ಯರು ಮಾರುಹೋಗಿದ್ದರು. ಅವು ಅವರನ್ನು ಮಂತ್ರಮುಗ್ಧರನ್ನಾಗಿ ಮಾಡಿದ್ದವು. ಜೊತೆಗೆ ಆ ಕಾದಂಬರಿಗಳ ಆಶಯಗಳೂ ವೆಂಕಟಾಚಾರ್ಯರ ಮೆಚ್ಚುಗೆಗೆ ಪಾತ್ರವಾಗಿದ್ದವು. ಅವರ ಕಾದಂಬರಿಗಳಲ್ಲಿ ಬರುವ ರಾಷ್ಟ್ರಾಭಿಮಾನ, ಸ್ತ್ರೀ ಪರವಾದ ವಿಚಾರಗಳು, ಧರ್ಮ-ಆಚಾರ ಸಂಬಂಧಿ ಚರ್ಚೆಗಳು, ರಂಜಕ-ಅದ್ಭುತರಮ್ಯ ಮತ್ತು ರೋಮಾಂಚನಕಾರಿ ಘಟನೆಗಳು, ಅಲೌಕಿಕ ಸಂಗತಿಗಳು, ಮೋಹಕ ಶೈಲಿ ಇವೆಲ್ಲಾ ಅಂಶಗಳು ಅವರನ್ನು ಆಕರ್ಷಿಸಿ ಅವರು ಅವುಗಳ ಅನುವಾದಕ್ಕೆ ತೊಡಗಲು ಪ್ರೇರೇಪಿಸಿದ್ದವು. ಅಂತಹ ಕೃತಿಗಳನ್ನು ಕನ್ನಡ ಸಮಾಜಕ್ಕೂ ತಂದುಕೊಳ್ಳಲು ಉತ್ತೇಜಿತರಾಗಿದ್ದರು.

೧೮೮೫ರಲ್ಲಿ ಬಂಕಿಮರ 'ದುರ್ಗೇಶ ನಂದಿನಿ' ಕಾದಂಬರಿಯನ್ನು ವೆಂಕಟಾಚಾರ್ಯರು ಅನುವಾದಿಸಿದರು. ಇದು ಬಂಗಾಳಿ ಭಾಷೆಯಲ್ಲಿ ೧೮೬೫ರಲ್ಲಿಯೇ ಬಂದಿತ್ತು. ಅದನ್ನು ಅನುವಾದಿಸುವಾಗ ತಮ್ಮ ಉದ್ದೇಶವನ್ನು ಕುರಿತು, "A Novel in the sense it is understood in English is not familliar to the Kanarese speaking public" ಎಂದಿದ್ದಾರೆ. ಹೀಗೆ ಕನ್ನಡ ಸಮಾಜ – ಸಂಸ್ಕೃತಿಯ ಪರಿಸರವನ್ನು ಸರಿಪಡಿಸುವುದು, ತಿದ್ದುವುದು ಅವರ ಮುಖ್ಯ ಉದ್ದೇಶವಾಗಿದ್ದದ್ದು ಇದರಿಂದ ತಿಳಿದುಬರುತ್ತದೆ. ಹೀಗೆ ಇದರ ಹಿಂದೆ ಸಾಂಸ್ಕೃತಿಕವಾದ ಒತ್ತಾಯವಿದೆ.

೧೯೯೦ರ ಹೊತ್ತಿಗೆ ವೆಂಕಟಾಚಾರ್ಯರು ಬಂಕಿಮರ 'ಆನಂದಮಠ' (೧೮೮೨), 'ದೇವಿ ಚೌಧುರಾಣಿ' (೧೮೮೪), 'ರಜನಿ', 'ರಾಜಸಿಂಹ', 'ರಾಧಾರಾಣಿ', 'ಮೃಣಾಲಿನಿ', 'ಚಂದ್ರಶೇಖರ', 'ಕೃಷ್ಣಕಾಂತನ ಉಯಿಲು' ಕಾದಂಬರಿಗಳಾಗಿದ್ದು ಕನ್ನಡದ ಓದುಗರ ಮೆಚ್ಚುಗೆಗೆ ಪಾತ್ರವಾದವು. ವೆಂಕಟಾಚಾರ್ಯರು ಬಂಗಾಳಿಯಿಂದ ಸುಮಾರು ೭೫ ಕೃತಿಗಳನ್ನು ಅನುವಾದ ಮಾಡಿದ್ದರೂ ಅವುಗಳಲ್ಲಿ ಹೆಚ್ಚು ಕಾದಂಬರಿಗಳು ಮತ್ತು ಸಣ್ಣಕಥೆಗಳಾಗಿವೆ. ಬಂಗಾಳಿ ಅನುವಾದಗಳಲ್ಲಿ

ಇವೆರದು ಸಿಂಹಪಾಲಿದೆ. ಬಂಗಾಳದ ಹರಿಪ್ರಸಾದ ಶಾಸ್ತ್ರಿಯವರ 'ಭಾರತ ಮಹಿಳಾ' (೧೮೮೪) ಎಂಬ ಗ್ರಂಥವನ್ನೂ ಇವರು ಕನ್ನಡಕ್ಕೆ ಅನುವಾದಿಸಿದ್ದಾರೆ. ಬಂಕಿಮರ ಕಾದಂಬರಿಗಳ ಪ್ರಭಾವಕ್ಕೆ ಅವರು ಒಳಗಾಗಿದ್ದರು ಮತ್ತು ಬಂಕಿಮರ ಬರಹಗಳೇ ಅವರಿಗೆ ಆದರ್ಶವಾಗಿದ್ದವು.

ವೆಂಕಟಾಚಾರ್ಯರು ಆದಷ್ಟು ಮೂಲಕೃತಿಗಳಿಗೆ ನಿಷ್ಠರಾಗಿ ಅನುವಾದಿಸಿದ್ದಾರೆ. ಮೂಲಕ್ಕೆ ಪ್ರಾಮಾಣಿಕರಾಗಿರಬೇಕು ಎಂಬುದು ಅವರ ಧ್ಯೇಯವಾಗಿತ್ತು. ಸಂಸ್ಕೃತ ಭೂಯಿಷ್ಠ ಭಾಷೆಯನ್ನು ಬಳಸಿದರು. ಕನ್ನಡ ಭಾಷೆಯ ಲಯವನ್ನು ಅವರು ಅನುವಾದದಲ್ಲಿ ಮರೆತಿಲ್ಲ. ಸಮರ್ಪಕವಾದ ರೀತಿಯಲ್ಲಿ ಆ ಕೆಲಸವನ್ನು ಅವರು ಮಾಡಿದ್ದಾರೆ. ಅವರ ಪ್ರತಿಭೆಯನ್ನು ಕಂಡು ವೆಂಕಟಾಚಾರ್ಯರಿಗೆ ಬಂಕಿಮರೇ ತಮ್ಮ ಎಲ್ಲಾ ಕಾದಂಬರಿಗಳನ್ನು ಅನುವಾದಿಸಲು ಒಪ್ಪಿಗೆ ಕೊಟ್ಟರಂತೆ. ವೆಂಕಟಾಚಾರ್ಯರು ಅನುವಾದಗಳ ಜೊತೆಗೆ 'ಸೂರ್ಯಪೂಜೆ' ಎಂಬ ಲೇಖನಗಳು, 'ದಾಡಿಯ ಹೇಳಿಕೆ' ಎಂಬ ಪ್ರಬಂಧಗಳು ಎಂಬ ಸ್ವತಂತ್ರ ಕೃತಿಗಳನ್ನೂ ರಚಿಸಿದ್ದಾರೆ. ಸರ್ಕಾರದ ಕೆಲಸದಿಂದ ನಿವೃತ್ತಿಯಾದ ಮೇಲೆ ಅವರು 'ಅವಕಾಶ ತೋಷಿಣಿ' ಎಂಬ ಮಾಸಪತ್ರಿಕೆಯನ್ನು ಸ್ಥಾಪಿಸಿ ಅದರಲ್ಲಿ ಕಥೆ, ಲಘು ಲೇಖನಗಳನ್ನೂ ಬರೆದಿದ್ದಾರೆ. ಬೇರೆ ಲೇಖಕರಿಗೂ ಪ್ರೋತ್ಸಾಹ ತುಂಬಿದ್ದಾರೆ. ಬಂಗಾಳದಲ್ಲಿ ಇವರು ಕನ್ನಡದ ಅನುವಾದಕರಾಗಿ ಖ್ಯಾತಿ ಗಳಿಸಿದ್ದರು. ಇವರು ದೇವೇಂದ್ರನಾಥ ಠಾಕೂರ್, ಶ್ರೀ ಸ್ವಾಮಿ ವಿವೇಕಾನಂದ, ಶ್ರೀ ರಾಮಕೃಷ್ಣ ಪರಮಹಂಸ ಮುಂತಾದ ವ್ಯಕ್ತಿಗಳ ದರ್ಶನಕ್ಕೆ ಒಳಗಾದವರು. ಬಂಗಾಳಿ ಭಾಷೆಯ ಪ್ರೌಢಿಮೆಯನ್ನು ಇವರು ಸಿದ್ಧಿಸಿಕೊಂಡಿದ್ದನ್ನು ಅನೇಕರು ಗುರುತಿಸಿದ್ದಾರೆ.

ವೆಂಕಟಾಚಾರ್ಯರು ವ್ಯಕ್ತಿಯಾಗಿ, ಅನುವಾದಕರಾಗಿ ಜನಪ್ರಿಯತೆ ಗಳಿಸಿದ್ದರು. ದೈಹಿಕವಾಗಿ ಎತ್ತರವಿದ್ದು, ದಪ್ಪವಿದ್ದು, ತೇಜಪೂರ್ಣವಾದ ಕಣ್ಣುಗಳಿದ್ದು, ಸುಂದರ ದೃಢಕಾಯರಾಗಿದ್ದರಂತೆ; ಕಚ್ಚೆ ಪಂಚೆ, ಜರಿ ರುಮಾಲು, ಉದ್ದನೆಯ ಕೋಟು, ಜರಿಶಲ್ಯ, ಕಾಲಿಗೆ ಚಡಾವು, ಹಣೆಯಲ್ಲಿ ನಾಮ ಇವು ಅವರ ಉಡುಪಾಗಿದ್ದವಂತೆ; ಸದಾ ಹಸನ್ಮುಖಿ, ನಿಷ್ಕಪಟ ಸ್ವಭಾವ, ಆದರ, ಪ್ರೀತಿ, ಸ್ನೇಹ ಗಳಿಸುವ ವ್ಯಕ್ತಿಯಾಗಿದ್ದರಂತೆ. ಮಹತ್ವಾಕಾಂಕ್ಷೆಯ ವ್ಯಕ್ತಿಯಾಗಿದ್ದ ಅವರು ತಾವು ಅನುವಾದಕ್ಕೆ ಆರಿಸಿಕೊಳ್ಳುವ ಕೃತಿಗಳ ಮೌಲ್ಯಾವಲೋಕನ ಮಾಡಿ, ಸಮಾಜಕ್ಕೆ, ಸಾಹಿತ್ಯಕ್ಕೆ ಉಪಯುಕ್ತವಾಗಬೇಕೆಂಬ ದೃಷ್ಟಿಯಿಂದಲೇ ತಮ್ಮನ್ನು ಅರ್ಪಿಸಿಕೊಂಡು ಕೆಲಸ ಮಾಡಿದವರು. ಕನ್ನಡ ಸಮಾಜಕ್ಕೆ, ಸಂಸ್ಕೃತಿಗೆ ರಾಜಕೀಯ, ಸಾಮಾಜಿಕ, ಧಾರ್ಮಿಕ ತಿಳುವಳಿಕೆಯು ದೊರೆಯಬೇಕೆಂಬುದು ಅವರ ಅನುವಾದಗಳ ಹಿಂದಿನ ಮುಖ್ಯ ವಿಚಾರ, ಚಿಂತನೆಯಾಗಿತ್ತು. ಇಂತಹ ವಿಚಾರಗಳನ್ನೇ ಒಳಗೊಂಡ ಬಂಗಾಳಿ ಕಾದಂಬರಿಗಳನ್ನು ಕನ್ನಡಕ್ಕೆ ತಂದುಕೊಟ್ಟ ಶ್ರೇಯಸ್ಸಿಗೆ, ಕೀರ್ತಿಗೆ ವೆಂಕಟಾಚಾರ್ಯರು ನಿಜಕ್ಕೂ ಭಾಜನರಾಗಿದ್ದಾರೆ.

ಒಟ್ಟಾರೆ ಬಂಗಾಳದ ಪ್ರತಿಷ್ಠಿತ ಕಾದಂಬರಿಕಾರ ಬಂಕಿಮರ ಕಾದಂಬರಿಗಳ ಚಾರಿತ್ರಿಕತೆ, ಸಾಮಾಜಿಕತೆ ಮತ್ತು ಧಾರ್ಮಿಕತೆಯ ಕಥಾನಕಗಳ ಮೂಲಕ್ಕೆ ನಿಷ್ಠರಾಗಿ ಅವುಗಳ ಭಾವ,

ಸಾರವನ್ನು ಗ್ರಹಿಸಿ ಕನ್ನಡ ಭಾಷೆ, ಪರಿಸರದ ಜಾಯಮಾನಕ್ಕೆ ಅರ್ಥಪೂರ್ಣವಾಗಿ ಹಾಗೂ ಸಮರ್ಪಕವಾಗಿ ಒಗ್ಗಿಸಿ ಅನುವಾದಿಸುವ ಕೆಲಸವನ್ನು ಅವರು ಪ್ರಾಮಾಣಿಕವಾಗಿ ನಿರ್ವಹಿಸಿದ್ದಾರೆ. ಆ ಅನುವಾದಗಳು ಕನ್ನಡಿಗರಲ್ಲಿ ರಾಷ್ಟ್ರಾಭಿಮಾನ, ದೇಶಾಭಿಮಾನ ಹಾಗೂ ಸಾಮಾಜಿಕ ವಿಚಾರಗಳಲ್ಲಿ ಜಾಗೃತಗೊಳಿಸುವ ಕೆಲಸವನ್ನು ಮಾಡಿವೆ. ಕೊನೆಗೆ ಬಿ. ವೆಂಕಟಾಚಾರ್ಯರು ಕೊನೆಗಾಲದಲ್ಲಿ ಆರ್ಥಿಕ ತೊಂದರೆಗಳಿಂದ ಕೂಡಿ ಜೂನ್ ೨೬, ೧೯೧೪ನೆಯ ವರ್ಷದಲ್ಲಿ ಬೆಂಗಳೂರಿನಲ್ಲಿ ನಿಧನರಾದರು.

ಆಧಾರ : ಸಾಲುದೀಪಗಳು ; ಸಂಪಾದಕರು ಜಿ.ಎಸ್. ಶಿವರುದ್ರಪ್ಪ, ಎಂ.ಎಚ್. ಕೃಷ್ಣಯ್ಯ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ಎರಡನೆಯ ಪರಿಷ್ಕೃತ ಮುದ್ರಣ, ೨೦೦೧.

**೨. ಅಹೋಬಲ ಶಂಕರ (೧೯೧೩-೧೯೯೭)**

ಭಾರತದ ಹಲವಾರು ಭಾಷೆಗಳ ಸಿರಿಸಂಪತ್ತು ನಮಗೆ ದಕ್ಕಿರುವುದು ಅನುವಾದಕರ ಪರಿಶ್ರಮದಿಂದ. ಹಾಗೆಯೇ ವಿಶ್ವಸಾಹಿತ್ಯದ ಪರಿಚಯವೂ ಕೂಡ. ಶೇಕ್ಸ್‌ಪಿಯರ್, ಹೆಮ್ಮಿಂಗ್ವೇ, ಸಾರ್ತ್ರೆ, ಕಾಮೂ, ಟಾಲ್‌ಸ್ಟಾಯ್, ಗಾರ್ಕಿ, ನೆರೂಡ, ಮುಂತಾದವರು ನಮಗೆ ಪರಿಚಯವಾಗಿರುವುದು ಅನುವಾದಕರಿಂದಲೇ. ಈ ಸಾಲಿನಲ್ಲಿ ತನ್ನ ಅಪ್ರತಿಮ ಪರಿಶ್ರಮದಿಂದ ಸದಾ ಸ್ಮರಣೀಯರಾಗಿರುವ ಅನುವಾದಕರು ಬಿ.ವೆಂಕಟಾಚಾರ್ಯರು ಹಾಗೂ ಅಹೋಬಲ ಶಂಕರರು.

ವಿಶ್ವದ ಸಾಹಿತ್ಯದ ಪರಿಚಯ ನಮಗೆಲ್ಲ ಆಗಿರುವುದು ಅನುವಾದಕರ ಶ್ರಮದಿಂದ. ನಾವೆಲ್ಲರೂ ಶೇಕ್ಸ್‌ಪಿಯರ್, ಹೆಮ್ಮಿಂಗ್ವೇ, ಸಾರ್ತ್ರೆ, ಕಾಮೂ, ಟಾಲ್‌ಸ್ಟಾಯ್, ಗಾರ್ಕಿ, ನೆರೂಡ ಮತ್ತಿತರರ ಕೃತಿಗಳನ್ನು ಓದುತ್ತೇವೆ. ಮೆಚ್ಚಿಕೊಳ್ಳತ್ತೇವೆ. ಅವರಿಂದ ಪ್ರೇರಿತರಾಗಿ ಹೊಸ ಸಾಹಿತ್ಯವನ್ನು ರಚಿಸುತ್ತೇವೆ. ಈ ಸಂದರ್ಭದಲ್ಲಿ ಅನುವಾದಕರ ಮುಖ್ಯ ಪಾತ್ರವನ್ನು ಮರೆತುಬಿಡುತ್ತೇವೆ. ಹಾಗೆಯೇ, ನಮ್ಮ ದೇಶದ ವಿವಿಧ ಭಾಷೆಗಳಲ್ಲಿ ರಚಿತವಾದ ಸುಂದರವಾದ, ಮನೋವಿಕಾಸಕಾರೀ ಸಾಹಿತ್ಯವನ್ನು ಅನುವಾದದ ಮೂಲಕ ಜನಸಾಮಾನ್ಯರಿಗೆ ತಲುಪಿಸುವ ಅನುವಾದಕರ ಅಮೂಲ್ಯ ಸೇವೆಯನ್ನು ಓದುಗರು ಗ್ರಹಿಸುವುದಿಲ್ಲ.

ಕನ್ನಡದ ಓದುಗರಿಗೆ ತಮ್ಮ ಅನುವಾದಗಳ ಮೂಲಕ ಬಂಗಾಲಿ ಸಾಹಿತ್ಯದ ಸುಮಾರು 20 ಸುಂದರವಾದ ಕಾದಂಬರಿಗಳನ್ನೂ ಕಥಾಸಂಕಲನಗಳನ್ನೂ ನಾಟಕಗಳನ್ನೂ ಎಟುಕಿಗೆ ಸಿಗದಿದ್ದ ಸಿರಿಯನ್ನು ನಮಗೆ ತಂದುಕೊಟ್ಟವರು ಅಹೋಬಲ ಶಂಕರರು. ರವೀಂದ್ರನಾಥ ಠಾಕೂರ್, ವಿಭೂತಿ ಭೂಷಣ ಬಂದೋಪಾಧ್ಯಾಯ, ಬಂಕಿಮಚಂದ್ರ ಚಟರ್ಜಿ ಮತ್ತಿತರ ಬಂಗಾಲದ ಅಗ್ರ ಸಾಹಿತಿಗಳನ್ನು ನಮಗೆ ಪರಿಚಯ ಮಾಡಿಸಿಕೊಟ್ಟವರು ಇವರು. ಕನ್ನಡ ಭಾಷೆಗೆ ಮತ್ತು ಕನ್ನಡಿಗರಿಗೆ ಅವರು ಸಲ್ಲಿಸಿದ ಸೇವೆ ಅಮೂಲ್ಯವಾದುದು.

ಕನ್ನಡದ ಓದುಗರಿಗೆ ತಮ್ಮ ಅನುವಾದಗಳ ಮೂಲಕ ಬಂಗಾಳಿ ಸಾಹಿತ್ಯದ ಸುಮಾರು 20 ಸುಂದರವಾದ ಕಾದಂಬರಿಗಳನ್ನೂ ಕಥಾಸಂಕಲನಗಳನ್ನೂ ನಾಟಕಗಳನ್ನೂ ಕನ್ನಡಕ್ಕೆ

ತಂದುಕೊಟ್ಟವರು ಅಹೋಬಲ ಶಂಕರರು. ರವೀಂದ್ರನಾಥ ಠಾಕೂರ್, ವಿಭೂತಿ ಭೂಷಣ ಬಂದೋಪಾಧ್ಯಾಯ, ಬಂಕಿಮಚಂದ್ರ ಚಟರ್ಜಿ, ಶರಶ್ಚಂದ್ರ ಮತ್ತಿತರ ಬಂಗಾಲದ ಅಗ್ರ ಸಾಹಿತಿಗಳನ್ನು ಪರಿಚಯ ಮಾಡಿಸಿಕೊಟ್ಟರು. ಕನ್ನಡ ಭಾಷೆಗೆ ಮತ್ತು ಕನ್ನಡಿಗರಿಗೆ ಅವರು ಸಲ್ಲಿಸಿದ ಸೇವೆ ಅಮೂಲ್ಯವಾದುದು.

ಅಹೋಬಲ ಶಂಕರ 15 ಮೇ 1913ರಂದು ಬೆಂಗಳೂರಿನಲ್ಲಿ ಜನಿಸಿದರು. ಅವರ ತಂದೆ ಅಹೋಬಲ ಶಾಸ್ತ್ರಿಗಳು. ತಾತನ ಹೆಸರು ಕಾಶೀಪತಿ ಶಾಸ್ತ್ರಿಗಳು. ಪಾಂಡಿತ್ಯಕ್ಕೂ ಐಶ್ವರ್ಯಕ್ಕೂ ಹೆಸರಾಗಿದ್ದವರು. ಮೈಸೂರಿನ ಮುಮ್ಮಡಿ ಕೃಷ್ಣರಾಜ ಒಡೆಯರ ಆಸ್ಥಾನದಲ್ಲಿ ಸಂಸ್ಕೃತ ಪಂಡಿತರೇ ಅಲ್ಲದೆ ಲೇವಾದೇವಿಗೂ ಹೆಸರುವಾಸಿಯಾಗಿದ್ದವರು. ಅರಮನೆಯಲ್ಲಿಯೇ ವಾಸಿಸುತ್ತಿದ್ದ ಶಾಸ್ತ್ರಿಗಳಿಗೆ, ಮಹಾರಾಜ ಸಾಕಷ್ಟು ಜಮೀನು ಹಾಗೂ ಮೈಸೂರಿನಲ್ಲಿ ಇಂದಿಗೂ ಇರುವ ಕಾಶೀಪತಿ ಲಾಯವನ್ನು ಬಳುವಳಿಯಾಗಿ ಕೊಟ್ಟು ಗೌರವಿಸಿದ್ದರು. ವಂಶದ ಆಸ್ತಿ ಮತ್ತು ಮೆರುಗು ಮುಂದಿನ ತಲೆಮಾರಿನವರೆಗೂ ಉಳಿಯಲಿಲ್ಲ. ಚಿಕ್ಕಂದಿನಲ್ಲೇ ಮದುವೆಯಾಗಿ ಮೊದಲ ಹೆಂಡತಿಯನ್ನು ಕಳೆದುಕೊಂಡಿದ್ದ ಅಹೋಬಲ ಶಾಸ್ತ್ರಿಗಳು, ವಿದ್ಯಾಭ್ಯಾಸಕ್ಕೆ ಪೂರ್ಣವಿರಾಮ ಕೊಟ್ಟು, ಎರಡನೆಯ ಮದುವೆ ಮಾಡಿಕೊಂಡಿದ್ದರು. ಆಕೆಯೇ ಶಂಕರರ ತಾಯಿ ಲಕ್ಷ್ಮೀನರಸಮ್ಮನವರು.

ಕೋರ್ಟಿನಲ್ಲಿ ಶಾಸ್ತ್ರಿಗಳು ಶಿರಸ್ತೇದಾರರಾಗಿ ಕೆಲಸ ಮಾಡುತ್ತಿದ್ದರು. ಸಂಬಳ ಕಡಿಮೆ ದೊಡ್ಡ ಸಂಸಾರ. ಈ ಕುಟುಂಬದ ಮೂರನೆಯ ಮಗುವಾಗಿ ಹುಟ್ಟಿದ ಶಂಕರರಿಗೆ ಐದು ಜನ ಸೋದರರು ಮತ್ತು ಐವರು ಸೋದರಿಯರು. ಬಾಲ್ಯದಿಂದಲೂ ಶಂಕರರ ಪ್ರತಿಭೆ ಪ್ರಕಾಶಿಸಿತ್ತು. ಲೋಯರ್ ಸೆಕೆಂಡರಿ ಪರೀಕ್ಷೆಯಲ್ಲಿ ಒಂಬತ್ತನೆಯ ಸ್ಥಾನ ಪಡೆದ ಹಿರಿಮೆ ಅವರದು. ನ್ಯಾಷನಲ್ ಹೈಸ್ಕೂಲಿನಲ್ಲಿ ವಿದ್ಯಾಭ್ಯಾಸವನ್ನು ಮುಂದುವರಿಸಿದ ಶಂಕರರಿಗೆ ಸಂಪದ್ಗಿರಿರಾಯರು ಮತ್ತು ನಿಟ್ಟೂರು ಶ್ರೀನಿವಾಸರಾಯರಂತಹ ಗುರುಗಳಿಂದ ಪ್ರೋತ್ಸಾಹ ಸಿಕ್ಕಿತು.

ಶಂಕರರಿಗೆ ವಿಜ್ಞಾನಕ್ಕೆ ಸಂಬಂಧಿಸಿದ ವಿಷಯಗಳಲ್ಲಿ ಬಹಳ ಆಸಕ್ತಿ. ಚಿಕ್ಕವಯಸ್ಸಿಗೆ ಹೈಸ್ಕೂಲನ್ನು ಮುಗಿಸಿ ಬೆಂಗಳೂರಿನ ಸರ್ಕಾರಿ ಇಂಟರ್‌ಮೀಡಿಯಟ್ ಕಾಲೇಜ್ ಸೇರಿಕೊಂಡರು. ಹೈಸ್ಕೂಲಿನ ಯಶಸ್ಸು ಕಾಲೇಜಿನಲ್ಲಿ ದೊರೆಯಲಿಲ್ಲ. ಇಂಟರ್‌ಮೀಡಿಯಟ್ ಪರೀಕ್ಷೆ ಮುಗಿಸಿಕೊಂದು ಬಿ.ಎಸ್ಸಿ. ಪದವಿಗೆಂದು ದಾಖಲಾದರು. ಸಮಯಕ್ಕೆ ಸರಿಯಾಗಿ ಫೀ ಕಟ್ಟಲಾಗದೆ, ಸ್ವಾಭಿಮಾನಿ ಶಂಕರರು ತರಗತಿಗೆ ಹೋಗಲಿಲ್ಲ.

ವಿದ್ಯಾಭ್ಯಾಸ ಮುಂದುವರಿಸಲಾಗದಿದ್ದಾಗ, ತಮ್ಮ ತಂದೆಯ ಸಲಹೆ ಮತ್ತು ಸಹಾಯದಿಂದ ಶಂಕರರು ಕೋರ್ಟಿನಲ್ಲಿ ಗುಮಾಸ್ತರಾಗಿ ಕೆಲಸ ಹಿಡಿದರು. ಕೆಲವೇ ವರ್ಷಗಳಲ್ಲಿ ಶಿವಮೊಗ್ಗ, ಕೊಪ್ಪ, ಅರಸೀಕೆರೆ ಮುಂತಾದ ಊರುಗಳಿಗೆ ವರ್ಗ, ಕಡಿಮೆ ಸಂಬಳ.

ಶಂಕರ ಅವರಿಗೆ ಶಿವಮೊಗ್ಗದಲ್ಲಿ ಗೆಳೆಯ ಶಂಕರಪ್ಪನವರ ಮೂಲಕ ಸುಂದರೇಶ್ವರರ ಸ್ನೇಹ ಸಿಕ್ಕಿದ್ದು ಬಹಳ ಸ್ವಾಭಾವಿಕ ಎಂದೇ ಹೇಳಬೇಕು. ಇಬ್ಬರಿಗೂ ಸಾಹಿತ್ಯದಲ್ಲಿ ಬಹಳ

ಅಭಿರುಚಿ. ಈ ರೀತಿ ಆದರ್ಶಗಳ ಮತ್ತು ಸಾಹಿತ್ಯೋಪಾಸನೆಯ ತಳಪಾಯದ ಮೇಲೆ ಶಂಕರ-ಸುಂದರೇಶ್ವರರ ಸ್ನೇಹ ಬೆಳೆಯಿತು. 1940ರಲ್ಲಿ ಶಂಕರ ಅವರು, ಸುಂದರೇಶ್ವರರ ಹದಿನಾಲ್ಕು ವರ್ಷದ ತಂಗಿ, ವೆಂಕಟಲಕ್ಷ್ಮಿಯವರನ್ನು ಮದುವೆ ಮಾಡಿಕೊಂಡರು.

ಚಿಕ್ಕಂದಿನಿಂದ ಜಾತೀಯತೆ, ಅಸ್ಪೃಶ್ಯತೆ, ವರ್ಗ ಭೇದ-ಇಂತಹ ಸಾಂಪ್ರದಾಯಿಕ ಅಂಧಪದ್ಧತಿಗಳನ್ನು ಪ್ರಶ್ನಿಸುವುದು ಶಂಕರರ ಸ್ವಭಾವ. ಮಾರ್ಕ್ಸ್, ಹೆಗೆಲ್ ಅವರ ಬರಹಗಳನ್ನು ಓದಿ, ಗ್ರಹಿಸಿ, ಪ್ರಗತಿಪರ ಮೌಲ್ಯಗಳಿಂದ ಶಂಕರರು ಪ್ರಭಾವಿತರಾಗಿದ್ದರು.

ವಿಚಾರಶೀಲರಾದ ಶಂಕರರು ವಾಮಪಂಥೀಯರಾದರೂ ಗಾಂಧೀಜಿಯವರ ಸ್ವಾತಂತ್ರ್ಯ ಚಳುವಳಿಯ ಸಂದರ್ಭದಲ್ಲಿ ಕಮ್ಯೂನಿಸ್ಟರ ನಿಲುವನ್ನು ಖಂಡಿಸಿ ಬ್ರಿಟಿಷ್ ಸರ್ಕಾರದ ವಿರುದ್ಧ ಸೆಣೆಸಾಡಿದರು.

ಬಿಸಿ ರಕ್ತದ ಶಂಕರರಿಗೆ ಅಹಿಂಸಾತ್ಮಕ ಚಳವಳಿಯಲ್ಲಿ ವಿಶ್ವಾಸ ಕಮ್ಮಿಯಾಗಿತ್ತು. ಕೋರ್ಟಿನ ಕೆಲಸಕ್ಕೆ ರಾಜಿನಾಮೆ ಕೊಟ್ಟರು. ಇವರ ಭಾವಮೈದುನ ಕೃಷ್ಣಮೂರ್ತಿ ಬೆಂಗಳೂರಿನ ಹಿಂದೂಸ್ತಾನ್ ಏರ್‌ಕ್ರಾಫ್ಟ್ ಕಂಪನಿಯಲ್ಲಿ ಕೆಲಸದಲ್ಲಿದ್ದರು. ಅವರೂ ತಮ್ಮ ಕೆಲಸಕ್ಕೆ ತಿಲಾಂಜಲಿ ಕೊಟ್ಟು, ಶಂಕರರೊಂದಿಗೆ ಸ್ವಾತಂತ್ರ್ಯ ಸಂಗ್ರಾಮಕ್ಕೆ ಇಳಿದರು. ಪೋಲೀಸರಿಂದ ಸೆರೆಯನ್ನು ತಪ್ಪಿಸಿಕೊಳ್ಳಲು ಗುಪ್ತಜೀವಿಗಳಾದರು. ಕೋಲಾರದ ಚಿಕ್ಕ ಹಳ್ಳಿಗಳಲ್ಲಿ ದೂರದ ಸಂಬಂಧಿಗಳ ಮನೆಗಳಲ್ಲಿ ಅಡಗಿದ್ದು, ಟೆಲಿಫೋನ್ ಮತ್ತು ಟೆಲಿಗ್ರಾಫ್ ತಂತಿಗಳನ್ನು ಕತ್ತರಿಸುವುದು. ಸ್ವಾತಂತ್ರ್ಯದ ಚಳವಳಿಯ ಪ್ರಚೋದನಕಾರಿ ಕರಪತ್ರಗಳನ್ನು ಬರೆದು, ಪ್ರಕಟಿಸುವುದು ಮತ್ತು ಹಂಚುವುದು ಇವೇ ಅವರ ಚಟುವಟಿಕೆಗಳು. ಹಲವಾರು ಬಾರಿ ಅವರಿಗೆ, ಮುಂದೆ ಪ್ರಮುಖ ರಾಜಕಾರಣಿಯಾದ ಕೆ.ಸಿ.ರೆಡ್ಡಿ ಮತ್ತು ಎಂ.ಪಿ.ಎಲ್. ಶಾಸ್ತ್ರಿ ಅಂತಹ ಮುಖಂಡರ ಮನೆಗಳಲ್ಲಿ ಆಶ್ರಯ ಸಿಗುತ್ತಿತ್ತು.

ಸ್ವಾತಂತ್ರ್ಯ ಚಳವಳಿ ಸಾಗಿದಂತೆ ಶಂಕರರ ವೈಯಕ್ತಿಕ ಜೀವನದಲ್ಲೂ ಕೆಲವು ಮುಖ್ಯವಾದ ಬೆಳವಣಿಗೆಗಳಾದವು. 1942ರಲ್ಲಿ ಶಂಕರ ಮತ್ತು ವೆಂಕಟಲಕ್ಷ್ಮಿಯವರಿಗೆ ಮೊದಲ ಮಗುವಾಗಿ ಶ್ರೀನಾಥ ಜನಿಸಿದ. ತಂದೆಯಾದ ಶಂಕರ ಅವರಿಗೆ ತಮ್ಮ ಮತ್ತು ಕುಟುಂಬದ ಭವಿಷ್ಯದ ಬಗ್ಗೆ ಗಮನ ಹರಿಯಿತು. ಆ ಹಣವನ್ನೇ ಬಂಡವಾಳವಾಗಿ ಹೂಡಿ ಮುಂಬಯಿನಲ್ಲಿ ತಮ್ಮ ಭವಿಷ್ಯವನ್ನು ಅರಿಸಿಕೊಂಡು ಹೊರಟರು.

ಶಂಕರ 1943ರಲ್ಲಿ ಮುಂಬಯಿ ಸೇರಿದರು. ಅಲ್ಲಿ ಅವರಿಗೆ ಒದಗಿದ ಮೊದಲ ಕೆಲಸ Textile Commissionerರ ಕಛೇರಿಯಲ್ಲಿ ಕಾರಕೂನರ ಕೆಲಸ. ಶಂಕರರ ಸ್ವತಂತ್ರ ಮನೋಭಾವ ಮತ್ತು ಅವರ ಮೂಗಿನ ತುದಿಯ ಕೋಪದ ಕಾರಣದಿಂದ ಆ ಕಛೇರಿಯಲ್ಲಿ ಅವರಿಗೆ ಅಂತಹ ಭವ್ಯವಾದ ಭವಿಷ್ಯ ಕಾಣಬರಲಿಲ್ಲ. ಅದೇ ಕಛೇರಿಯಲ್ಲಿ ಕೆಲಸ ಮಾಡುತ್ತಿದ್ದ ಕನ್ನಡದ ಸಹೋದ್ಯೋಗಿಗಳ ಸಲಹೆಯ ಮೇರೆಗೆ ಶಂಕರರು ಪತ್ರಿಕೋದ್ಯಮದತ್ತ ತಮ್ಮ ದೃಷ್ಟಿ ಹರಿಸಿದರು.

ಪತ್ರಿಕೋದ್ಯಮದಲ್ಲಿ ಶಂಕರ ಉದ್ಯೋಗಾರ್ಥಿಯಾಗಿ ಮುಂಬೈಯಿಂದ ಪ್ರಕಟವಾಗುತ್ತಿದ್ದ ಇಂಡಿಯನ್ ಎಕ್ಸ್‌ಪ್ರೆಸ್ ದೈನಂದಿಕದಲ್ಲಿ ಸುಮಾರು ಎರಡು ವರ್ಷಗಳ ಕಾಲ ತರಬೇತಿ ಪಡೆದರು. ನಂತರ, 1946ರಲ್ಲಿ ಅಲ್ಲಿಯೇ ಅವರಿಗೆ ಉಪಸಂಪಾದಕರ ಕೆಲಸ ಸಿಕ್ಕಿತು. ತಮ್ಮ ಹೊಸ ವೃತ್ತಿಯಲ್ಲಿ ಶಂಕರರು ಸಾಕಷ್ಟು ಸಂತೋಷ ಕಂಡಿದ್ದರು. ಆದರೆ, ಅವರ ಆರ್ಥಿಕ ಸ್ಥಿತಿಯಲ್ಲಿ ಮಾತ್ರ ಹೆಚ್ಚಿನ ವ್ಯತ್ಯಾಸ ಕಂಡುಬರಲಿಲ್ಲ. ಈ ವೇಳೆಗೆ ಶಂಕರರ ಕುಟುಂಬ ಸಹ ಬೆಳೆಯತೊಡಗಿತ್ತು. ಮೊದಲ ಮಗಳು ಛಾಯಾ ಹುಟ್ಟಿದ್ದು 1944ರಲ್ಲಿ. 1954ರ ವೇಳೆಗೆ ಪ್ರೇಮ, ವಿದ್ಯಾ, ಮಾಯಾ ಮತ್ತು ನಾಗರಾಜ ಸೇರಿದಂತೆ ಆರು ಮಕ್ಕಳ ಕುಟುಂಬವಾಗಿತ್ತು.

**ಮೊದಲ ಬಂಗಾಳಿ ಅನುವಾದಗಳು**

ಇಂತಹ ಪರಿಸ್ಥಿತಿಯಲ್ಲಿ, 1952ರಲ್ಲಿ ಶಂಕರ ತಮ್ಮ ಮೊಟ್ಟ ಮೊದಲನೆಯ ಅನುವಾದವನ್ನು ಪ್ರಾರಂಭಿಸಿದರು. ಗುರುದೇವ ರವೀಂದ್ರನಾಥ ಠಾಕೂರರ ಬಂಗಾಲಿ ಕೃತಿ 'ಛೋಕರ್ ಬಾಲಿ' ಎಂಬ ಕಥಾ ಸಂಗ್ರಹವೇ ಅವರ ಪ್ರಪ್ರಥಮ ಅನುವಾದ. ಬಂಗಾಲಿಯಿಂದ ಕನ್ನಡಕ್ಕೆ ನೇರವಾಗಿ ಅನುವಾದ ಮಾಡಿದ ಕೃತಿಗಳು ಯಾವುವೂ ಕಂಡುಬಂದಿರಲಿಲ್ಲ. ಈ ವಿಶಿಷ್ಟವಾದ ಅಂಶವನ್ನು ಗಮನಿಸಿಯೇ ಶಂಕರರು ನೇರವಾಗಿ ಅನುವಾದಿಸುವ ಸಾಹಸಕ್ಕೆ ಧುಮುಕಿದರು. ಅದು ಪುಸ್ತಕವಾಗಿ ಹೊರಬರಲು ಮೂರು ವರ್ಷ ಹಿಡಿಯಿತು.

ಶಂಕರರ ಹಿರಿಯಕ್ಕ ಮತ್ತು ಭಾವನವರು ಕಲ್ಕತ್ತೆಯಲ್ಲಿ ಇರುತ್ತಿದ್ದರು. ಎರಡನೆಯ ಮಹಾಯುದ್ಧದ ಸಿದ್ಧತೆ ಭರದಿಂದ ಸಾಗಿತ್ತು. 1942ರ ವೇಳೆಗೆ ಜಪಾನಿಯರು ಬರ್ಮಾ ದೇಶವನ್ನು ಆಕ್ರಮಿಸಿದ್ದರು. ಇನ್ನೇನು ಕಲ್ಕತ್ತೆಯ ಕಡೆ ಧಾವಿಸಿ ಬರುವರೆಂಬ ಭಯ ಭಾರತದಲ್ಲೆಲ್ಲಾ ಹರಡಿತ್ತು. ಹೆದರಿದ ಶಂಕರರ ತಂದೆತಾಯಿ, ತಮ್ಮ ಮಗಳನ್ನೂ ಮೊಮ್ಮಕ್ಕಳನ್ನೂ ಬೆಂಗಳೂರಿಗೆ ಕರೆದು ತಾ ಎಂದು ಮಗ ಶಂಕರರನ್ನು ಕಲ್ಕತ್ತೆಗೆ ಕಳುಹಿಸಿದರು.

ಕಲ್ಕತ್ತೆಯನ್ನು ತಲುಪಿದ ಶಂಕರರಿಗೆ ಹಿಂದಿರುಗಲು ಮೂರು ತಿಂಗಳಾದವು. ಶಂಕರರು ಬಂಗಾಲಿ ಭಾಷೆಯನ್ನು ಕಲಿಯಲು ಆರಂಭಿಸಿದರು. ಶಂಕರರ ಅನುವಾದಕ ಜೀವನದ ಮೊತ್ತಮೊದಲನೆಯ ಹೆಜ್ಜೆಯನ್ನು ಇಲ್ಲಿ ಕಾಣಬಹುದು. ಶಂಕರರ ಇಬ್ಬರು ಪುಟ್ಟ ಸೋದರ ಸೊಸೆಯರು – ನಾಗಲಕ್ಷ್ಮಿ ಮತ್ತು ಸುಂದರಿ ಪ್ರಾಥಮಿಕ ಶಾಲೆಯಲ್ಲಿ ಕಲಿಯುತ್ತಿದ್ದರು. ಅವರಿಬ್ಬರು ಬಂಗಾಲಿ ಕಲಿಯುವುದರಲ್ಲಿ ಬಹಳ ಸಹಾಯ ಮಾಡಿದರೆಂದು ಶಂಕರರು ಸ್ಮರಿಸುತ್ತಿದ್ದರು!

ತಮ್ಮ ಆರನೆಯ ಮಗುವಿಗೆ ಜನ್ಮವಿತ್ತ ವೆಂಕಟಲಕ್ಷ್ಮಿಯವರ ಆರೋಗ್ಯ ಕೆಡಲಾರಂಭಿಸಿತ್ತು. ಮೆನೆಂಜೈಟಿಸ್ ವ್ಯಾಧಿ ಮೆದುಳಿಗೆ ಹತ್ತಿ ಅರವತ್ತು ವರ್ಷಗಳ ಹಿಂದೆ, ಸಮಂಜಸವಾದ ಔಷಧಿ-ಚಿಕಿತ್ಸೆಯಿಲ್ಲದೆ ಬಾಣಂತಿ ವೆಂಕಟಲಕ್ಷ್ಮಿಯವರು ಅದಕ್ಕೆ ಬಲಿಯಾದರು. ಆಗ ಅವರ ವಯಸ್ಸು ಕೇವಲ 32 ವರ್ಷಗಳು. ಮುಂಬೈನಲ್ಲಿ ಪತ್ನಿ ತೀರಿಕೊಂಡ ಕೆಲವೇ ದಿನಗಳಲ್ಲಿ ಶಂಕರರ ಕುಟುಂಬ ಭಿನ್ನವಾಯಿತು. ಚಿಕ್ಕ ಮಕ್ಕಳನ್ನು ನೋಡಿಕೊಳ್ಳಲು, ಬೆಳೆಸಲು ಬಂಧುಗಳು ಮುಂದಾದರು.

ಶಂಕರರ ಕನ್ನಡ ಅನುವಾದ, 'ವಿನೋದಿನಿ'ಯನ್ನು 1955ರಲ್ಲಿ ಮೈಸೂರಿನ ಕಾವ್ಯಾಲಯದ ದಿವಂಗತ ಕೂಡಲಿ ಚಿದಂಬರಂ ಅವರು ಪ್ರಕಟಿಸಿದರು. ಮುಂದೆ ಎರಡು–ಮೂರು ದಶಕಗಳ ಕಾಲ ಶಂಕರರನ್ನು ಪ್ರೋತ್ಸಾಹಿಸಿ, ಅವರು ಅನೇಕ ಅನುವಾದಗಳನ್ನು ಹೊರತಂದರು.

'ವಿನೋದಿನಿ' ಪ್ರಕಟಗೊಂಡ ಕೆಲವೇ ತಿಂಗಳುಗಳ ನಂತರ ಪತ್ರಿಕೋದ್ಯಮದ ಕೆಲಸಕ್ಕೆ ರಾಜೀನಾಮೆ ಕೊಟ್ಟು 1957ರ ಪೂರ್ವಭಾಗದಲ್ಲಿ ಶಂಕರರು ಬೆಂಗಳೂರಿಗೆ ಬಂದುಬಿಟ್ಟರು.

1958ರಲ್ಲಿ ಮುಂಬೈನ Free Press Journalನ ಶಿವರಾಮ್ ಅವರು, ತಮ್ಮ ಪತ್ರಿಕೆಯಲ್ಲಿ ಕೆಲಸ ಮಾಡಲು ಶಂಕರರನ್ನು ಮುಂಬೈಗೆ ಆಹ್ವಾನಿಸಿದರು. ಪತ್ರಿಕೋದ್ಯಮಕ್ಕೆ ಮತ್ತೆ ಹಿಂತಿರುಗಿದ ಶಂಕರರು ಅದೇ ಪತ್ರಿಕೆಯಲ್ಲಿ ಹದಿನಾಲ್ಕು ವರ್ಷಗಳ ಕಾಲ ಕೆಲಸ ಮಾಡಿ, 1972ರಲ್ಲಿ ಅತಿ ಉನ್ನತ ಹುದ್ದೆಯಲ್ಲಿ ನಿವೃತ್ತರಾದರು. ಆ ಕಾಲದಲ್ಲಿ ಅವರು ಬರೆಯುತ್ತಿದ್ದ Easy Chair ಅಂಕಣ ಬರಹಗಳು ಮತ್ತು ಅವರ ವೈಚಾರಿಕ ಸಂಪಾದಕೀಯಗಳನ್ನು ಸಹಸ್ರಾರು ಓದುಗರು ಮತ್ತು ಸಹೋದ್ಯೋಗಿಗಳು ಮೆಚ್ಚುತ್ತಿದ್ದರು.

ಮುಂಬೈಗೆ ಹಿಂತಿರುಗಿದ ನಂತರ ಶಂಕರರ ಅನುವಾದಕನ ಜೀವನ ಹಾಗೂ ವೈಯಕ್ತಿಕ ಜೀವನ ಪುನಶ್ಚೇತನ ಪಡೆದವು. ಈ ಸಮಯದಲ್ಲಿ ಅನೇಕ ಪ್ರಮುಖ ಬಂಗಾಳಿ ಕೃತಿಗಳನ್ನು ಕನ್ನಡಕ್ಕೆ ಅನುವಾದಿಸಿದರು. ರವೀಂದ್ರನಾಥ ಠಾಕೂರರ ಶುಭದಾ, ಯೋಗಾ–ಯೋಗ, ರವೀಂದ್ರ ಕಥಾಮಂಜರಿ (3 ಸಂಪುಟಗಳು). ಅದರೊಂದಿಗೆ, ವಿಸರ್ಜನೆ ಮತ್ತು ಅಂಚೆಮನೆ ಎಂಬ ಎರಡು ನಾಟಕಗಳನ್ನೂ ಅನುವಾದಿಸಿದರು. ಶಂಕರರ ಅನುವಾದಗಳು ಕೇವಲ ರವೀಂದ್ರರ ರಚನೆಗಳಿಗೆ ಸೀಮಿತವಾಗಿರಲಿಲ್ಲ. ಶರತ್‌ಚಂದ್ರರ ರಜನಿ, ಯುಗಳಾಂಗುರಿಯ ಮತ್ತು ರಾಧಾರಾಣಿ ಎಂಬ ಕೃತಿಗಳನ್ನೂ ಬಿರೇನ್ ದಾಸ್ ಅವರ ಇನ್ನೂ ದೂರದ ದಾರಿ ಮತ್ತು ಮಾಯಾ, ಬಿಮಲ್ ಮಿತ್ರರ ಸಾಹೇಬ್‌ಬೀಬಿ ಮತ್ತು ಗುಲಾಮ ಕೃತಿಗಳನ್ನು ನೆನೆಸಿಕೊಳ್ಳಬಹುದು.

ಪತ್ರಿಕೋದ್ಯಮದಿಂದ ನಿವೃತ್ತರಾದಾಗ ಶಂಕರರು ಮಲಯಾಳಂ ಭಾಷೆಯನ್ನು ಕಲಿಯುತ್ತಿದ್ದರು. ಸ್ವಲ್ಪ ಸಮಯದಲ್ಲೇ ಕೇರಳದ ಮಾರ್ಕ್ಸ್‌ವಾದಿ ಗಣ್ಯ ನಂಬೂದಿರಿಪಾಡ್ ಅವರ ಆತ್ಮಚರಿತ್ರೆಯನ್ನು ಕನ್ನಡಕ್ಕೆ ಅನುವಾದಿಸಿದರು. ಇದು ಶಂಕರರು ಮಲಯಾಳಂ ಭಾಷೆಯಿಂದ ಕನ್ನಡಕ್ಕೆ ಅನುವಾದಿಸಿದ ಏಕೈಕ ಕೃತಿ.

ಶಂಕರರ ನಿವೃತ್ತ ಜೀವನದ ಈ ಘಟ್ಟದ ಕೊಡುಗೆಗಳ ಪೈಕಿ ಅಪರಾಜಿತ ಮತ್ತು ಮಹಾ ಯಾತ್ರಿಕ (ವಿಭೂತಿ ಭೂಷಣ ಬಂದೋಪಾಧ್ಯಾಯರ ಅಪರಾಜಿತೊ ಮತು ಪಥೇರ್ ಪಾಂಚಾಲಿ), ಬೊಂಬೆ ಕುಣಿತದ ಕಥಾಪ್ರಸಂಗ (ಮೂಲ: ಮಾಣಿಕ್ ಬಂದೋಪಾಧ್ಯಾಯರ ಪುತುಲ್ ನಾಚೆರಿತಿ ಕೊಥ), ನಿದ್ದೆಗೆಟ್ಟವರು (ಮೂಲ: ಸತಿನಾಥ್ ಬಹ್ದೂರಿಯವರ ಜಾಗರಿ) ಸ್ಮರಿಸಿಕೊಳ್ಳುವುದು ಮುಖ್ಯ.

1978ರಲ್ಲಿ ಶಂಕರರು ತಮ್ಮ ಬಿಡಾರವನ್ನು ಬೆಂಗಳೂರಿಗೆ ಬದಲಾಯಿಸಿದರು. ಮೂರು ವರ್ಷಗಳ ನಂತರ 1981ರಿಂದ ಸುಮಾರು ಆರು ವರ್ಷಗಳ ಕಾಲ ಧಾರವಾಡದಲ್ಲಿ ನೆಲೆಸಿ ಅಲ್ಲಿನ ಸಾಹಿತ್ಯ ಪ್ರೇಮಿಗಳೊಂದಿಗೆ ಬಹಳ ಸಂತೋಷವಾಗಿ ಕಾಲ ಕಳೆದರು.

ಶಂಕರರು ಅಮೆರಿಕೆಗೆ ಪ್ರಯಾಣ ಮಾಡಿದರು. ಅಲ್ಲಿ ನೆಲೆಸಿದ್ದ ತಮ್ಮ ಇಬ್ಬರು ಹೆಣ್ಣುಮಕ್ಕಳು, ಅಳಿಯಂದಿರು ಮತ್ತು ಮೊಮ್ಮಕ್ಕಳ ಆಹ್ವಾನ ಹಾಗೂ ಹೊಸ ದೇಶ, ಹೊಸ ಕಲಿಕೆ, ತಮ್ಮ ನೆಚ್ಚಿನ ಎಮರ್ಸನ್, ಹೆಮಿಂಗ್ವೇ, ಪಾಲ್ ರೋಬ್ಸನ್ ಅವರಂತಹ ಲೇಖಕರ ಬೀಡು – ಈ ಆಕರ್ಷಣೆಗಳು ಶಂಕರರನ್ನು ಅಮೆರಿಕೆಯತ್ತ ಸೆಳೆದವು.

ವಯಸ್ಸಾದಂತೆ ಶಂಕರರ ಆರೋಗ್ಯ ತೀವ್ರವಾಗಿ ಕೆಡಲಾರಂಭಿಸಿತ್ತು. ಒಂಟಿಯಾಗಿ ಜೀವನ ನಡೆಸುವುದು ಬಹಳ ಕಷ್ಟವಾಗತೊಡಗಿತು. ಎಂಬತ್ತು ವರ್ಷಗಳಾಗುವ ವೇಳೆಗೆ, ಮಕ್ಕಳ ಪ್ರೇರಣೆಗೆ ಓಗೊಟ್ಟು ಮುಂಬೈಗೆ ಹಿಂತಿರುಗಿದರು. ಮಗ ಶ್ರೀನಾಥ ಮತ್ತು ಸೊಸೆ ಪ್ರಮೀಳ; ಮಗಳು ಪ್ರೇಮಾ ಮತ್ತು ಅಳಿಯ ಸುರೇಂದ್ರ ಮತ್ತು ಮೊಮ್ಮಕ್ಕಳ ಅಕ್ಕರೆಯ ಜೊತೆ ಕೊನೆಯ ವರ್ಷಗಳನ್ನು ಕಳೆದರು.

ಅದೇ ತೀವ್ರ ಭಾವನೆಯ ಪರಿಣಾಮವಾಗಿ ಶಂಕರರಿಗೆ ಜನಸಾಮಾನ್ಯರ ಬಗ್ಗೆ ಅಚಲವಾದ ಅನುಕಂಪ ಬೆಳೆಯಿತು. ಸಾಹಿತ್ಯದಿಂದ ಕೇವಲ ಸೌಂದರ್ಯವನ್ನೇ ಅಲ್ಲದೆ ಮಾನವೀಯತೆಯನ್ನು ಕಾಣಬಯಸಿದವರು. ಒಳ್ಳೆಯ ಸಾಹಿತ್ಯ ಒಬ್ಬ ವ್ಯಕ್ತಿಯ ಕೇವಲ ಬೌದ್ಧಿಕ ಬೆಳವಣಿಗೆಗೆ ಮತ್ತು ಮನೋರಂಜನೆಗೆ ಸೀಮಿತವಾಗದೆ, ಸಮಾಜದ ಬೆಳವಣಿಗೆಯ ಜವಾಬ್ದಾರಿಯನ್ನು ವಹಿಸಬೇಕು ಎಂಬುದು ಅವರ ವಾದ. ಸಾಹಿತ್ಯದಲ್ಲಿ ಅನವಶ್ಯಕ ಅಶ್ಲೀಲತೆ, ಹಿಂಸಾಚಾರ, ತುಚ್ಛವಾದ ಹಾಸ್ಯದ ಬಗ್ಗೆ ಅವರಿಗೆ ತೀವ್ರವಾದ ತಾತ್ಸಾರ. ಒಳ್ಳೆಯ ಸಾಹಿತ್ಯ ಎಲ್ಲರಿಗೂ ಸುಲಭವಾಗಿ ಸಿಗಬೇಕು. ಅನುವಾದದ ಮುಖಾಂತರ ದೂರದ ಭಾಷೆಗಳ, ದೂರದ ದೇಶಗಳ ಸಾಹಿತ್ಯವನ್ನು ಜನಸಾಮಾನ್ಯರಿಗೆ ತಲುಪಿಸಬಹುದು ಎಂಬುದು ಅವರ ನಂಬಿಕೆ. ಈ ರೀತಿ ಜ್ಞಾನಾರ್ಜನೆಯ ಮೂಲಕ ಮನೋವಿಕಾಸವನ್ನು ಸಾಧಿಸಬಹುದು ಎಂಬ ವಿಶ್ವಾಸ.

1997ರ ವೇಳೆಗೆ ಅವರ ಖಾಯಿಲೆ ಬಹಳ ಉಲ್ಬಣಾವಸ್ಥೆಯಲ್ಲಿದ್ದು ಬಹಳ ಮರುಗುತ್ತಿದ್ದರು. ತೀವ್ರವಾದ ನೋವು, ಕ್ಷೀಣವಾದ ಜ್ಞಾಪಕಶಕ್ತಿ. ಆ ಅವಸ್ಥೆಯಲ್ಲೂ ಕ್ಷಣಮಾತ್ರ ಕಂಡುಬಂದಿತು ಅವರ ಮಗುವಿನ ಕಿರುನಗೆ ಕಾರಣ? ಹಲವು ವರ್ಷಗಳ ಹಿಂದೆ ಶಂಕರರು ವಿಭೂತಿ ಭೂಷಣ ಬಂದೋಪಾಧ್ಯಾಯರ 'ಅಪರಾಜಿತೋ' ಕಾದಂಬರಿಯನ್ನು ಅನುವಾದಿಸಿ ಅದರ ಹಸ್ತಪ್ರತಿಯನ್ನು ಪ್ರಕಾಶಕರಿಗೆ ಕಳುಹಿಸಿದ್ದರು. ಅದು ಕಳೆದುಹೋಗಿತ್ತು. ಶಂಕರರ ಕಡೆಯ ದಿನಗಳ ವೇಳೆಗೆ ಹಸ್ತಪ್ರತಿ ಸಿಕ್ಕಿ ಪುಸ್ತಕ ಹೊರಬಂದಿತ್ತು. ಹಾಸಿಗೆಯ ಬದಿಯಲ್ಲಿ ನಿಂತಂತೆ ಅವರ ಅರಳಿದ ಮುಖ, ಮುಗುಳ್ನಗೆ ಕಂಡವು. 'ಅಪರಾಜಿತ! ನೋಡು!!' ತಮ್ಮ ಕೊನೆಯ ಅನುವಾದದ ಕೃತಿಯ ಪ್ರತಿಯನ್ನು ಹೆಮ್ಮೆಯಿಂದ ತೋರಿಸಿ, ಹೇಳಿದರು. 'ನೀನು ಓದಿ, ನಿನ್ನ ಅಭಿಪ್ರಾಯ ತಿಳಿಸು'.

1997ರ ಸೆಪ್ಟೆಂಬರ್ 2ರಂದು ತೀರಿಕೊಂಡಾಗ ಅಹೋಬಲ ಶಂಕರರ ವಯಸ್ಸು 84. ಕನ್ನಡ ಭಾಷೆಯಲ್ಲಿಯೇ ಒಬ್ಬ ಅಪ್ರತಿಮ ಅನುವಾದಕರಾಗಿ ಅವರು ಲಕ್ಷಾಂತರ ಸಾಹಿತ್ಯಾಭಿಮಾನಿಗಳ ಕೃತಜ್ಞತೆಗೆ ಪಾತ್ರರಾಗಿದ್ದಾರೆ.

ರವೀಂದ್ರರ ಸಮಗ್ರ ಕತೆಗಳನ್ನು ಕನ್ನಡಕ್ಕೆ ಸಂಪುಟಗಳ ಮಾಲೆಯಲ್ಲಿ ಅನುವಾದಿಸಿ ಒಂದು ಪ್ರಕಾರದ ರವೀಂದ್ರ ಸಾಹಿತ್ಯದ ಕೊರತೆಯನ್ನು ಪೂರ್ಣವಾಗಿ ನೀಗಿಸಿದವರು. 'ರವೀಂದ್ರ ಕಥಾಮಂಜರಿ' ಹೆಸರಿನ ಮೂರು ಸಂಪುಟಗಳೇ ಅವು. 'ರಕ್ತಕರವೀರ', 'ಬಲಿದಾನ', 'ಅಂಚೆಮನೆ', (ಕಾದಂಬರಿ) ಮತ್ತು 'ನನ್ನ ಬಾಲ್ಯದ ದಿನಗಳು' (ಆತ್ಮಚರಿತ್ರೆ) – ಇವರು ಅನುವಾದಿಸಿರುವ ಇನ್ನಿತರ ರವೀದ್ರರ ಕೃತಿಗಳು. ಬಂಕಿಮಚಂದ್ರ ಇತ್ಯಾದಿ ಬಂಗಾಳಿ ಸಾಹಿತ್ಯವನ್ನು ಕನ್ನಡಕ್ಕೆ ತರುವಲ್ಲಿ ಹೆಚ್ಚು ಪರಿಶ್ರಮಿಸಿದವರು. ಶರಶ್ಚಂದ್ರರ 'ಹಳ್ಳಿಯ ಸಮಾಜ' ಕಾದಂಬರಿಯನ್ನು ಅನುವಾದಿಸಿದ್ದಾರೆ. ಬಂಗಾಳ ದೇಶ, ಭಾಷೆ ಹಾಗೂ ರವೀಂದ್ರರೊಡನೆ ಒಡನಾಟ ಇಟ್ಟುಕೊಂಡಿದ್ದವರು; ಹಾಗಿದ್ದೂ ಕತೆಗಳ ಅನುವಾದ ಸಂದರ್ಭದಲ್ಲೂ ಚೆನ್ನಾಗಿ ಬಂಗಾಳಿ ಭಾಷೆ – ಸಾಹಿತ್ಯ ಬಲ್ಲ ಕೂಡಲಿ ಚಿದಂಬರಂ ಅವರನ್ನು ಸಹಕಾರಕ್ಕೆ ತೆಗೆದುಕೊಂಡು ಯಥಾವತ್ತಾಗಿ ಅನುವಾದಿಸುವ ಪ್ರಯತ್ನ ಆದರ್ಶ ಭಾಷಾಂತರಕಾರನ ಲಕ್ಷಣವೇ ಸರಿ. ಬಹುವಾಗಿ ಇವರು ಕನ್ನಡದ ಸಹಜತೆಯನ್ನು ಕಾಯ್ದುಕೊಂಡಿದ್ದಾರೆ; ಸಾಂದರ್ಭಿಕವಾಗಿ ಬಂಗಾಳಿ ಜಾಯಮಾನವನ್ನೂ ಬಿಂಬಿಸುವ ಪ್ರಯತ್ನ ಮಾಡಲಾಗಿದೆ. ಉದಾರಣೆಗೆ ಬಂಗಾಳಿ ಪರಿಸರದಲ್ಲಿ ಗಂಡ–ಹೆಂಡತಿಯರ ನಡುವೆ ಏಕವಚನ ಸರ್ವೇಸಾಮಾನ್ಯವಾದರೂ, ಬಹುವಚನ ಕನ್ನಡದ ಸಂಸ್ಕೃತಿಯ ಸಲ್ಲಕ್ಷಣ ಆಗಿರುವುದರಿಂದ 'ಅವರು ನೀನೇ" ಎಂಬಂತಹ ಅಭಿವ್ಯಕ್ತಿಯಲ್ಲಿ ಎರಡೂ ರೀತಿಯ ಶೈಲಿಯನ್ನು ಅಳವಡಿಸಿರುವುದು ಸ್ವಾಗತಾರ್ಹ. ಅನಿವಾರ್ಯ ಸಂದರ್ಭಗಳಲ್ಲಿ ಅಲ್ಲಲ್ಲಿ ಸ್ವಲ್ಪಮಟ್ಟಿನ ವಿಸ್ತಾರಾನುವಾದ ಆಶ್ರಯಿಸಿದರೂ ಉಳಿದಂತೆ ಪಾರಿಭಾಷಿಕ ಪದಗಳು, ಗುಣ, ಸ್ವಭಾವ, ಧ್ವನಿ, ಲಯಗಳನ್ನು ಯಥಾವತ್ತಾಗಿ, ನಾಟಕಗಳಲ್ಲಿ ಬರುವ ಕಾವ್ಯಭಾಗವನ್ನಂತೂ 'ಲಿಪ್ಯಂತರ' ರೀತಿಯಲ್ಲಿ ಮೂಲದ ಭಾವವನ್ನು ಕನ್ನಡಿಗರಿಗೆ ಕಡೆದುಕೊಟ್ಟಿದ್ದಾರೆ.

(ಆಧಾರ: ಅಹೋಬಲ ಶಂಕರ ಅವರ ಜನ್ಮ ಶತಮಾನೋತ್ಸವದ ಈ ಸಂದರ್ಭದಲ್ಲಿ ಅವರ ಮಕ್ಕಳು ಪ್ರಕಟಿಸಿರುವ ಆಪ್ತ ಬರಹಗಳನ್ನುಳ್ಳ ಪುಸ್ತಕ 'ಅಹೋಬಲ ಶಂಕರ ನೆನಪುಗಳು.')

**೩. ನಾರಾಯಣಸ್ವಾಮಿ ಅಯ್ಯರ್**

ರವೀಂದ್ರ ಕಥಾಸಾಹಿತ್ಯವನ್ನು ಕನ್ನಡಕ್ಕೆ ತರುವ ಪ್ರಯತ್ನದಲ್ಲಿ ಇವರದ್ದು ಪ್ರಮುಖ ಪಾತ್ರವಿದೆ. ರವೀಂದ್ರರ 'ಕುಮುದಿನಿ' ಕಾದಂಬರಿಯ ಜೊತೆಗೆ ಉಳಿದ ಐದು ಕೃತಿಗಳನ್ನು ರವೀಂದ್ರರ ಕತೆಗಳು ಮಾಲೆಯ ಅನುವಾದಗಳಾಗಿ ಕನ್ನಡಕ್ಕೆ ಬಂದಿವೆ. ಇವರ ಅನುವಾದಗಳಲ್ಲಿ ಶಿಷ್ಟಭಾಷಾ ಶೈಲಿ ಏಕಪ್ರಕಾರವಾಗಿ ಕಂಡುಬರುತ್ತದೆ; ಅವರು ಆಯ್ದುಕೊಂಡಿರುವ ಕತೆಗಳೂ ಅವರ ಶಿಷ್ಟಭಾಷಾ ಪ್ರತೀತಿಗೆ ಒಗ್ಗುವವುಗಳೇ ಆಗಿರುವುದರಿಂದ ಸಮರ್ಥ ಭಾಷಾಂತರಕಾರರೆಂಬ ಭಾವನೆ

ಮೂಡಿಸುತ್ತವೆ. ಮೂಲನಿಷ್ಠರಾಗಿಯೂ ಅನಿವಾರ್ಯ ಇಲ್ಲವೆ ಅತ್ಯಗತ್ಯ ಎನಿಸುವ ಸಂದರ್ಭಗಳಲ್ಲಿ ಅಲ್ಪಸ್ವಲ್ಪ ಮಾರ್ಪಡಿಕೆಗೂ ಕೈಹಾಕಿ ಅನುವಾದದ ಸಮಸ್ಯೆಯನ್ನು ವಿವೇಕಪೂರ್ಣವಾಗಿ ನಿಭಾಯಿಸುತ್ತಾರೆ. ಉದಾಹರಣೆಗೆ: ಗಂಡ-ಹೆಂಡತಿಯರು ಪರಸ್ಪರ ಏಕವಚನದಲ್ಲಿ ಸಂಭಾಷಿಸುವುದು ಬಂಗಾಳಿಯ ಶಿಷ್ಟಾಚಾರ; ಇಂಥಲ್ಲಿ ಕನ್ನಡಿಗರ ಲೋಕರೂಢಿಗನುಗುಣವಾದ ಬಹುವಚನ ಬಳಸಿರುವುದನ್ನು ಗಮನಿಸಬಹುದು. ಅಯ್ಯರ್ ಅವರ ಅನುವಾದದಲ್ಲಿ ಭಾಷಾಲಾಲಿತ್ಯ ಕುಸುರಿತನ ಕಡಿಮೆ; ಆದರೆ, ಸೌಮ್ಯಭಾಷಾಂತರಕಾರರಾಗಿ ಸರಳ ಸುಮಧುರ ಶೈಲಿಯ ಭಾಷಾಂತರ ಕೃತಿಗಳನ್ನು ತಂದಿದ್ದಾರೆ.

### ೪. ಶ್ರೀ ನಾರಾಯಣ ಸಂಗಮ

ಶಾಂತಿನಿಕೇತನದ ವಿದ್ಯಾರ್ಥಿಯಾಗಿದ್ದ ಇವರು ಬಂಗಾಳಿ ಬಲ್ಲವರಾಗಿದ್ದು, ವಿಶೇಷವಾಗಿ ರವೀಂದ್ರರ ಕತೆಗಳನ್ನು ಕನ್ನಡಕ್ಕೆ ಮೂಲನಿಷ್ಠವಾಗಿ ಅನುವಾದಿಸಿದ್ದಾರೆ; ಇಡೀ ರವೀಂದ್ರರ ಎಲ್ಲ ಕತೆಗಳನ್ನು ಪರೀಶೀಲಿಸಿ, ಮಹತ್ವ ಎನಿಸಿದವುಗಳನ್ನು "ರವೀಂದ್ರನಾಥ ಠಾಕೂರರ ಇಪ್ಪತ್ತು ಕತೆಗಳು" ಹೆಸರಿನಲ್ಲಿ ಕನ್ನಡಕ್ಕೆ ಅನುವಾದಿಸಿದ್ದಾರೆ. ಈ ಹಿನ್ನೆಲೆಯಲ್ಲಿ ರವೀಂದ್ರರ ಕತೆಗಳ ಬಗೆಗೆ ಸ್ಥೂಲ ಚಿತ್ರಣ ಕೊಡುವ ಈ ಕೃತಿಯಿಂದಲೇ ಹೆಚ್ಚಿನ ಕತೆಗಳನ್ನು ಆಯ್ದುಕೊಂಡು, ಈ ಕುರಿತ ಅಧ್ಯಾಯದಲ್ಲಿ ಆದರ್ಶ ಭಾಷಾಂತರಕಾರರೆನಿಸುವಷ್ಟರ ಮಟ್ಟಿಗೆ ಯಥಾವತ್ತಾಗಿ ಮತ್ತು ಸ್ವಾರಸ್ಯಕರವಾಗಿ ಕನ್ನಡಕ್ಕೆ ಅನುವಾದಿಸಬೇಕಾದರೆ ನಾರಾಯಣ ಸಂಗಮರಂಥ ಕನ್ನಡ-ಬಂಗಾಲಿ ಎರಡೂ ಭಾಷೆಗಳಲ್ಲಿ ಪಳಗಿದ ಅನುವಾದಕರಿಗೆ ಮಾತ್ರ ಸಾಧ್ಯವಾಗಬಲ್ಲಂಥದ್ದು. ಬ್ರಿಲಿಯಂಟ್, ಸಿವಿಲ್ ಮದುವೆಯಂಥ ಮಿಶ್ರ ಇಲ್ಲವೇ ಅರಿಸಮಾಸದಂಥ ಪದಬಳಕೆ ಶೈಲಿ ಬಂಗಾಳಿಯಲ್ಲಿ ಸಹಜಶೈಲಿಯಾಗಿರುವಂತೆ ಕನ್ನಡಕ್ಕೂ ಸಹಜವೆನಿಸಿರುವುದರಿಂದ, ಮೂಲದ ಬಂಗಾಲಿ ಹಾಗೂ ರವೀಂದ್ರ ಶೈಲಿಯನ್ನು ಹಾಗೆಯೇ ತರುತ್ತಾರೆ. ಸಾಂದರ್ಭಿಕವಾಗಿ ಕನ್ನಡ ಸಹಜತೆಯ ಆಡುನುಡಿಯನ್ನೂ ಬಳಸಿಕೊಂಡು ಪರಿಣಾಮಕಾರಿ ಭಾಷಾಂತರ ನೀಡಿದ್ದಾರೆ; ಇವರು ರವೀಂದ್ರರ 'ಅಚಲಾಯತನ' ನಾಟಕವನ್ನು ಅನುವಾದಿಸಿರುವುದರ ಜೊತೆಗೆ ದ.ರಾ.ಬೇಂದ್ರೆ ಅವರ ಒಡಗೂಡಿ, ಅವರ ಭಾವಪ್ರತಿಭೆಗೆ ಇವರ ಅನುವಾದ ಪ್ರತಿಭೆಯನ್ನು ಜೋಡಿಸಿ ವೈಶಿಷ್ಟ್ಯಪೂರ್ಣ "ನೂರೊಂದು ಕವನ"ವೆಂಬ ಹೆಸರಿನಲ್ಲಿ ರವೀಂದ್ರರ ಆಯ್ದ ಗೀತೆಗಳನ್ನು ಅನುವಾದಿಸಿದ್ದಾರೆ.

### ೫. ಸ್ವಾಮಿ ಶಂಕರಾನಂದ ಸರಸ್ವತಿ

ಬಂಗಾಳಿ ಸಾಹಿತ್ಯವನ್ನು ಕನ್ನಡಕ್ಕೆ ತರುವ ಪ್ರಮುಖ ಅನುವಾದಕರಲ್ಲಿ ಇವರೂ ಒಬ್ಬರು. ಇವರು ರವೀಂದ್ರರ ಆತ್ಮಚರಿತ್ರೆ, ಪ್ರಬಂಧ, ಕತೆ, ಕಾದಂಬರಿ ಹಾಗೂ ನಾಟಕ ಪ್ರಕಾರಗಳಲ್ಲಿ ಒಂದೊಂದು ಅನುವಾದಗಳನ್ನು ತಂದಿದ್ದಾರೆ. ಬಂಗಾಳಿ ಬಲ್ಲ ಇವರು ಮೂಲ ರವೀಂದ್ರ ಸಾಹಿತ್ಯದ ರೀತ್ಯ ಪದ-ವಾಕ್ಯ ವಿನ್ಯಾಸ, ಶೈಲಿ, ಕಲಾವಂತಿಕೆಯನ್ನು ಯಥಾವತ್ತಾಗಿ ಅನುವಾದಿಸಿದ್ದಾರೆ. ಆದುದರಿಂದಲೇ ರವೀಂದ್ರರ ಸೂಕ್ಷ್ಮ ಸಂವೇದನಾಶೀಲವಾದ ರವೀಂದ್ರರ ಆತ್ಮಕತೆ 'ಜೀವನಸ್ಮೃತಿ'ಯನ್ನು 'ಬಾಳನೆನಹು' ಹೆಸರಲ್ಲಿ ರವೀಂದ್ರರೇ ಕನ್ನಡದಲ್ಲಿ ರಚಿಸಿದಂತೆ ತಂದಿದ್ದಾರೆ.

ಹಾಗೆಯೇ ವಿಚಾರ, ಚರ್ಚೆ, ಕಾವ್ಯತ್ವ, ಭಾಷೆ, ಬೌದ್ಧಿಕವಿಲಾಸ, ಮನಶ್ಶಾಸ್ತ್ರೀಯ ದೃಷ್ಟಿ, ಭಾರತೀಯ ಧರ್ಮ, ತತ್ವಶಾಸ್ತ್ರ, ಸುಧಾರಣಾವಾದ, ಅಸ್ತಿತ್ವವಾದ, ಸ್ತ್ರೀವಾದ – ಎಲ್ಲವೂ ಪರಿಪಾಕಗೊಂಡಿರುವ 'ಚತುರಂಗ'ದಂಥ ಗಂಭೀರ ಸ್ವರೂಪದ ಚಿಂತನಾ ಕಾದಂಬರಿಯನ್ನು ಯಥಾವತ್ತಾಗಿ ಕನ್ನಡಿಸುವಲ್ಲಿ ಸ್ವಾಮಿ ಶಂಕರಾನಂದ ಸರಸ್ವತಿ ಅವರು ಯಶಸ್ಸಾಗಿದ್ದಾರೆ. ಅಂತೆಯೇ ರವೀಂದ್ರರ ಮಾಗಿದ ಅವಸ್ಥೆಯಲ್ಲಿ ತಮ್ಮ ಪರಿಪೂರ್ಣ ವ್ಯಕ್ತಿತ್ವ, ಪ್ರತಿಭೆ, ಅಭಿವ್ಯಕ್ತಿಶೈಲಿ, ಬನಿಗೊಂಡು ಪದಪದಗಳಲ್ಲೂ ಅನಂತ ಅರ್ಥ ಛಾಯೆಯ ಧ್ವನಿತರಂಗಳಿರುವ ರವೀಂದ್ರರ ಕೊನೆಯ 'ತೀನ್‌ಸಂಗಿ' ಕಥಾಸಂಕಲನವನ್ನು ಸಮರ್ಥ ಅನುವಾದಕವಾಗಿ 'ಪ್ರಗತಿ ಸಂಹಾರ್ ಮತ್ತು ಇತರ ಕತೆಗಳು' ಹೆಸರಲ್ಲಿ ಕನ್ನಡಕ್ಕೆ ತಂದಿದ್ದಾರೆ.

**೬. ಎಚ್.ವಿ.ಸಾವಿತ್ರಮ್ಮ ಮತ್ತು ಎಸ್.ಅಂಬುಜಾಕ್ಷಿ ಮುಂತಾದವರು**

ರವೀಂದ್ರನಾಥ ಠಾಕೂರರ ಸಾಹಿತ್ಯವನ್ನು ಕನ್ನಡಕ್ಕೆ ತರುವಲ್ಲಿ ಮಹಿಳಾ ಸಾಹಿತಿಗಳಲ್ಲಿ ಎಚ್.ವಿ.ಸಾವಿತ್ರಮ್ಮ ಮತ್ತು ಎಸ್.ಅಂಬುಜಾಕ್ಷಿ ಅವರು ಪ್ರಮುಖರು. ವಿಶೇಷವಾಗಿ ಇವರು ರವೀಂದ್ರರ ಶಿಶುಸಾಹಿತ್ಯಕ್ಕೆ ಅತ್ಯುತ್ತಮ ಉದಾಹರಣೆಯಾಗಬಲ್ಲ 'ರಾಜರ್ಷಿ' ಕಾದಂಬರಿಯನ್ನು ಒಬ್ಬ ಮಹಿಳೆಯಾಗಿ ಅನುವಾದಕ್ಕೆ ತೊಡಗಿದುದು ಸ್ವಾಗತಾರ್ಹ. ವ್ಯಾವಹಾರಿಕ ಸ್ತರವನ್ನು ಮೀರಿದ ಹೃದಯ ಇಲ್ಲವೆ ಕರುಳಿನ ಸಂಬಂಧ ಮಿಡಿಯುವ ವಸ್ತು ಆಧಾರಿತ ಭಾವನೆಗಳನ್ನು ಉದ್ದಿಷ್ಟ ಭಾಷೆಯಲ್ಲಿ ತರಲು ಎಸ್.ಅಂಬುಜಾಕ್ಷಿಯಂಥವರ ಹೆಂಗರುಳಿನ ಅನುವಾದಕಿಯೇ ಬೇಕಾಗುತ್ತದೆ. ಹಾಗೆಯೇ ಮೂಕ ವೇದನೆಗಳನ್ನು, ಮನಸ್ಸಿನ ತುಡಿತ – ಚಂಚಲತೆಯನ್ನು, ಸಾಂಸಾರಿಕ ಬದುಕಿನೊಳಗೂ ಅಮೂರ್ತ ಬಿರುಕುಗಳನ್ನು ಮೂಲದಂತೆಯೇ 'ಪುಷ್ಪೋದ್ಯಾನ' ಕಾದಂಬರಿಯಲ್ಲಿ ಪ್ರತಿಬಿಂಬಿಸಿದ್ದಾರೆ. ಹೀಗೆಯೇ ಇಂಥ ಅಸಂಗತ ಪ್ರಜ್ಞೆಯನ್ನು ಮೀರಿ ಒಬ್ಬ ಹೆಣ್ಣು ದೃಢವಾಗುವ ಪರಿಯನ್ನು 'ವಿಭಾ' ಕಾದಂಬರಿಯಲ್ಲಿ ಚೆನ್ನಾಗಿ ಮೂಡಿಸಿದ್ದಾರೆ. ಆರಂಭಿಕವಾದ ರವೀಂದ್ರರ ಈ ಕೃತಿಯಲ್ಲಿನ ಕಾವ್ಯಾತ್ಮಕ ಪರಿವೇಶವನ್ನೂ ಹಾಗೆಯೇ ಅನುವಾದದಲ್ಲಿಯೂ ಅನುವಾದಕಿ ಉಳಿಸಿಕೊಂಡಿದ್ದಾರೆ.

ವಿಮರ್ಶಾ ಸಂಕಲನವನ್ನು 'ಪ್ರಾಚೀನ ಸಾಹಿತ್ಯ' ಹೆಸರಲ್ಲಿ ವೆಂಕಣ್ಣಯ್ಯ ಅವರು ಮೊದಲಿಗೆ ತಂದು ರವೀಂದ್ರ ಸಾಹಿತ್ಯದ ಬಗೆಗೆ ಕನ್ನಡಿಗರ ದೃಷ್ಟಿ ಹೊರಳಿಸಿರುವರು. ರಾಮಕೃಷ್ಣ ಪರಮಹಂಸರ ಆತ್ಮಚರಿತ್ರೆ ಮತ್ತು ಕೃತಿಗಳನ್ನೂ ಇವರು ಕನ್ನಡಿಸಿದ್ದಾರೆ.

ಕನ್ನಡ, ಹಿಂದಿ, ಇಂಗ್ಲಿಷ್ ಹಾಗೂ ಬಂಗಾಳಿ ಭಾಷೆಗಳಲ್ಲಿ ಅಪಾರ ಪಾಂಡಿತ್ಯ ಹೊಂದಿದ್ದ ಎ.ಆರ್.ಕೃಷ್ಣಶಾಸ್ತ್ರಿ ಅವರು ಭಾಷಾಂತರ ಕಾರ್ಯವನ್ನು ಲೀಲಾಜಾಲವಾಗಿ ಮಾಡಬಲ್ಲವರಾಗಿದ್ದರು. ಆದರ್ಶ ಭಾಷಾಂತರಕಾರ ಎಂದೆನಿಸುವಷ್ಟರಮಟ್ಟಿಗೆ 'ನಿಬಂಧಮಾಲಾ–2' ಎಂಬ ಪುಸ್ತಕದಲ್ಲಿ ರವೀಂದ್ರರ ಪ್ರಬಂಧಗಳನ್ನು ಅನುವಾದಿಸಿದ್ದಾರೆ.

ರವೀಂದ್ರರಿಂದ ಕುವೆಂಪು ಅವರೂ ಸಾಕಷ್ಟು ಪ್ರಭಾವಿತರಾಗಿದ್ದಾರೆ. ಸೃಜನಶೀಲ ಸಾಹಿತ್ಯ ರಚನೆಯಲ್ಲೇ ಹೆಚ್ಚು ತೊಡಗಿಸಿಕೊಂಡ ಇವರು ಇಂಗ್ಲಿಷ್ ಸಾಹಿತ್ಯದ ಪ್ರಭಾವದಿಂದ ಇಂಗ್ಲಿಷ್‌ನಲ್ಲೇ

ತಮ್ಮ ಆರಂಭಿಕ ಸೃಜನಶೀಲ ಸಾಹಿತ್ಯ ರಚನೆ ಮಾಡಹೊರಟು, ಅನಂತರ ಅನುವಾದದ ಒಂದು ಪ್ರಭಾವಿ ಉಪಪ್ರಕಾರವಾದ ರೂಪಾಂತರದಲ್ಲಿ ಸಿದ್ಧಹಸ್ತರೆನಿಸುತ್ತಾರೆ. ರವೀಂದ್ರರ ಹದಿನಾಲ್ಕು ಕವನಗಳನ್ನು ಹಾಗೂ ಕಾಬೂಲೀವಾಲಾ ಕಥೆಯನ್ನು ಮೂಲನಿಷ್ಠವಾಗಿ ಅನುವಾದಿಸಿದ್ದಾರೆ. ರವೀಂದ್ರರ 'ಚಿತ್ರಾಂಗದಾ'ದಿಂದ ಪ್ರಭಾವಿತರಾಗಿ ಅದೇ ಹೆಸರಿನಲ್ಲಿ ಅದರ ರೂಪಾಂತರವನ್ನು ಕನ್ನಡದಲ್ಲಿ ರಚಿಸಿದ್ದಾರೆ. ಶೇಕ್ಸ್‌ಪಿಯರ್‌ನ ನಾಟಕಗಳನ್ನು ಇಂಗ್ಲಿಷ್‌ನಿಂದ ಕನ್ನಡಕ್ಕೆ ಅನುವಾದಿಸಿದ ಮಾಸ್ತಿ ಅವರು ರವೀಂದ್ರರ ಶತಮಾನೋತ್ಸವ ಆಚರಣೆಯ ರಾಜ್ಯಸಮಿತಿಯ ಪ್ರಧಾನ ಸಂಪಾದಕತ್ವ ವಹಿಸಿ 'ವಿಶ್ವಮಾನವನೆಡೆಗೆ' ಮತ್ತು 'ರವೀಂದ್ರ ಪೂಜನ' ಕೃತಿಗಳನ್ನು (ದೇಶ-ವಿದೇಶದ ವಿದ್ವಾಂಸರ ಲೇಖನ ಸಂಗ್ರಹಗಳು) ಸಮರ್ಥ ಅನುವಾದಕರಿಂದ ರವೀಂದ್ರರ ಬದುಕು-ಬರೆಹ ಹಾಗೂ ವಿಚಾರಧಾರೆಯ ಮಹತ್ವದ ಲೇಖನಗಳನ್ನು ಕನ್ನಡಕ್ಕೆ ಅನುವಾದಿಸಿರುವುದು ರವೀಂದ್ರ ಸಾಹಿತ್ಯ ಅರ್ಥ ಮಾಡಿಕೊಳ್ಳಲು ಉಪಯುಕ್ತ ಆಕರಗಳಾಗಿವೆ. ಭಾರತೀಯ ಸಾಂಸ್ಕೃತಿಕ ಬದುಕಿನಂತೆ ತೀವ್ರವೂ, ಭಾವನಾತ್ಮಕವೂ, ಗಾಢವೂ, ಸಾಂಸಾರಿಕವೂ ಆದ; ಆದರೆ, ಆ ಕಟ್ಟಿನಾಚೆಗೂ ಪ್ರೇಮ-ಪ್ರೀತಿ-ದಾಂಪತ್ಯವನ್ನು ಒಂದು ಭಾರತೀಯ ವ್ಯವಧಾನದ ನೈತಿಕತೆಯಲ್ಲಿ ಅರಳುವ ಠಾಕೂರರ ಅಪೂರ್ವ ದಾಂಪತ್ಯ ಪ್ರೇಮಕಾದಂಬರಿಯಾದ 'ನೌಕಾಘಾತ' ಹೆಸರಲ್ಲಿ ಎಚ್.ವಿ.ಸಾವಿತ್ರಮ್ಮ ಅವರು, ಕಾದಂಬರಿಯ ಈ ಭಾವನಾತ್ಮಕ ಸುಳಿಯೊಳಗೆ ಇಳಿದು ಯಥಾವತ್ತಾಗಿ ಕನ್ನಡದಲ್ಲಿ ಮೂಡಿಸಿದ್ದಾರೆ.

ಇದೇ ರೀತಿಯಲ್ಲಿ ಸಾವಿತ್ರಮ್ಮ ಅವರು, ಪದಗಳಿಗಿಂತ ಪದಗಳ ಧ್ವನಿತರಂಗಗಳೊಳಗೆ ಹಿರಿಯ ಅರ್ಥವನ್ನು, ಆಶಯವನ್ನು, ಹೊಮ್ಮಿಸುವ ರವೀಂದ್ರರ ಕಿರುಗತೆಗಳನ್ನು 'ಚಿನ್ನದ ದೋಣಿ' ಹೆಸರಲ್ಲಿ ಮೂಲದಂತೆ ಅಡಕತೆ, ತಂತ್ರವಿನ್ಯಾಸಗಳನ್ನೂ ಸೇರಿದಂತೆ ಅನುವಾದಿಸಿದ್ದಾರೆ. ಇವರ ಅನುವಾದದಿಂದ ರವೀಂದ್ರನಾಥರ 'ಗೋರಾ' ಕಾದಂಬರಿ ಮತ್ತೊಂದು ಆವೃತ್ತಿಯಲ್ಲಿ ಬಂದಿದೆ. ರಷ್ಯನ್ ಕತೆಗಳನ್ನೂ ಇವರು ಕನ್ನಡಕ್ಕೆ ತಂದಿದ್ದಾರೆ.

ಕನ್ನಡದಲ್ಲಿ ಸಾಹಿತ್ಯ ರಚಿಸುವುದರ ಜೊತೆಜೊತೆಗೆ ಕುವೆಂಪು ಮುಂತಾದ ಶಿಷ್ಯಬಳಗವನ್ನು ಕಟ್ಟಿಕೊಂಡು ಕನ್ನಡವನ್ನು ಅವಿರತವಾಗಿ, ಯಾವುದೇ ಅವಕಾಶದಲ್ಲಿ ಬೆಳೆಸುವ ಕಾಳಜಿ ಇದ್ದವರು ಟಿ.ಎಸ್.ವೆಂಕಣ್ಣಯ್ಯ ಅವರು; ಬಂಗಾಳಿ, ಇಂಗ್ಲಿಷ್, ತೆಲುಗು ಭಾಷೆಗಳಲ್ಲೂ ಇವರು ಪ್ರಾವೀಣ್ಯತೆ ಪಡೆದಿದ್ದರು. ರವೀಂದ್ರರು ಪ್ರಖಾಂಡ ವಿಮರ್ಶಕರೂ ಆಗಿದ್ದವರು; ಅವರು ರಾಮಾಯಣ, ಮಹಾಭಾರತ, ಶಾಕುಂತಲ ಮುಂತಾದ ಕೃತಿಗಳ ಬಗೆಗೆ ಮೂಡಿಸಿರುವ ವಿಮರ್ಶೆ, ತದನಂತರದ ಭಾರತೀಯ ಪೌರಾಣಿಕ ವಸ್ತು ಆಧರಿಸಿದ ಸಾಹಿತ್ಯ ಕೃತಿಗಳು ಹೊಸ ದೃಷ್ಟಿಕೋನದಿಂದ ರಚನೆಯಾಗಲು ಪ್ರೇರಣೆಯಾದವು. ಅಂತಹ ಶಾಸ್ತ್ರೀಯ ವಿಷಯಗಳಲ್ಲಿ ಹೆಚ್ಚು ತೊಡಗಿಸಿಕೊಂಡ ಎ.ಎನ್. ನರಸಿಂಹಯ್ಯ ಅವರು ಸಂಸ್ಕೃತ, ಇಂಗ್ಲಿಷ್, ನೇಪಾಳಿ ಭಾಷೆಗಳನ್ನು ಬಲ್ಲವರಾದುದರಿಂದ ಜೊತೆಯಲ್ಲೇ ಬೇರೆಯ ಉತ್ಕೃಷ್ಟ ಸಾಹಿತ್ಯ ಕೃತಿಗಳನ್ನು ಕನ್ನಡಿಸಿ ಕನ್ನಡವನ್ನು ಸಮೃದ್ಧಗೊಳಿಸುವ ಇವರ ಪ್ರಯತ್ನದ ಹಿನ್ನೆಲೆಯಲ್ಲಿ ರವೀಂದ್ರರ ಸಾಹಿತ್ಯ ಮೀಮಾಂಸಾ ವಿಚಾರಗಳನ್ನು 'ಪ್ರಾಚೀನ

ಸಾಹಿತ್ಯ' ಹೆಸರಿನ ಕೃತಿಯಲ್ಲಿ ಅನುವಾದಿಸಿದ್ದಾರೆ. ಹಿಂದಿ, ಉರ್ದು, ಇಂಗ್ಲಿಷ್ ಭಾಷೆಗಳಲ್ಲಿ ಪ್ರವೀಣರಾದ ಡಾ.ಪಂಚಾಕ್ಷರಿ ಹಿರೇಮಠ ಅವರು 'ಕವೀಂದ್ರ–ರವೀಂದ್ರರು' ಒಂದು ಅನುವಾದ ಕೃತಿಯನ್ನು ತಂದಿದ್ದಾರೆ. ವೃತ್ತಿಯಿಂದ ಅಧಿಕಾರಿಯಾಗಿದ್ದು ಅನಂತರದಲ್ಲಿ ಕರ್ನಾಟಕ ವಿಶ್ವವಿದ್ಯಾನಿಲಯದ ಉಪಕುಲಪತಿಗಳಾಗಿದ್ದ ಸದಾಶಿವ ಒಡೆಯರ ಅವರು ರವೀಂದ್ರ ಸಾಹಿತ್ಯದ ಬಗೆಗೆ ವಿಶೇಷ ಕಾಳಜಿ ತಾಳಿ 'ರವೀಂದ್ರ ದರ್ಶನ' ಹೆಸರಿನ ಪ್ರಬಂಧ ಸಂಕಲನ ತಂದಿದ್ದಾರೆ. ಇವತ್ತಿಗೂ ಹಿಂದಿ, ಇಂಗ್ಲಿಷ್ ಹಾಗೂ ಬಂಗಾಳಿ ಮೂಲದಿಂದ ಬಂದಿರುವ ಎಂಟ್ಟತ್ತು 'ಗೀತಾಂಜಲಿ'ಯ ಅನುವಾದಗಳ ನಡುವೆ ನರೇಗಲ್ಲ ಪ್ರಹ್ಲಾದರಾಯರ ಅನುವಾದ ಯಥಾವತ್ತಾದ ಅನುವಾದವಾಗಿ ಮೂಡಿದೆ. 'ಶಿಶು ಅಥವಾ ಬಿದಿಗೆಯ ಚಂದ್ರ' ಎಂಬ ಇವರ ಮತ್ತೊಂದು ರವೀಂದ್ರರ ಕೃತಿಯ ಅನುವಾದವೂ ಇದೆ. ಮೈಸೂರು ವಿಶ್ವವಿದ್ಯಾನಿಲಯದ ಪ್ರಸಾರಾಂಗದ ನಿರ್ದೇಶಕರಾಗಿದ್ದ ಕೆ.ಟಿ.ವೀರಪ್ಪ ಅವರು ಅಮೆರಿಕ, ಕೆನಡಾ, ಇಂಗ್ಲೆಂಡ್, ಫ್ರಾನ್ಸ್, ಇಟಲಿ ದೇಶಗಳಲ್ಲಿ ಪ್ರವಾಸ ಹೂಡಿ; ರವೀಂದ್ರರ ಶೈಕ್ಷಣಿಕ ವಿಚಾರಗಳ ಬಗೆಗೆ ಪ್ರಭಾವಗೊಂಡು ರವೀಂದ್ರರ ಶೈಕ್ಷಣಿಕ ಲೇಖನಗಳನ್ನು 'ಶಿಕ್ಷಕ ಠಾಕೂರ್' ಹೆಸರಿನಲ್ಲಿ ಅನುವಾದಿಸಿದ್ದಾರೆ. ಇನ್ನಿತರ ಅನುವಾದಕರಲ್ಲಿ ರಾ.ಗಣೇಶ ಶರ್ಮಾ (ಗೋರಾ, ಅಂಚೆ–ಮನೆ ಕೃತಿಗಳ ಅನುವಾದಕರು) ಪ್ರಹ್ಲಾದ ಬಂಡೇರಾವ, ಎಂ.ಬಿ. ಬೂದಿಹಾಳ ಮಠ, ಬಿ.ಪುಟ್ಟಸ್ವಾಮಯ್ಯ, ಪಂಕಜ ಶ್ರೀನಾಥ್, ಎಲ್.ಆರ್. ಕುಲಕರ್ಣಿ ಪ್ರಮುಖರು.

**೭. ಜಿ. ಕುಮಾರಪ್ಪ**

ಕರ್ನಾಟಕ ಹೊರಗಿದ್ದು ಕನ್ನಡ ಕಟ್ಟುವ, ಬೆಳೆಸುವ ಕೆಲಸದಲ್ಲಿ ತೊಡಗಿದ್ದ ಕ್ರಿಯಾಶೀಲ ವ್ಯಕ್ತಿ ಜಿ. ಕುಮಾರಪ್ಪ. ಕೋಲ್ಕತ್ತದ ನ್ಯಾಷನಲ್ ಲೈಬ್ರರಿಯಲ್ಲಿ ಗ್ರಂಥಾಲಯಾಧಿಕಾರಿಯಾಗಿ ಎರಡು ದಶಕಗಳ ಕಾಲ, ಕೆಲಸ ನಿರ್ವಹಿಸಿ ಬಂಗಾಳಿ– ಕನ್ನಡ ಭಾಷೆ, ಸಂಸ್ಕೃತಿಯ ರಾಯಭಾರಿಯಾಗಿದ್ದರು. ಸ್ವ ಆಸಕ್ತಿಯಿಂದ ಬಂಗಾಳಿ ಭಾಷೆಯನ್ನು ಕಲಿತು ಆ ಭಾಷೆಯ ಜನಸಂಸ್ಕೃತಿಯ ಭಾಗವಾಗಿ ಬದುಕಿದರು.

ಬಂಗಾಳಿಯ ಮಹಾಶ್ವೇತಾದೇವಿ ಮುಂತಾದ ಎಡಚಿಂತಕರ ಅನೇಕ ಮೌಲಿಕ ಕೃತಿಗಳನ್ನು ಕನ್ನಡಕ್ಕೆ ಅನುವಾದಿಸಿದ್ದಾರೆ. ನಾಡಿನ ಅನೇಕ ಲೇಖಕರು ಜಿ.ಕುಮಾರಪ್ಪ ಅವರಿಂದ ಸಹಾಯ ಸಹಕಾರ ಪಡೆದಿದ್ದರು. ಅವರಲ್ಲಿ ಯು.ಆರ್.ಅನಂತಮೂರ್ತಿ, ಜಿ.ಎಸ್.ಶಿವರುದ್ರಪ್ಪ, ಶಿವಪ್ರಕಾಶ್, ಎನ್.ಎಸ್. ಲಕ್ಷ್ಮೀನಾರಾಯಣಭಟ್ಟ ಮೊದಲಾದವರು ಅವರಿಂದ ಸಹಾಯ ಸಹಕಾರ ಪಡೆದಿದ್ದರು. ದೇವಿಪ್ರಸಾದ್ ಚಟ್ಟೋಪಾಧ್ಯಾಯ, ಮಹಾಶ್ವೇತಾದೇವಿ, ಆಶಾಪೂರ್ಣಾದೇವಿ, ಸುಶೀಲಾರಾಯ್ ಹಾಗೂ ಇಂದಿರಗೋಸ್ವಾಮಿ, ಪ್ರೇಮಚಂದ್ ಮೊದಲಾದವರ ಮೂವತ್ತು ಕೃತಿಗಳನ್ನು ಕುಮಾರಪ್ಪನವರು ಕನ್ನಡಕ್ಕೆ ಅನುವಾದಿಸಿದ್ದಾರೆ.

**ತೌಲನಿಕ ಅಧ್ಯಯನ**

ಇಂದು ತೌಲನಿಕ ಅಧ್ಯಯನ ಮಹತ್ವವಾದ ಬಿರುಸಿನ ಚಟುವಟಿಕೆಯಾಗಿದೆ. 'ಭಾಷಾಂತರ'ಗಳ ನಂತರದ ತಕ್ಷಣದ ಕಾಳಜಿಯೇ ತೌಲನಿಕ ಅಧ್ಯಯನ. ವೈಜ್ಞಾನಿಕ, ತಾಂತ್ರಿಕ, ವೈಚಾರಿಕ ಮುಂತಾದ ಗದ್ಯಬರಹದ ವಿಚಾರಪೂರ್ಣ ಲೇಖನಗಳನ್ನು ಸಾಕಷ್ಟು ಭಾಷಾಂತರದ ತಾತ್ವಿಕ ತಿಳಿವಳಿಕೆ ಇರುವವರೇ ಯಥಾವತ್ತಾಗಿ ಅನುವಾದಿಸಬಹುದು. ಇಂಥವುಗಳಿಗೆ ದ್ವಿತೀಯ ಅನುವಾದ ಅನಪೇಕ್ಷಣೀಯ (ಉದಾ: ಕನ್ನಡಕ್ಕೆ ಬಂದ ರವೀಂದ್ರರ ಪ್ರಬಂಧ ಸಾಹಿತ್ಯ). ಆದರೆ, ಭಾವ, ವಸ್ತು, ಅಧ್ಯಾತ್ಮ, ವಿಚಾರ, ಗೇಯತೆ, ಲಯ, ಮಟ್ಟು, ಪ್ರಾಸ ಇತ್ಯಾದಿ ಅಂಶಗಳಿಂದ ಪರಿಪಾಕವಾದ 'ಗೀತಾಂಜಲಿ'ಯಂಥ ಕಾವ್ಯವನ್ನು ಯಥಾವತ್ತಾಗಿ ಅನುವಾದಿಸುವುದು ಕಷ್ಟಕರವೇ ಸರಿ.

ಕನ್ನಡದಲ್ಲಿ ಹಾ.ಮಾ.ನಾಯಕರ ಅಭಿಪ್ರಾಯದಲ್ಲಿ ಏಳೆಂಟು 'ಗೀತಾಂಜಲಿ' ಅನುವಾದಗಳು ಬಂದಿದ್ದರೂ ನರೇಗಲ್ಲ ಪ್ರಹ್ಲಾದರಾಯರಷ್ಟು ಮೂಲನಿಷ್ಠವಾಗಿಲ್ಲ. ಸ.ಪ. ಗಾಂವಕರ್ ಬಂಗಾಳಿ, ಇಂಗ್ಲಿಷ್, ಹಿಂದಿ ಮುಂತಾದ ಭಾಷೆಗಳಲ್ಲಿನ ಗೀತಾಂಜಲಿಗಳನ್ನು ಓದಿ ರವೀಂದ್ರನಾಥರ ಕಾವ್ಯದ ಧ್ವನಿ ಸೂಕ್ಷ್ಮತೆಗಳೆಲ್ಲವನ್ನೂ ಅನುವಾದಿಸಲು ಪ್ರಯತ್ನಿಸಿದ್ದಾರೆ. ಬಹುಮುಖ ಪ್ರತಿಭಾವಂತರಾದ ಠಾಕೂರರ ಸೂಕ್ಷ್ಮಮತಿ, ಜೀವನಾನುಭವ, ಆಶಯ-ಅರ್ಥಛಾಯೆಗಳ ಸೂಕ್ಷ್ಮ ಎಳೆಗಳನ್ನೆಲ್ಲ, ಧ್ವನಿಯನ್ನೆಲ್ಲ ಅಂತೆಯೇ ತರಬೇಕಾದರೆ ರವೀಂದ್ರನಾಥರಂಥ ಮಹಾಕವಿ ಬಹುಮುಖ ಪ್ರತಿಭಾವಂತನಾದ ಅನುವಾದಕನೇ ಬೇಕಾಗುತ್ತದೆ. ಹಾಗೆಯೇ ಕನ್ನಡಕ್ಕೆ ಠಾಕೂರರ 'ಕಾಬೂಲೀವಾಲಾ' 'ಮೋಡಬಿಸಿಲು' ಕತೆಗಳ ನಾಲ್ಕು ನಾಲ್ಕು ಅನುವಾದಗಳು ಬಂದರೆ, 'ದೃಷಿದಾನ್' 'ಲ್ಯಾಬೋರೇಟರಿ' ಕತೆಗಳ ಮೂರುಮೂರು ಅನುವಾದಗಳು ಬಂದಿವೆ. ರವೀಂದ್ರರ 'ಚಿತ್ರಾಂಗದಾ' ಬಂಗಾಳಿ-ಇಂಗ್ಲಿಷ್ ಮೂಲಗಳಿಂದೆಲ್ಲ ನಾಲ್ಕೈದು ಅನುವಾದಗಳು ಬಂದಿವೆ. 'ಯೋಗಾಯೋಗ' ಕಾದಂಬರಿ, 'ಕುಮುದಿನಿ' ಹೆಸರಲ್ಲೂ ಮತ್ತೊಂದು ಅನುವಾದವೂ, ಹಾಗೆಯೇ 'ಮುರಿದ ನೌಕಾ' ಕಾದಂಬರಿ 'ನೌಕಾಘಾತಾ' ಹೆಸರಿನಲ್ಲಿ ಮತ್ತೊಂದು ಅನುವಾದವೂ ಬಂದಿವೆ. 'ಗೋರಾ' ಕಾದಂಬರಿಯ ಎರಡು ಅನುವಾದಗಳು ಬಂದಿವೆ. ಇವುಗಳನ್ನು ಆಧರಿಸಿ ಪರಸ್ಪರ ಆಂಶಿಕವಾಗಿ ತೌಲನಿಕ ಪರಿಶೀಲನೆ ನಡೆಸುವುದರಿಂದ ಕನ್ನಡ ಅನುವಾದಕರ ಮತ್ತು ಅವರ ಆದರ್ಶ ಭಾಷಾಂತರ ಸಾಮರ್ಥ್ಯವನ್ನು ವಿಶ್ಲೇಷಣೆ ಮಾಡಬಹುದಾಗಿದೆ. ರವೀಂದ್ರರ ಕಥಾಸಾಹಿತ್ಯವನ್ನು ಕನ್ನಡಕ್ಕೆ ತರುವಲ್ಲಿ ಪ್ರಮುಖ ಪಾತ್ರ ವಹಿಸಿದ ಪ್ರಮುಖರಲ್ಲಿ ನಾರಾಯಣಸ್ವಾಮಿ ಅಯ್ಯರ್, ಅಹೋಬಲ ಶಂಕರ, ಶ್ರೀನಾರಾಯಣ ಸಂಗಮ ಅವರುಗಳು ಅಗ್ರಗಣ್ಯರು.

ವಿಜ್ಞಾನ ತಿಳಿದವರಾದ ಜೊತೆಗೆ ಪತ್ರಕರ್ತರೂ ಆಗಿದ್ದ ಅಹೋಬಲ ಶಂಕರ ಅವರು ಅನುವಾದವನ್ನು 'ಯಾಂತ್ರಿಕ' ರೀತಿಯಲ್ಲಿ ಶಬ್ದಾನುವಾದ ನೀಡುವುದಕ್ಕೆ ಇಷ್ಟಪಡದಿದ್ದರೂ ಬಂಗಾಳಿಯನ್ನೂ ಚೆನ್ನಾಗಿ ಬಲ್ಲ ಚಿದಂಬರಂ ಅವರನ್ನು ಸಹಕಾರಕ್ಕೆ ತೆಗೆದುಕೊಂಡು ಮೂಲದ ಭಾವಕ್ಕೆ ಅನುಗುಣವಾಗಿಯೇ, ಬದ್ಧವಾಗಿಯೇ ಕನ್ನಡದ ಸಹಜತೆಗೂ ಹೆಚ್ಚು ಒತ್ತುಕೊಟ್ಟು ಕನ್ನಡಿಗರಿಗೂ ಜನಾನುರಾಗಿಯಾದ ರವೀಂದ್ರ ಸಾಹಿತ್ಯವನ್ನು ಕನ್ನಡಕ್ಕೆ ಅನುವಾದಿಸಿದ್ದಾರೆ.

